# ಬದುಕು - ಬೆಳಕು

(ದಿ॥ ತಿಮ್ಮಪ್ಪ ನಾಯಕ ಮಾಸ್ತರರ ಸ್ಮರಣ ಸಂಚಿಕೆ)



ಸಂಪಾದಕ

ಡಾ॥ ಸೂರ್ಯನಾಥ ಕಾಮತ್

ಇತಿಹಾಸ ಅಧ್ಯಾಪಕ, ಬೆಂಗಳೂರು ವಿಶ್ವವಿದ್ಯಾಲಯ.



ಪ್ರಕಾಶಕರು

ಉತ್ತರ ಕನ್ನಡ ಜಿಲ್ಲಾ ಗ್ರಾಮ ಸೇವಾ ಸಮಿತಿ

ಅಂಕೋಲಾ

ಉ. ಕನ್ನಡ

# ಮುನ್ನುಡಿ

ಸತ್ಯ ಹರಿಶ್ಚಂದ್ರನ ಕತೆ ಕೇವಲ ಒಂದು 'ಕತೆ', ಸತ್ಯವ್ರತದ ಪರಾಕಾಷ್ಠೆಗೆ ಒಂದು ಕೇವಲ ಉದಾಹರಣೆ, ಎಂದು ನಾವು ಭಾವಿಸಿರಬಹುದು. ಹರಿಶ್ಚಂದ್ರ ಐತಿಹಾಸಿಕ ವ್ಯಕ್ತಿಯಲ್ಲ, ಎಂದು ತಿಳಿದಿರಬಹುದು. ಮಹಾತ್ಮರ ಆತ್ಮಚರಿತ್ರೆ "ಸತ್ಯಶೋಧನ"ದಲ್ಲೂ ಇಂಥ ಒಂದು ಜಿಜ್ಞಾಸೆ ಇದೆ. ಆದರೆ ಅಲ್ಲಿ ಸತ್ಯದ ಪರಾಕಾಷ್ಠೆಯ ಕತೆ ಇದ್ದರೆ, ಇಲ್ಲಿ ತ್ಯಾಗದ ಪರಾಕಾಷ್ಠೆಯ ಒಂದು ಉದಾಹರಣೆ ನಮಗೆ ಕಾಣಸಿಗುತ್ತದೆ. ಮಹಾತ್ಮರ ವಿಚಾರಗಳು ಮೂರ್ತಿವೆತ್ತುದು ಕಾಣುತ್ತದೆ. ಹೀಗಾಗಿರುವುದು ಶ್ರೀ ನಾಯಕ ಮಾಸ್ತರರ ಜೀವನದಲ್ಲಿ.

ಏಕಾದಶ ವ್ರತಗಳ ಆಚರಣೆಯಲ್ಲಿ ಶ್ರೀ ಮಾಸ್ತರರನ್ನು ಮೀರಿಸಿದವರು ಬೇರೆ ಜನ ಬಹಳ ಇಲ್ಲ. ಅವರು ಪದವೀಧರರು, ವಿದ್ವಾಂಸರು, ಜನಬೆಂಬಲ ಗಳಿಸಿಕೊಂಡ ತ್ಯಾಗಜೀವಿಗಳು. ಸ್ವಾತಂತ್ರ್ಯಾನಂತರ ಅವರು ಮನಸ್ಸು ಮಾಡಿದರೆ ಮಂತ್ರಿಯಾದರೂ ಆಗಬಹುದಿತ್ತು. "ಕಿಂಗ್ ಮೇಕರ್" ಆದರೂ ಆಗಬಹುದಿತ್ತು. ಆದರೆ ಈ "ಕರ್ನಾಟಕದ ಸಂತ" (ಹೀಗೆ ಶ್ರೀ ರಾಖಾಲಚಂದ್ರ ದೇ ಅವರನ್ನು ಕರೆದಿದ್ದಾರೆ) ರಿಗೆ ರಾಜಕಾರಣದಲ್ಲಿನ ಗುಂಪುಗಾರಿಕೆ, ಕಪಟ, ವಂಚನೆಯ ವ್ಯವಹಾರಗಳು ಸೇರಿಕೆಬರಲಿಲ್ಲ. ಅವರು ವಿಧಾಯಕ ಕಾರ್ಯಕರ್ತರಾಗಿಯೇ ಉಳಿದರು. ಅವರು ರಾಜಕಾರಣದಲ್ಲಿ ಉಳಿಯದ ಬಗ್ಗೆ ಶ್ರೀ ಪಿ. ಎಸ್. ಕಾಮತರು ಅಸಮಾಧಾನ ಸೂಚಿಸಿದ್ದಾರೆ. ಶ್ರೀ ಮಾಸ್ತರರು ರಾಜಕೀಯದಲ್ಲಿ ಮುಂದಾಗಿದ್ದರೆ ಸ್ವಾತಂತ್ರ್ಯಾನಂತರ ಉ. ಕನ್ನಡ ಜಿಲ್ಲೆ ಆರ್ಥಿಕವಾಗಿ ಹಿಂದುಳಿಯುತ್ತಿರಲಿಲ್ಲ, ಎಂದು ಅವರ ಭಾವನೆ. ಆ ವಿಚಾರದ ಚರ್ಚೆಮಾಡಲು ನಾನು ಸಮರ್ಥನಲ್ಲ. ಆದರೆ ಶ್ರೀ ಮಾಸ್ತರರು ನನ್ನಂಥ ಒಬ್ಬ ಇತಿಹಾಸಲೇಖಕನ, ಹಾಗೂ ನೂರಾರು ಜನರ ಗೌರವಕ್ಕೆ ಪಾತ್ರರಾಗುವ ವ್ಯಕ್ತಿಯಾಗಿ ಉಳಿಯುತ್ತಿದ್ದರೇ ಎಂಬುದು ಇಲ್ಲಿ ವಿಚಾರ ಮಾಡಬೇಕಾದ ಅಂಶ. ಈ "ಕರ್ನಾಟಕದ ಗಾಂಧಿ" ಎಂಬ ಅಭಿದಾನಕ್ಕೆ ಯೋಗ್ಯರಾದ ಅವರ ಹೆಸರು ಕೇವಲ ಮೂರು ವರ್ಷಗಳ ಹಿಂದೆ ನನ್ನ ಕಿವಿಗೆ ಬಿತ್ತು. ಎರಡೂವರೆ ವರ್ಷಗಳ ಹಿಂದೆ ಒಮ್ಮೆ ನಾನು ಅವರನ್ನು ಭೇಟಿ ಆದೆ. ಆ ಭೇಟಿ ಕೆಲವೇ ಗಂಟೆಗಳದು. "ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು" ಕೃತಿಗೆ ವಿಷಯ ಸಂಗ್ರಹಿಸಲು ಹೋದಾಗಿನದು. ಆದರೆ ಅವರ ಬಗ್ಗೆ ಹೆಚ್ಚಿನ ಮಾಹಿತಿ

ನನಗೆ ಅವರ ನಿಕಟವರ್ತಿಗಳಿಂದ ಲಭ್ಯವಾಗಿದೆ. ಈಗಾಗಲೇ "ಕರ್ನಾಟಕದ ಗಾಂಧಿ ತಿಮ್ಮಪ್ಪ ನಾಯಕ" ಎಂಬ ಕಿರು ಪುಸ್ತಕ ಇಂಡಿಯಾ ಬುಕ್ ಹೌಸ್, ಬೆಂಗಳೂರು ಇವರಿಂದ ಪ್ರಕಾಶಿತವಾಗಿದ್ದು, ಅದನ್ನು ನಾನೇ ಬರೆದುದು. ಈ ಸ್ಮೃತಿ ಸಂಚಿಕೆಯು ವಿನಾ ಸಾಧ್ಯವಾದರೆ ಇಂಗ್ಲಿಷ್‌ನಲ್ಲೂ ಒಂದು ಪುಸ್ತಕವನ್ನು ಅವರ ಕುರಿತು ಬರೆಯಬೇಕೆಂದು ನನ್ನ ಆಶೆ. ಪ್ರಕಾಶನ ಒಂದು ಸಮಸ್ಯೆ, ಅಷ್ಟೆ.

ಪರಮಧಾರ್ಮಿಕರೂ, ದೈವಭಕ್ತರೂ ಆದ ಶ್ರೀ ನಾಯಕ ಮಾಸ್ತರರು ಧರ್ಮಕ್ಕೆ ಸಂಬಂಧಪಟ್ಟ ಬಾಹ್ಯ ಲಾಂಛನ, ಔಪಚಾರಿಕ ವ್ಯವಹಾರಗಳನ್ನು ಇಟ್ಟು ಕೊಳ್ಳದ್ದು ಗಮನಿಸಬೇಕಾದ ಸಂಗತಿ. ಉದಾ: ಅವರು ಜನಿವಾರ ತೊಡುತ್ತಿರ ಲಿಲ್ಲ. ಅವರು ತಮ್ಮಿಂದ ಸ್ಫೂರ್ತಿಪಡೆದು ತಮ್ಮಂತೆ ದುಡಿಯುವ ಹತ್ತಾರು ವಿಧಾಯಕ ಕಾರ್ಯಕರ್ತರನ್ನು ಸೃಷ್ಟಿಸಿದ್ದು ಇನ್ನೊಂದು ಅವರ ಗಣ್ಯಕೊಡುಗೆ. ಇಲ್ಲಿನ ಅನ್ಯ ಬರಹಗಳಲ್ಲಿ ಅಷ್ಟೊಂದು ಮೂಡಿಬಾರದ ಎರಡು ಅಂಶಗಳನ್ನು ಇಲ್ಲಿ ನಾನು ಎತ್ತಿ ಹೇಳಿದ್ದೇನೆ.

ಉ. ಕ. ಗ್ರಾಮಸೇವಾ ಸಮಿತಿಯು ಇದರ ಪ್ರಕಾಶನಕ್ಕೆ ಮುಂದೆ ಬಾರದಲ್ಲಿ ಈ ಪುಸ್ತಕ ಹೊರಬರುತ್ತಲೇ ಇರಲಿಲ್ಲ. ಶ್ರೀ ಮಾಸ್ತರರ ಬಗ್ಗೆ ಕೃತಜ್ಞತಾಭಾವ ತಳೆದ ಶ್ರೀ ಹರಿ ಪೈ, ಶ್ರೀ ರಮಾಕಾಂತ ಮಡಗಾಂವಕರ ಮುಂತಾದ ಸಮಿತಿಯ ಕಾರ್ಯಕರ್ತರನ್ನು ಈ ಬಗ್ಗೆ ನೆನೆಯುವೆ. ಶ್ರೀ ಮ. ಗ. ಶೆಟ್ಟಿ ಅವರು ಅನೇಕರ ಪತ್ತೆ, ಅನೇಕ ಪ್ರಕಟಣೆಗಳನ್ನು ಒದಗಿಸಿ ಉಪಕರಿಸಿದ್ದಾರೆ. ನಾನು ಅಗಸ್ಟ್‌ನಲ್ಲಿ ಬಿಳಗಿ, ಸಿದ್ದಾಪುರಕ್ಕೆ ಭೇಟಿಕೊಡುವ ಪ್ರಸಂಗದಲ್ಲಿ ಸಿದ್ದಾಪುರದ ಶ್ರೀ ಗೋವಿಂದ ಪೈ ಮಂಜೈನ ಅವರು ಆತಿಥ್ಯನೀಡಿದ್ದಾರೆ, ಸ್ವತಃ ಸಾರಥ್ಯ ಮಾಡಿ, ತಮ್ಮ ವಾಹನವನ್ನು ಒದಗಿಸಿದ್ದಾರೆ. ಶ್ರೀ ವಾಮನ ಹೊದಿಕೆ ಶ್ರೀ ದೇ ಅವರ ಬರಹ ಭಾಷಾಂತರಿಸಿ ಸಹಕರಿಸಿದ್ದಾರೆ. ಸರ್ವರ ಸೇವಕ ಶ್ರೀ ಶಂಕರ ಗುಲ್ವಾಡಿ ಮಾಮಾ ಇದರ ನಿಜವಾದ ಸಂಪಾದಕರು. ಈ ವಿಷಯ ಸಂಗ್ರಹಕ್ಕೆ ಓಡಾಟ, ನನ್ನ ಪ್ರವಾಸಕ್ಕೆ ಅನುಕೂಲತೆ ಒದಗಿಸಿಕೊಡುವಿಕೆ, ಸಲಹೆಸೂಚನೆ, ಬರಹಗಳ ತಾಳೆ ನೋಡುವಿಕೆ, ಅವರು ಮಾಡದ ಕೆಲಸ ಏನು ? ಅವರ ಉಪಕಾರ ಸ್ಮರಿಸಲು ನಾನು ಯಾರು, ನನಗಿಂತ ಅವರು ದಿ॥ ಶ್ರೀ ಮಾಸ್ತರರಿಗೆ ಹತ್ತಿರದವರಾಗಿರುವಾಗ? ಮುದ್ರಣವನ್ನು ಸಕಾಲದಲ್ಲಿ ಮಾಡಿಕೊಟ್ಟ ಲಿಪಿ ಮುದ್ರಣದ ಮಾಲಿಕ ಶ್ರೀ ಕಿ. ನ. ಬಾಲಕೃಷ್ಣ ಹಾಗೂ ಅವರ ಸಿಬ್ಬಂದಿಗೆ ನನ್ನ ನೆನಕೆಗಳು. ಪಡಿಯಚ್ಚು, ಭಾವಚಿತ್ರ ಒದಗಿಸಿದ ಬೆಂಗಳೂರು ಗಾಂಧೀಭವನದ ಸಂಚಾಲಕ ಶ್ರೀ ಸರ್ದಾರ್ ... ವೆಂಕಟರಾಮಯ್ಯ, ಸರ್ವೋದಯ ಸಾಹಿತ್ಯ ಸಮಿತಿಯ ಶ್ರೀ ಕೆ. ಶ್ರೀನಿವಾಸ ... ಇವರುಗಳಿಗೆ ನಮನ. ಲೇಖನಗಳನ್ನು ಸಕಾಲದಲ್ಲಿ ಒದಗಿಸಿದ್ದ ಶ್ರೀ ಮಾಸ್ತರರ ಎಲ್ಲ ಅಭಿಮಾನಿಗಳಿಗೆ ಕೃತಜ್ಞತೆಗಳು.

ಈ ಸ್ಮರಣ ಸಂಚಿಕೆಯ ದೋಷಗಳೆಲ್ಲ ನನ್ನವು. ಇದರಲ್ಲಿನ ಗುಣಗಳೆಲ್ಲ ಶ್ರೀ ಮಾಸ್ತರರ ಘನವ್ಯಕ್ತಿತ್ವಕ್ಕೆ ಸಂಬಂಧಿಸಿದವು. ಪುಸ್ತಕವನ್ನು ಆದಷ್ಟು ಸರಳ ವಾಗಿ, ಕಡಿಮೆ ವೆಚ್ಚದಲ್ಲಿ ಮಾಡಲು ಶ್ರಮಿಸಿದೆ. ಶ್ರೀ ಮಾಸ್ತರರ ಆತ್ಮಕ್ಕೊ ಆಡಂಬರ ಸೇರದು, ಎಂಬ ವಿಚಾರ ಇಲ್ಲಿ ಗಮನಿಸಿದೆ. ಇತಿ,

ಭಾರತಾಂಬೆಯ ನಮ್ರ ಸೇವಕ
**ಸೂರ್ಯನಾಥ ಕಾಮತ್**

789, ಕೀರ್ತಿ,
XI ಮೇನ್, VI ಕ್ರಾಸ್
ಹನುಮಂತನಗರ,
ಬೆಂಗಳೂರು–19

# ಅನುಕ್ರಮಣಿಕೆ



ರಾಷ್ಟ್ರಪತಿಗಳು ಗ್ರಾಮಸೇವಾ ಸಮಿತಿಯಲ್ಲಿ. ಎಡದಿಂದ ಶ್ರೀ ಹರಿ ಪೈ, ರಾಷ್ಟ್ರಪತಿಗಳು, ಶ್ರೀ ಮಾಸ್ತರ.



ಗ್ರಾ. ಸೇ. ಸಮಿತಿಯ ಕಾರ್ಯಸಮಿತಿ ಸಭೆ. ಶ್ರೀಮಾಸ್ತರ, ಶ್ರೀ. ವಾ. ಹೊದಿಕೆ, ಶ್ರೀ ಹರಿ ಪೈ ಇತ್ಯಾದಿಗಳು ಇದ್ದಾರೆ.



ಪಾದಯಾತ್ರೆಯ ಕಾಲಕ್ಕೆ ವಿನೋಬಾಜಿಯವರ ಭಾಷಣ ಭಾಷಾಂತರಿಸುತ್ತಿರುವ ಶ್ರೀ ನಾಯಕ ಮಾಸ್ತರ. ಎಡತುದಿಯಲ್ಲಿ ಶ್ರೀಮತಿ ಮಹಾದೇವಿ ತಾಯಿ.



ಅಂತ್ಯ ದರ್ಶನ



ಗೋಕರ್ಣದಲ್ಲಿ ಭಸ್ಮಕುಂಭದ ಮೆರವಣಿಗೆ. ಕುಂಭ ಹಿಡಿದವರು ಶ್ರೀ ಗೋಪಾಲ ಶಿವ ಹೆಗಡೆ

# ಆತ್ಮ ಚರಿತ್ರೆ

## ತಿಮ್ಮಪ್ಪ ನಾಯಕ

[ಇದರಲ್ಲಿ ಭಾಗ ೧ ಶ್ರೀ ಮಾಸ್ತರರು ಬರೆದ ಅಪ್ರಕಟಿತ ಹಸ್ತಪ್ರತಿಯಿಂದ. ಅದು ಗ್ರಾಮಸೇವಾ ಸಮಿತಿಯಲ್ಲಿ ಶ್ರೀ ರಾಮಚಂದ್ರ ಭಟ್ಟರಲ್ಲಿ ಇತ್ತು. ಭಾಗ ೩ ಶ್ರೀ ಸಿದ್ದವ್ವನಹಳ್ಳಿ ಕೃಷ್ಣಶರ್ಮರು ಸಂಪಾದಿಸಿದ 'ಗಾಂಧೀ ಮತ್ತು ಕರ್ನಾಟಕದಿಂದ'. ಭಾಗ ೨ ನಾನು ಸಂಪಾದಿಸಿದ 'ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು', ಸಂಪುಟ ೧ ರಿಂದ. –ಸಂ॥]

### ಭಾಗ ೧

ನನಗೆ ಆತ್ಮ ಚರಿತ್ರೆ ಬರೆಯಲು ಒಬ್ಬಿಬ್ಬ ಮಿತ್ರರು ಆಗ್ರಹ ಮಾಡುತ್ತಾರೆ. ಆದರೆ ನನ್ನ ಆತ್ಮ ಚರಿತ್ರೆಯಿಂದ ಯಾವ ಲಾಭ ಯಾರಿಗಾಗಬಹುದು, ನಾ ಹೇಳಲಾರೆ. ನಾನು ಯಾವ ಮಹತ್ಕಾರ್ಯವನ್ನೂ ಸಾಧಿಸಿಲ್ಲ. ಅದರಂತೆ, ಆಧ್ಯಾತ್ಮಿಕ, ನೈತಿಕ ದೃಷ್ಟಿಯಿಂದ ಸಹ ನಾನು ಮಾಡಿಕೊಂಡ ಪ್ರಗತಿ ಅಷ್ಟಕ್ಕಷ್ಟೇ. ಆದರೆ ಪ್ರೇಮವು ಅಂಧವಿರುತ್ತದೆ. ಹೀಗಾಗಿ ಅವರ ಆಗ್ರಹ ಹೇಗಿದ್ದರೂ, ಎಷ್ಟೋ ದಿನಗಳಿಂದ ನನ್ನ ಜೀವನವನ್ನು ಒಂದು ಸತ್ಪಥಕ್ಕೆ ಹಚ್ಚಲು ಕಾರಣರಾದ ಅನೇಕ ಗುರುಹಿರಿಯರಿಗೆ ನನ್ನ ಶ್ರದ್ಧಾಂಜಲಿಗಳನ್ನು ಅರ್ಪಿಸುವ ಹಂಬಲ ನನ್ನಲ್ಲಿತ್ತು. ಈ ನೆವದಿಂದಲಾದರೂ, ಆ ನನ್ನ ಕರ್ತವ್ಯ ಪೂರೈಸಲು ಅವಕಾಶವಾಗುವದೆಂಬ ವಿಚಾರವು ಈ ಸಾಹಸಕ್ಕೆ ನಾನು ಹತ್ತಲು ಒಂದು ಕಾರಣ. ನನ್ನ ಇಡೀ ಜೀವನವನ್ನೇ ಪರ್ಯಾಲೋಚಿಸಿದಾಗ ನನ್ನಲ್ಲಿ ಏನಾದರೊಂದು ಸದಂಶವಿದ್ದರೆ, ಸತ್ಕಾರ್ಯವಾಗಿದ್ದರೆ ಅದಕ್ಕೆ ಈ ಅನೇಕ ಗುರುಹಿರಿಯರ ಪ್ರೇರಣೆಯೇ, ಅವರ ಸಹಾಯವೇ ಕಾರಣವೆಂದು ನನ್ನ ಅಂತಃಕರಣವು ಹೇಳುತ್ತದೆ. ಎಲ್ಲವನ್ನೂ ವಿಚಾರ ಮಾಡಲಾಗಿ, ನನ್ನದೊಂದು ಪ್ರತ್ಯೇಕ ವ್ಯಕ್ತಿತ್ವವೇ ನನಗೆ ಕಾಣುವುದಿಲ್ಲ. ಇಡೀ ವಿಶ್ವದೊಳಗಿನ ಅನೇಕಾನೇಕ ಶಕ್ತಿ–ಪ್ರವಾಹಗಳು ನನ್ನನ್ನು ರೂಪಿಸಿವೆ. ದೊಡ್ಡ ಆಲದ ಮರದ ಒಂದು ಸಣ್ಣ ಬೀಳಲು ಇಲ್ಲವೆ ಎಲೆ ಚಿಗುರಿಗೆ ಎಷ್ಟೊಂದು ವ್ಯಕ್ತಿತ್ವವೋ ಅದಕ್ಕಿಂತ ಹೆಚ್ಚಿಗೆ ವ್ಯಕ್ತಿತ್ವ ನನಗಿಲ್ಲವೆಂದು ನನ್ನ ಭಾವನೆ. ನನ್ನ ಆತ್ಮ ಚರಿತ್ರೆ ಬರೆಯುವುದೆಂದರೆ ಹೀಗೆ ಎಲ್ಲವನ್ನೂ ಪರಮಾತ್ಮ ಮಾಡಿಸುತ್ತಾನೆ; ಅವನೇ ಸೂತ್ರ ಚಾಲಕನು ಎಂಬುದರ ವಿವರಣೆಯೇ ಆಗುವದು. ಇನ್ನೊಂದು

ದೃಷ್ಟಿಯಿಂದ, ಈ ನಿಮಿತ್ತದಿಂದ ನನ್ನ ೭೨ ವರ್ಷದ ಜೀವನದ ಆಢಾವೆ ತೆಗೆಯಲು, ಮತ್ತು ಅದರಿಂದ ನನಗೆ ಏನಾದರೊಂದು ಮುಂದಿನ ಮಾರ್ಗ ಕ್ರಮಣಕ್ಕೆ ಹೆಚ್ಚಿನ ಬೆಳಕು ಕಾಣಬಹುದು ಎಂಬ ವಿಚಾರವೂ ಬರುತ್ತದೆ. ನನ್ನ ಜೀವನದ ಬಹುಭಾಗವು ಕಳೆದುದು ಹೀಗೆಯೇ. ಆದರೂ, ಜೀವನದಲ್ಲಿ ಪರಿವರ್ತನೆ ಯಾಗಲು ದೀರ್ಘಕಾಲ ಬೇಕೇ ಬೇಕು. ಹೀಗಿಲ್ಲ. ಅದು ಪ್ರೇರಣೆ, ನಿಶ್ಚಯ, ಈಶ ಕೃಪೆಯನ್ನವಲಂಬಿಸಿದೆ. ಈ ಚರಿತ್ರೆ ಬರೆಯುವ ಪ್ರಸಂಗದಲ್ಲಿ ಆಗಬಹುದಾದ ಆತ್ಮ-ವಿಶ್ಲೇಷಣೆಯ ಮೂಲಕ ಯಾವುದೊಂದು ಹೊಸ ಪ್ರೇರಣೆಯು ಸಿಗಬಹುದು, ಎಂಬುದೂ ಒಂದು ನಿರೀಕ್ಷೆ. ಇನ್ನೂ ತಟಸ್ಥಭಾವದಿಂದ ಬರೆದರೆ ಆತ್ಮಚರಿತ್ರೆಗೆ ಅರ್ಥವಿರುವದು. ಈ ತಟಸ್ಥ ವೃತ್ತಿಯು ನನಗೆ ಎಷ್ಟರ ಮಟ್ಟಿಗೆ ಸಾಧಿಸುತ್ತದೆ, ಹೇಳಲಾರೆ. ಆದರೂ ಪ್ರಯತ್ನ ಮಾಡುವೆ.

(ಈ ಬರಹ ಆರಂಭಿಸಿದ ತಾರೀಕು 9-10-68)

ಪ್ರತ್ಯೇಕ ಸ್ವತಂತ್ರ್ಯ ವ್ಯಕ್ತಿತ್ವ ನನಗಿದೆಯೆಂಬ ಭ್ರಮೆಯಿಂದ ನಾನು ನಡೆದಾಗಲೆಲ್ಲ ನನ್ನ ಹೆಜ್ಜೆ ತಪ್ಪು ಬಿದ್ದಿದೆ. ಜೀವನದಲ್ಲಿ ಬಹುತೇಕ ಕ್ಷಣಗಳು ಹೀಗೆ ಹೋಗಿವೆ. ಆದರೆ ನಾನು ಆ ವಿಶ್ವಶಕ್ತಿಯ ಕೈಯಲ್ಲಿ ಒಂದು ಆಯುಧ ಎಂಬ ಅರಿವು ಜಾಗೃತವಿದ್ದು, ಆ ಜಾಗೃತಿಯಲ್ಲಿ ನಾನು ನಡೆದ ಕೆಲವೊಂದು ಕ್ಷಣ ಗಳಲ್ಲಿ ನನ್ನಿಂದ ಸಮಾಜಕ್ಕೆ ಹಿತವಾಗಿದೆ; ನನಗೂ ಹಿತವಾಗಿದೆ. ನನ್ನ ಅಹಂ ಉನ್ಮಾದದಿಂದ ನಾನು ತಪ್ಪು ಇಟ್ಟ ಹೆಜ್ಜೆಗಳನ್ನೂ ಸಹ ಆ ವಿಶ್ವಾತ್ಮನು ತನ್ನ ಕೆಲಸಕ್ಕೆ ಉಪಯೋಗ ಮಾಡಿಕೊಳ್ಳುತ್ತಾನೆ. ಆ ಮಾತು ಬೇರೆ. ಆದರೆ ಆ ತಪ್ಪು ಹೆಜ್ಜೆಗಳಿಂದ ನನಗೂ, ಸಮಾಜಕ್ಕೂ ಹಾನಿಯಾಗಿದೆಯೆಂಬುದು ಸತ್ಯ. ಪರಮಾತ್ಮ ನಲ್ಲಿ ಒಳ್ಳೇದು, ಕೆಟ್ಟದು ಎಂಬ ಭೇದಗಳು ಲಯವಾಗುತ್ತವೆ—ಆ ಮಾತು ಬೇರೆ.

ಈ ರೀತಿ 'ಅಹಂ' 'ನಾನು' ಎಂಬ ಪ್ರತ್ಯೇಕತಾಭಾವವು ಒಂದು ಭ್ರಮೆ, ಒಂದು ಉನ್ಮಾದ, ಎಂದು ಬುದ್ಧಿಗೆ ಪ್ರತೀತವಾಗಿರುವ ಮಾತು ಬೇರೆ. ಆದರೆ ಅದು ಜೀವನದಲ್ಲಿ ಪೂರ್ಣ ಅಳವಡಿಸಿಹೋಗಿ, ಜೀವನಕ್ಕೆ ಹೊಸ ರೂಪು ಬರುವ ಮಾತು ಬೇರೆ. ನಾನು ಈ ಬುದ್ಧಿಗಾದ ಪ್ರತೀತಿಯನ್ನೇನೋ ಬರೆದೆ. ಅದರೆ ಆ ಪ್ರತೀತಿಯಿಂದ ಮನಸ್ಸು, ಭಾವನೆ, ಬುದ್ಧಿಗಳೆಲ್ಲವೂ ಪೂರ್ಣ ಪ್ರಭಾವಿತವಾಗಿ ಅವುಗಳ ಪೂರ್ಣ ಶುದ್ಧೀಕರಣವಾಗುವ ಮಾತು ಬೇರೆ. ಆ ಸಾಧನೆಯಿಂದ ಹೋಗಲು ತಪ್ಪುತ್ತ ಎಡವುತ್ತ (ಒಮ್ಮೊಮ್ಮೆ ಹೊಂಡದಲ್ಲಿಯೂ ಬಿದ್ದದುಂಟು) ಸಾಗಿರುವೆ. ಇಷ್ಟೇ ಹೇಳಬಲ್ಲೆ. ದೇವರು ಮನುಷ್ಯನು ತನ್ನ ಗುಲಾಮನಾಗಬೇಕೆಂದು ಇಚ್ಛಿಸುವುದಿಲ್ಲ; ಅದುದರಿಂದಲೇ, ಆ ಸರ್ವಶಕ್ತಿಮಾನ್ ಪರಮಾತ್ಮನು ನಮಗೆ ಅವನ ಅಪ್ಪಣೆ ಮೀರಿ ನಡೆಯುವ ಸ್ವಾತಂತ್ರ್ಯವನ್ನು ಸಹ ಕೊಟ್ಟಿರುವನು. ಒತ್ತಾಯದ ಸೇವೆ, ಒತ್ತಾಯದ ಪೂಜೆ ಅವನಿಗೆ ಬೇಡ. ಅದುದರಿಂದಲೇ ಅವನು

ನಮಗೆ ಅವನನ್ನು ತಿರಸ್ಕರಿಸುವ ಮಾರ್ಗವನ್ನು ಹಿಡಿಯಲು ಇಲ್ಲವೆ ಆತ್ಮಸಂತೋಷ ದಿಂದ ಅವನಿಗೆ ನಮ್ಮನ್ನು ಅರ್ಪಣೆ ಮಾಡಿಕೊಳ್ಳುವ ಸ್ವಾತಂತ್ರ್ಯ ನೀಡಿರುವನು. ಈ ರೀತಿ "ನಾನು" ಎಂಬ ಅರಿವಿಗೆ ಏನಾದರೂ ಅರ್ಥವಿದ್ದರೆ, ಅದು ನಾನು ಎಂಬುದನ್ನು ಮರೆಯುವುದರಲ್ಲಿಯೇ, ಎಲ್ಲವೂ ನೀನು ಎಂದು ಬಗೆದು, ಆ ರೀತಿ ನಡೆಯುವುದರಲ್ಲಿಯೇ ಇದೆ. ಹೀಗೆ ಆತ್ಮಾರ್ಪಣೆ ಮಾಡುವವರು ಗಂಗಾ ಮಾತೆಯ ನೀರನ್ನೇ ಹಿಡಿಯಲ್ಲಿ ತಕ್ಕೊಂಡು ಆಕೆಗೆ ಅರ್ಘ್ಯಪ್ರದಾನ ಮಾಡುವಂತೆ. ಅರ್ಥಾತ್, ಎಲ್ಲವೂ ಅವನ ಲೀಲೆ. ಅವನಾದರೋ ನಮ್ಮ ಅಂತರಾತ್ಮನೇ. ಈ ರೀತಿಯಾಗಿ ಅವನ ಲೀಲಾ ಮಾಯೆಯಲ್ಲಿ ಕುಣಿಸಲ್ಪಡುವ ಮತ್ತು ಕುಣಿಯುವ ಒಂದು ಜೀವದ ಜೀವನ ಕತೆಯಿದು.

ಕೊನೆಗೊಂದು ಮಾತು. ಇದನ್ನು ಕೇವಲ ಮಿತ್ರರ ಅವಲೋಕನಕ್ಕಾಗಿ ಬರೆಯುತ್ತಿರುವೆ, ಹೊರತು ಪ್ರಸಿದ್ಧಿಪಡಿಸುವ ಉದ್ದೇಶದಿಂದಲ್ಲ.

ನನ್ನ ಜನ್ಮವು ಒಂದು ಧಾರ್ಮಿಕ ಶ್ರದ್ಧೆಯ ಕುಟುಂಬದಲ್ಲಾಯಿತು. ನನ್ನ ಅಜ್ಜಿಯ ಕುರಿತು ಒಂದು ಪ್ರೇರಣಾದಾಯಕ ಘಟನೆಯನ್ನು ನನ್ನ ತಾಯಿಯವರು ನನಗೆ ಹೇಳುತ್ತಿದ್ದರು. ಅದನ್ನು ನಮ್ಮ ಆದರಣೀಯ ಕುಲಪುರೋಹಿತ (ಶ್ರೀ ಶ್ರೀನಿವಾಸಾಚಾರ್ಯ) ರಿಂದಲೂ ಕೇಳಿರುವೆ. ನನ್ನ ಅಜ್ಜನವರು ಮರಣಾಂತಿಕ ಸ್ಥಿತಿಯಲ್ಲಿದ್ದರು; ಬದುಕುವ ಆಶೆಯಿದ್ದಿಲ್ಲ. ಆಗ ನನ್ನ ಅಜ್ಜಿಯು ಸತಿ ಹೋಗುವ ಸಂಕಲ್ಪ ಮಾಡಿದಳು. ಅದಕ್ಕಾಗಿ ಎಲ್ಲ ಸಿದ್ಧತೆ ನಡೆಸಿದಳು. ಅವಳ ಸಂಕಲ್ಪ ಶಕ್ತಿಯಿಂದಲೇ ಎಂದು ಶ್ರದ್ಧಾಳು ಅಂತಃಕರಣವು ನಂಬುವದು. ಅವಳೂ ಎರಡು ದಿನ ಬೇನೆ ಬಿದ್ದು ಮರಣೋನ್ಮುಖ ಸ್ಥಿತಿ ಅವಳದಾಯಿತು. ಮತ್ತು ಅಜ್ಜನವರು ಅವಳು ಏಕಕಾಲಕ್ಕೆನ್ನುವಂತೆ ದೇಹಬಿಟ್ಟರು. ಇಬ್ಬರ ದಹನವು ಒಂದೇ ಚಿತೆಯ ಮೇಲಾಯಿತು.

ನನ್ನ ತಂದೆ ಶ್ರೀನಿವಾಸ ನಾಯ್ಕರು ಧರ್ಮಿಷ್ಠರೂ, ಪಾಪಭೀರು, ವ್ಯವಹಾರದಲ್ಲಿ ಸರಳ ಹಾಗೂ ಪ್ರಾಮಾಣಿಕ ವ್ಯಕ್ತಿಯವರಿದ್ದರು. ಮನೆಯಲ್ಲಿ ತಂದೆಯವರು ದಿನಾಲು ವಿಷ್ಣು ಸಹಸ್ರನಾಮ ಪಾರಾಯಣ ಮಾಡುತ್ತಿದ್ದರು. ಪ್ರಾತಃಕಾಲದಲ್ಲಿಯೂ ಹೊರಜಗಲಿಯ ಮೇಲೆ ಶತಪಾವಲಿ ಇಡುತ್ತಾ ದೇವರ ಸ್ತೋತ್ರಗಳನ್ನು ಹೇಳುವ ಪರಿಪಾಠ ಅವರದಾಗಿತ್ತು. ಊರಲ್ಲಿ ಪುರಾಣಪಠಣ ನಡೆಯುವಾಗ ತಪ್ಪದೆ ಕೇಳಲು ಹೋಗುತ್ತಿದ್ದರು. ನನಗೆ ಇಂಗ್ಲಿಷ್ ಶಿಕ್ಷಣಕ್ಕಾಗಿ ಕಳಿಸುವ ಮಾತು ನಡೆದಿತ್ತು. ಆಗ ನನಗೆ 10–12 ವರ್ಷ. ನನಗೆ ಹೇಳಿದರು : 'ಮಗನೇ ಕಲಿತು ವಕೀಲಿ ದಂಧೆಯೊಂದನ್ನು ಸರ್ವಥಾ ಮಾಡಬೇಡ. ಅದರಲ್ಲಿ ಸುಳ್ಳು ಇದ್ದದ್ದನ್ನು ಸತ್ಯವನ್ನಾಗಿ ತೋರಿಸಬೇಕಾಗುತ್ತದೆ' ಎಂದರು. ಅವರ

ಉಪದೇಶವು ನನ್ನ ಹೃದಯದಲ್ಲಿ ನೆಟ್ಟಿತು. ಮತ್ತು ನಾನು ನನ್ನ ಕಾಲೇಜು ಶಿಕ್ಷಣ ಮುಗಿದ ಮೇಲೆ ಸಹ ವಕೀಲಿ ವೃತ್ತಿಯು ಕಡೆ ಸ್ವಲ್ಪವೂ ಮನಸ್ಸು ಮಾಡಲಿಲ್ಲ. ನಾನು ಸುಮಾರು 9-10 ವರ್ಷದವನಿದ್ದೆ. ನಮ್ಮ ಊರಲ್ಲಿ ಎರಡನೇ ಬಾರಿ ಪ್ಲೇಗ್ ಬಂತು. ಆಗ ಊರ ಜನರು ಊರ ಹೊರಗೆ ಕೆಂಪ್ ಹೂಡಿ ಗುಡಿ ಗುಂಡಾರ ಕಟ್ಟಿಕೊಂಡು ಅಲ್ಲಿ ಹೋಗಿ ವಾಸಮಾಡಹತ್ತಿದ್ದರು. ನನ್ನ ತಂದೆಯವರು ಊರ ಹೊರಗೆ 1 ಮೈಲಿನ ಮೇಲೆ ಕೆಂಪ ಕಟ್ಟಿದರು. ಮನೆಯ ಸಾಮಾನೆಲ್ಲವನ್ನೂ ಅಲ್ಲಿಗೆ ಸಾಗಿಸಬೇಕಾಗಿತ್ತು. ನಮ್ಮದು ಸ್ವಂತ ಚಕ್ಕಡಿ ಇದ್ದಿಲ್ಲ. ಊರೊಳಗಿನ ಬಹಳಷ್ಟು ಮನೆಯವರು ತಮ್ಮ ತಮ್ಮ ಸಾಮಾನು ಕೆಂಪಿಗೆ ಸಾಗಿಸಿದರು. ನಮಗೆ ಗಾಡಿ ಸಿಗಲಿಲ್ಲ. ಊರಲ್ಲಿ ಒಂದೆರಡು ಮರಣಗಳು ಸಂಭವಿಸಿದವು. ತಂದೆಯವರು ಗಾಬರಿಯಾದರು. ಆದರೆ ಎಷ್ಟೇ ಪ್ರಯತ್ನ ಪಟ್ಟರೂ ಗಾಡಿ ಸಿಗಲೊಲ್ಲದು. ತಂದೆಯವರು ಅಸಹಾಯಕರಾಗಿ ಚಿಂತಾಮಗ್ನರಾದರು. ಆ ದಿವಸ ದೇವರ ಪೂಜೆ ಮುಗಿಸಿ ನಿತ್ಯದಂತೆ ದೇವರಿಗೆ ಸಾಷ್ಟಾಂಗ ಪ್ರಣಾಮ ಹಾಕುವಾಗ ಹೃದಯಾಂತರಾಳದಿಂದ 'ದೇವರೇ ನೀನೇ ಅನಾಥ ರಕ್ಷಕ; ನೀನೇ ನಮ್ಮನ್ನು ಕಾಯಬೇಕು' ಎಂದು ಉಚ್ಚಸ್ವರದಿಂದ ದೇವರಲ್ಲಿ ಅನನ್ಯಶರಣ ಭಾವದಿಂದ ಮೊರೆ ಇಟ್ಟರು. ನಾನು ಅವರ ಪೂಜೆ ನಡೆದಿರುವಾಗ ಎಂದಿನಂತೆ ಆ ದಿವಸವೂ ಸಮೀಪದ ಮಾಳಿಗೆಯ ಮೆಟ್ಟಲಿನ ಮೇಲೆ ಕೂತು ನಿರೀಕ್ಷಿಸುತ್ತಿದ್ದೆ. ತಂದೆಯವರು ಹೀಗೆ ಆರ್ತಸ್ವರದಿಂದ ದೇವರಿಗೆ ಶರಣು ಹೋಗಿ ಪ್ರಣಿಪಾತ ಮಾಡಿ ಎದ್ದದ್ದೇ ತಡ, ಊರ ಒಬ್ಬ ಸದ್ಗೃಹಸ್ಥರು ಮನೆಯೊಳಗೆ ಪ್ರವೇಶಿಸಿ, 'ಶೀನಪ್ಪನವರೇ, ನಿಮಗೆ ಗಾಡಿಬೇಕಿದ್ದರೆ, ಸಾಮಾನು ತಯಾರಿದೆಯೋ ಹೇಳಿ; ಗಾಡಿ ತಗೊಂಡು ಬರುತ್ತೇನೆ', ಎಂದು ಹೇಳಿದರು. ತಂದೆಯವರಿಗೆ ಆದ ಆನಂದ, ದೇವರ ಬಗ್ಗೆ ಅವರ ಉಪಕಾರ ಭಾವನೆ ಇದರ ಕಲ್ಪನೆ ನಾವು ಸಹ ಮಾಡಬಹುದು. ಇಂಥ ಘಟನೆಗಳು ನನ್ನ ಬಾಲಮನಸ್ಸಿನ ಮೇಲೆ ಆಳವಾದ ಪರಿಣಾಮ ಮಾಡಿದವು. ವೃದ್ಧಾಪ್ಯವು ಸಮೀಪಿಸಿದಂತೆ, ಅವರು ಮುಂದಿನ ಪ್ರಯಾಣದ ಬಗ್ಗೆ ವಿಶೇಷ ತಯಾರಿ ನಡೆಸಿದರು. ಅದಕ್ಕಾಗಿ ಬ್ರಹ್ಮಯಜ್ಞವನ್ನು ಹೊಸದಾಗಿ ಪ್ರಾರಂಭಿಸಿದರು. ಅದರ ಮಂತ್ರಗಳನ್ನು ಓದಿಹೇಳುವ ಕೆಲಸ ನನ್ನ ಪಾಲಿನದಿತ್ತು.

ನನ್ನ ತಾಯಿಯವರು ನಿರಕ್ಷರಿ; ಆದರೆ ಊರಲ್ಲಿ ನಡೆಯುವ ಪುರಾಣಪಠಣಕ್ಕೆ ತಪ್ಪದೆ ಹೋಗುತ್ತಿದ್ದರು. ಹೀಗಾಗಿ ಅವರು ರಾಮಾಯಣ, ಭಾರತ, ಕಥೆಗಳನ್ನು ಸಂಪೂರ್ಣ ತಿಳಕೊಂಡಿದ್ದರು. ಇಷ್ಟೇ ಅಲ್ಲ, ನಮ್ಮ ಕುಲಪುರೋಹಿತ ಪೂಜ್ಯ ಶ್ರೀನಿವಾಸಾಚಾರ್ಯರು ಬಂದಾಗ, ನನ್ನ ತಂದೆಯವರು, ಹಿರಿಯಣ್ಣನವರಿಗೆ ಅವರು ಆಯಾ ಪ್ರಸಂಗಕ್ಕನುಗುಣವಾಗಿ ಧರ್ಮ ತತ್ತ್ವಗಳನ್ನು ವಿವರಿಸುವಾಗ ತಾಯಿಯವರು ಲಕ್ಷಪೂರ್ವಕ ಅದನ್ನು ಕೇಳುತ್ತಿದ್ದರು. ಹೀಗಾಗಿ ಅವರಿಗೆ

ಧರ್ಮದ ಮೂಲಭೂತ ತತ್ತ್ವಗಳ ಪರಿಚಯವೂ ತಕ್ಕ ಮಟ್ಟಿಗಾಗಿತ್ತು. ಅವರು ನನಗೆ ರಾಮಾಯಣ, ಭಾರತ ಕಥೆಗಳನ್ನು ಹೇಳುತ್ತಿದ್ದರು. ಇಷ್ಟೇ ಅಲ್ಲ. ವ್ಯವಹಾರದ ಸೂಕ್ಷ್ಮ ಅವಲೋಕನ ಅವರಿಗಿತ್ತು. ಒಂದು ದಿನ ಅವರು ನನಗೆ ಕೆಲ ಬಡ ಕುಟುಂಬಗಳ ಶೋಷಣೆ ಹೇಗೆ ನಡೆಯುತ್ತದೆಂಬುದನ್ನು ಊರಲ್ಲಿ ನಡೆಯುವ ಸಾಲದ ಪದ್ಧತಿ (೨೦ ಕೊಳಗ ಭತ್ತಕ್ಕೆ ೨೫ ಕೊಳಗ ತಿರುಗಿ ಪಡೆಯುವ ಪದ್ಧತಿ) ಯು ಎಷ್ಟು ಅನ್ಯಾಯ ಮಾಡುತ್ತದೆ, ಇನ್ನೊಬ್ಬ ಸಾವಕಾರರು ಸಾಲ ವಸೂಲಿಗಾಗಿ ಹೇಗೆ ಒಬ್ಬರ ಮನೆ ಜಪ್ತಿ ಮಾಡಿಸಿದರು, ಇತ್ಯಾದಿ ಘಟನೆಗಳನ್ನು ಹೇಳಿದರು. ಸಾಮಾಜಿಕ ಅನ್ಯಾಯಗಳ ವಿಷಯದಲ್ಲಿ ಅವರು ನನಗೆ ಈ ರೀತಿ ಮಾಡಿಕೊಟ್ಟ ಪರಿಚಯವು ನನ್ನ ಮನಸ್ಸಿನಲ್ಲಿ ಈ ತರಹದ ಸಾಹುಕಾರಿಕೆಯ ಬಗ್ಗೆ ಒಂದು ತರಹದ ಘೃಣೆಯನ್ನು, ಬಡವರ ಬಗ್ಗೆ ಸಹಾನುಭೂತಿಯನ್ನು ಹುಟ್ಟಿಸಿತು. ನೈತಿಕ ದೃಷ್ಟಿಯಿಂದ ಇವು ಹೇಯ ಕೃತ್ಯಗಳೆಂಬ ಭಾವನೆ ಅವರ ಕಥನದಲ್ಲಿ ಮೂಡುತ್ತಿತ್ತು. ತಾಯಿಯವರು ದೇವರಲ್ಲಿ ಭಕ್ತಿ ವಿಶ್ವಾಸ ಉಳ್ಳವರು. ಧರ್ಮದ ಆಚಾರ-ವಿಚಾರಗಳನ್ನು ಕಟ್ಟುನಿಟ್ಟಾಗಿ ಪಾಲಿಸುವವರೂ ಇದ್ದರು. ಆದರೂ ಅವರಿಗೆ ಧರ್ಮವಂತರ ಅತಿಶಯತೆಯು ಸೇರುತ್ತಿದ್ದಿಲ್ಲ. ಒಮ್ಮೆ ನಮ್ಮ ಊರಲ್ಲಿ ಓರ್ವ ವೈದಿಕರು ನನ್ನ ಪ್ರಾಯದ ಹುಡುಗರಿಗೆ ದೇವಪೂಜೆಯ ಮಂತ್ರಗಳನ್ನು ವಗೈರೆ ಕಲಿಸುವ ವರ್ಗ ನಡೆಸುತ್ತಿದ್ದರು. ತಂದೆಯವರು, ನಾನೂ ಆ ವರ್ಗಕ್ಕೆ ಹೋಗಬೇಕೆಂದು ಇಚ್ಛೆ ವ್ಯಕ್ತಮಾಡಿದರು. ನನಗೆ ಶಾಲೆಯ ಶಿಕ್ಷಣಕ್ಕೆ ವ್ಯತ್ಯಯ ಬರುವದೆಂದು ತಂದೆಯವರ ಮಾತು ಸರಿಬರಲಿಲ್ಲ. ಆದರೂ ನಾನು ಮೌನ ವಾಗುಳಿದೆ. ಆದರೆ ತಾಯಿಯವರು, 'ಈ ಮಗನು ಚೆನ್ನಾಗಿ ಕಲಿಯ ಹತ್ತಿದ್ದಾನೆ, ಕಲಿಯಲಿ. ಮನೆಯಲ್ಲಿ ದೇವರ ಪೂಜೆ ಮೊದಲೇ ಕಲಿತವರಿದ್ದಾರೆ. ಅವರು ಹೇಗೂ ದೇವರ ಪೂಜೆ ಮಾಡುತ್ತಾರೆ. ಅವರೊಬ್ಬರು ಈ ಕೆಲಸದಲ್ಲಿ ಮಗ್ನ ರಾದದ್ದು ಸಾಕು', ಎಂದು ತನ್ನ ಅಭಿಪ್ರಾಯವನ್ನು ದೃಢವಾಗಿ ಪ್ರತಿಪಾದಿಸಿದರು. ತಂದೆಯವರೂ ಆಗ ಆಗ್ರಹ ಮಾಡಲಿಲ್ಲ. ಈ ರೀತಿ ಆಗ ತಾಯಿಯವರು ನನ್ನನ್ನು ಒಂದು ಸಮಸ್ಯೆಯಿಂದ ಪಾರುಮಾಡಿದರೆಂದು ನಾನು ಆಗ ಮನಸ್ಸಿನಲ್ಲೇ ಅಂದುಕೊಂಡೆ.

ಮೇಲೆ ಉಲ್ಲೇಖಿಸಿದಂತೆ, ಶ್ರೀ ಶ್ರೀನಿವಾಸಾಚಾರ್ಯರೆಂಬವರು ನಮ್ಮ ಕುಲ ಪುರೋಹಿತರಿದ್ದರು. ಅವರು ಸಂಸ್ಕೃತಜ್ಞರು. ಬಹಳೇ ನಿಸ್ಪೃಹ ವೃತ್ತಿಯವರೂ. ಉಚ್ಚ ವಿಚಾರದವರೂ, ಉಜ್ವಲ ಚಾರಿತ್ರ್ಯ ಶೀಲರೂ ಆಗಿದ್ದರು. ಅವರು ಬೆಳಗಿ ಯವರು. ನಮ್ಮ ಊರಿಂದ 8 ಮೈಲು ಆ ಊರು. ನಮ್ಮಲ್ಲಿಯ ಧರ್ಮ ಕಾರ್ಯವಿದ್ದಾಗ ಅಲ್ಲಿಂದ ಅವರು ನಡೆದು ಬರುತ್ತಿದ್ದರು—ಊಟದ ಹೊತ್ತಿಗೆ. ಆಗ ಊಟದ ನಂತರ, ಧರ್ಮತತ್ತ್ವಗಳ ಬಗ್ಗೆ ಅವರು ಆಯಾ ಪ್ರಸಂಗಕ್ಕನುಗುಣ

ವಾಗಿ ಸೂಕ್ಷ್ಮ ವಿವೇಚನೆ ಮಾಡುತ್ತಿದ್ದರು. ಅದನ್ನೆಲ್ಲ ನಾನು ಲಕ್ಷಪೂರ್ವಕ ಕೇಳುತ್ತಿದ್ದೆ. ಬಹಳೇ ಸಂಯಮಶೀಲರಿದ್ದರು. ನಮ್ಮಂಥ ಬಡವರು ಅವರ ಪೌರೋಹಿತ್ಯಕ್ಕೆ ಏನು ಕೊಟ್ಟಾರು? ಹೀಗಿದ್ದರೂ ಅವರು ಕರ್ತವ್ಯವೆಂದು ನಡೆದು ಬಂದು ತುಂಬ ಸಂತೋಷದಿಂದ, ಪ್ರಸನ್ನತೆಯಿಂದ ಕಾರ್ಯವನ್ನು ನೆರವೇರಿಸಿ ಹೋಗುತ್ತಿದ್ದರು. ಧನದ ಲೋಭವು ಸ್ವಲ್ಪವೂ ಸೋಂಕಿದ್ದಿಲ್ಲ. ಬರಬರುತ್ತಾ ನನ್ನ ಮೇಲೆ ಅವರಿಗೆ ಬಹಳ ಪ್ರೇಮ ಉಂಟಾಯಿತು. 'ಅಸಹಕಾರ' ದಲ್ಲಿ (1923) ನಾನು ಜೇಲಿನಿಂದ ಹೊರಬಂದಾಗ ಊರವರು ನನ್ನನ್ನು ಮೆರವಣಿಗೆ ಯಲ್ಲಿ ಕರೆದೊಯ್ದರು. ಆ ಕಾಲಕ್ಕೆ ಶ್ರೀನಿವಾಸಾಚಾರ್ಯರೂ ಅಲ್ಲಿದ್ದರು. ಮೆರವಣಿಗೆ ಬರಬರುತ್ತಾ, ದೇವರ ದರ್ಶನಕ್ಕಾಗಿ, ಪ್ರಾರ್ಥನೆಗಾಗಿ ದೇವಸ್ಥಾನಕ್ಕೆ ಹೋಯಿತು. ಆ ಕಾಲದಲ್ಲಿ ಅವರು ದೇವರಲ್ಲಿ ನನ್ನ ಬಗ್ಗೆ ಪ್ರಾರ್ಥನೆ ಮಾಡುವುದ ರಲ್ಲಿದ್ದರು. ಪ್ರೇಮ ಉಕ್ಕಿ ಬಂದು ನನ್ನನ್ನು ಆಲಿಂಗಿಸಿದರು. ನನ್ನ ಜೀವನ ವನ್ನು ರೂಪಿಸುವುದರಲ್ಲಿ ಅವರ ಪಾತ್ರವು ತುಂಬ ಮಹತ್ವದ್ದಿದೆ. ನನ್ನ ಜೀವನ ವನ್ನು ರೂಪಿಸುವುದರಲ್ಲಿ ನನ್ನ ಹಿರಿಯಣ್ಣ ವೆಂಕಟ್ರಮಣ ನಾಯ್ಕರ ಜೀವನವು ನನ್ನ ಮೇಲೆ ಆಳವಾದ ಸಂಸ್ಕಾರ ಮಾಡಿದೆ. ತಂದೆಯವರಂತೆ ಇವರೂ ಸರಳಜೀವಿ, ಪ್ರಾಮಾಣಿಕರು. ತಂದೆಯವರು ಮುದುಕರಿದ್ದ ಮೂಲಕ ಅಂಗಡಿ ವ್ಯಾಪಾರ–ವ್ಯವಹಾರವನ್ನು ಇವರೇ ಹೊಣೆಹೊತ್ತು ನಿರ್ವಹಿಸುತ್ತಿದ್ದರು. (18–20 ವರ್ಷ ದವರಿದ್ದಾಗಿನಿಂದಲೇ). ನನ್ನ ಮೇಲೆ ಅವರ ಪ್ರೇಮ ಬಹಳವಿತ್ತು. ತಂದೆಯವರು ತೀರಿದ ನಂತರ, ಅವರ ಆಯುಷ್ಯದೊಳಗಿನ ಕೆಲವೊಂದು ಘಟನೆಯ ಮೂಲಕ, ಅವರು ಹೆಚ್ಚಿಚ್ಚು ವಿರಕ್ತರಾಗುತ್ತಾ ಹೋದರು. ತಮ್ಮ ವ್ಯಾಪಾರವನ್ನು ಬೆಳೆಸುವ ಬುದ್ಧಿ ಕೌಶಲ್ಯವಿದ್ದರೂ, ಆ ಕಡೆಗೆ ಅವರ ಲಕ್ಷ ಕಡಿಮೆಯಾಗಿ ದೇವರ ಭಕ್ತಿಯಲ್ಲಿ ಹೆಚ್ಚಿಚ್ಚು ತನ್ಮಯರಾಗುತ್ತಾ ನಡೆದರು. ಸಂಧ್ಯಾವಂದನೆ ಹೊತ್ತಿನಲ್ಲಿ, ದೇವರ ಪೂಜೆ ಮಾಡುವಾಗ ಒಮ್ಮೊಮ್ಮೆ ಅವರು ಹೃದಯಾಂತರಾಳದಿಂದ 'ಹೇ ವೆಂಕಟೇಶಾ ನಾನು ಪಾಪಿ! ನನ್ನನ್ನು ಉದ್ಧರಿಸು' ಎಂತ ಆರ್ತನಾದದಿಂದ ಉಚ್ಚ ಸ್ವರದಲ್ಲಿ ದೇವರನ್ನು ಕರೆಯುತ್ತಿದ್ದರು. ಹೊರಗೆ ಬಂದವರು ನನಗೆ, 'ತಿಮ್ಮಪ್ಪಾ ಅಣ್ಣನು ನಿನ್ನನ್ನು ಕರೆಯುವಂತ ತೋರುತ್ತದೆ. ಹೋಗು, ಯಾತಕ್ಕೆ ಕರೆಯುತ್ತಾರೆ ನೋಡು', ಎಂತ ಹೇಳುತ್ತಿದ್ದರು. ನನಗೆ ಅವರು ದೇವರನ್ನು ಕುರಿತು ಕರೆ ಕೊಡುತ್ತಾರೆಂದು ಗೊತ್ತಿದ್ದ ಮೂಲಕ ಸುಮ್ಮನಿರುತ್ತಿದ್ದೆ. ಹೀಗೆ ಅವರು ದೇವರೊಡನೆ ಪ್ರತ್ಯಕ್ಷ ಮಾತಾಡುವಂತೆ ಕರೆ ಇರುತ್ತಿತ್ತು. ನಮ್ಮ ಊರು ತಾಲೂಕಿನ ಮುಖ್ಯ ಸ್ಥಳವಿದ್ದರೂ ಆಗ ಬಹಳ ಸಣ್ಣದೇ ಆಗಿತ್ತು. ಅಣ್ಣನವರು ದೇವಸ್ಥಾನಕ್ಕೆ ಹೋಗಿ ಬರುವಾಗ ಮತ್ತು ಊಟದ ವೇಳೆಗಳಲ್ಲಿ ಸಹ ಮೈಮರೆತವ ರಂತೆ ಪುರಂದರದಾಸ, ವಿಜಯವಿಠಲದಾಸರ ಹಾಡುಗಳನ್ನು ದೊಡ್ಡದಾಗಿ ಹಾಡುತ್ತಾ ಬರುತ್ತಿದ್ದರು. ಮೂಲದೇವರ ದೇವಸ್ಥಾನದಲ್ಲಿ ಉತ್ಸವ ನಡೆದಾಗ

ದೇವರ ಮುಂದೆ ಭಕ್ತಿಯಿಂದ ನೃತ್ಯವನ್ನು ಮಾಡುತ್ತಿದ್ದರು. ದಿನದ ಮುಖ್ಯ ವೇಳೆಯು ದೇವಸ್ಥಾನದ ದುರಸ್ತಿ, ಅಲ್ಲಿಯ ವ್ಯವಸ್ಥೆ ಇಂಥ ಕೆಲಸಗಳಲ್ಲಿಯೇ ಹೋಗುತ್ತಿತ್ತು. ಮನೆಯ ಸ್ಥಿತಿ ಬಡತನದ್ದಿದ್ದರೂ ಆ ಕಡೆ ವಿಶೇಷ ಲಕ್ಷ್ಯ ಪೂರೈಸುತ್ತಿದ್ದಿಲ್ಲ. ಅವರ ಭಕ್ತ ಹೃದಯವನ್ನು ನೋಡಿ ಶ್ರೀರಾಮಕೃಷ್ಣ ಪರಮಹಂಸರ ನೆನಪಾಗುತ್ತಿತ್ತು.

ಇನ್ನು ನನ್ನ ಎರಡನೆಯ ಹಿರಿಯಣ್ಣನವರಾದ ರಾಮಚಂದ್ರ ನಾಯ್ಕರು ಬಹಳೇ ಕರ್ಮಠರಿದ್ದರು. ವೈಷ್ಣವ ಆಹ್ನಿಕ ಆಚಾರಗಳನ್ನೆಲ್ಲ ಕಟ್ಟುನಿಟ್ಟಾಗಿ ಅಕ್ಷರಶಃ ಪಾಲಿಸುತ್ತಿದ್ದರು. ನಮ್ಮ ಕುಟುಂಬದಲ್ಲಿ ಯಾರೂ ಉಳ್ಳಾಗಡ್ಡಿ, ಬೆಳ್ಳುಳ್ಳಿ ತಿನ್ನುತ್ತಿದ್ದಿಲ್ಲ. ಮುಲಂಗಿ, ಬಸಳೆ, ಪಪಾಯಿ ನಿಷಿದ್ಧವೆಂದು ತಿನ್ನುತ್ತಿರ ಲಿಲ್ಲ. ಆದರೆ ರಾಮಚಂದ್ರನಾಯ್ಕರು ಅದಕ್ಕೂ ಮುಂದೆ ಹೋಗಿ ಬದ್ನೆಕಾಯಿ, ತೊಂಡೆಕಾಯಿ ಇಂಥವುಗಳನ್ನೂ ಸಹ ನಿಷಿದ್ಧವೆಂದು ತಿನ್ನುತ್ತಿರಲಿಲ್ಲ. ಒಮ್ಮೆ ಅವರು ನನಗೆ ಬೋಧ ಹೇಳಿ ತೊಂಡೆ, ಬದನೆ ತಿನ್ನುವುದನ್ನು ಬಿಡಿಸಿದರು. ಎರಡು ಮೂರು ತಿಂಗಳು ನಾನೂ ಬಿಟ್ಟೆ. ಮನೆಯಲ್ಲಿ ಏಕಾದಶಿ ದಿನ ಫಲಾಹಾರ ಮಾಡುತ್ತಿದ್ದರು. ಆದರೆ ರಾಮಚಂದ್ರಣ್ಣನವರು ಎರಡೂ ಏಕಾದಶಿಗಳು ಒಮ್ಮೆಲೇ ಬಂದರೂ ಪೂರ್ಣ ನಿರಾಹಾರಿಯಾಗಿರುತ್ತಿದ್ದರಲ್ಲದೆ ದಶಮಿ ದಿವಸ ಏಕಭುಕ್ತಿ. ದ್ವಾದಶಿ ದಿವಸ ಏಕಭುಕ್ತಿ, ಪಾಲಿಸುತ್ತಿದ್ದರು. ಚಾತುರ್ಮಾಸದಲ್ಲಿ ಹಾಗೂ ಅಧಿಕ ಮಾಸ ಬಂದಾಗ ಇದಕ್ಕೂ ಹೆಚ್ಚಿನ ಆಹಾರ ವ್ರತಗಳನ್ನು ಕೈಕೊಳ್ಳು ತ್ತಿದ್ದರು. ಈ ತರಹದ ವಾತಾವರಣದಲ್ಲಿ ನನ್ನ ಬಾಲ್ಯವು ಹೋದದ್ದರಿಂದ ಮುಂದೆ ಗಾಂಧೀಜಿಯವರ ಸಂಪರ್ಕದಲ್ಲಿ ಬಂದ ನಂತರ ಅಸ್ವಾದ ವ್ರತ ನಿಯಮಗಳನ್ನು ಪಾಲಿಸುವ ಸಂಕಲ್ಪ ಮಾಡುವಾಗ ನನಗೆ ಕಠಿಣವೆನಿಸಲಿಲ್ಲ.

## ನನ್ನ ಬಾಲ್ಯ

ಈ ರೀತಿ ಒಂದು ಭಾವಿಕ, ಶ್ರದ್ಧಾಳು, ಭಕ್ತಿಪರಾಯಣ ವಾತಾವರಣದಲ್ಲಿ ನನ್ನ ಬಾಲ್ಯವು ಸಾಗಿತು. ಸತ್ಯ–ಸರಳ ಜೀವನದ ಧನ್ಯತೆಯ ಅರಿವೂ ನನಗಾಯಿತು. ನನ್ನ ತಾಯಿ, ತಂದೆ, ಅಣ್ಣಂದಿರು ಪೂರ್ಣ ಪುರುಷರಿದ್ದಾರೆಂದು ಹೇಳಲಾರೆ. ಆದರೆ, ಮಾನವನ ಜೀವನದಲ್ಲಿ ಅವನ ಆತ್ಮೋನ್ನತಿಗೆ ಮೂಲಭೂತ ಅವಶ್ಯಕತೆಗಳಾದ ಶ್ರದ್ಧಾಭಕ್ತಿಯ ಸಂಪತ್ತು ಅವರಲ್ಲಿತ್ತು. ಎಲ್ಲ ನೈತಿಕ ಗುಣಗಳಲ್ಲಿ ಆದ್ಯ ಗುಣ ವಾದ ಸತ್ಯಸಂಧತೆ, ಸರಳತೆ, ಅವರಲ್ಲಿತ್ತು.

ಬಾಲ್ಯದಿಂದಲೂ ನನಗೆ ಕಲಿಯುವುದರಲ್ಲಿ ಅಭಿರುಚಿ, ಆನಂದ. ನಿಸರ್ಗ, ದೇವರು, ಪೂರ್ವಸಂಸ್ಕಾರಗಳು ಅಂತೂ ಯಾವ ಗೂಢ ಕಾರಣದಿಂದಲೋ ನಾನು

ಹುಟ್ಟಾ ವಿದ್ಯಾರ್ಜನೆಯು ಹಸಿವಿನಿಂದ ಹುಟ್ಟಿದೆ. ಹಬ್ಬದ ದಿನ ಶಾಲೆಯಿದ್ದರೂ ಹೋಗುತ್ತಿದ್ದೆ. ನಮ್ಮ ಊರು ಸಾಮಾನ್ಯ ಹಳ್ಳಿಯಷ್ಟೇ ದೊಡ್ಡದು. ಈ ಶಾಲೆಯ ವರ್ಗದಲ್ಲಿ ನಾನು ಬಹುತೇಕ, ವರ್ಗದಲ್ಲಿ ಪ್ರಥಮ ಸ್ಥಾನದಲ್ಲಿರುತ್ತಿದ್ದೆ. ಆದರೆ 9-10 ವರ್ಷದವನಾಗುವ ತನಕ ನನಗೆ ನನ್ನ ಬುದ್ಧಿಶಕ್ತಿಯ ಕುರಿತು ಅರಿವೂ, ಆತ್ಮ ವಿಶ್ವಾಸವೂ ಇದ್ದಿಲ್ಲ. ಶಿಕ್ಷಕರು ನೀನು ಈ ವರ್ಷ ಪಾಸಾಗಿಲ್ಲ. ಎಂತ ಹೇಳಿದರೂ ನಂಬುತ್ತಿದ್ದೆ. ಆದರೆ ಪ್ರತ್ಯಕ್ಷ ಪರಿಣಾಮದಲ್ಲಿ ಪರೀಕ್ಷೆಯಲ್ಲಿ ನನ್ನದು ಒಂದನೇ ನಂಬರ ಇರುತ್ತಿತ್ತು. ಈ ತರಹದ ನನ್ನ ಶಕ್ತಿಯ ಕುರಿತು ನನಗೆ ಅರಿವು ಮುಂದು ಸಹ ಆಯಿತು ಎಂದು ಹೇಳಲಾರೆ. ನನ್ನನ್ನು ಇಂಗ್ಲಿಷ್ ಶಿಕ್ಷಣಕ್ಕೆ ಕಳಿಸುವ ಮಾತು ಹೊರಟಾಗ, ನನ್ನ ತಂದೆಯವರು ನನ್ನ ಹಿರಿಯಣ್ಣನ ಹತ್ತಿರ ಹೇಳಿದರು. 'ತಿಮ್ಮಪ್ಪನ ಸ್ವಭಾವ, ಈ ವಿಷಯದಲ್ಲಿ, ಹನುಮಾನ್‌ನ ಸ್ವಭಾವದಂತೆ; ಅವನ ಶಕ್ತಿಯ ಅರಿವು ಅವನಿಗಿಲ್ಲ. ಅವನು ಚೆನ್ನಾಗಿ ಕಲಿಯುವನೆಂಬ ಬಗ್ಗೆ ಸಂಶಯವಿಲ್ಲ. ಆದರೆ ಮುಖ್ಯ ಖರ್ಚಿನ ಪ್ರಶ್ನೆಯನ್ನೇ ನಾವು ವಿಚಾರ ಮಾಡಬೇಕಾಗಿದೆ', ಎಂತ ಹೇಳಿದರು. ಶಾಲೆಯಲ್ಲಿ ಪರೀಕ್ಷೆಯ ಇನಾಮು ವರ್ಗದಲ್ಲಿ ನನಗೇ ಸಿಗುತ್ತಿತ್ತು. ಅದೊಂದು ಸಣ್ಣ ಶಾಲೆ. ಇಡೀ ಶಾಲೆಯಲ್ಲಿ 125 ವಿದ್ಯಾರ್ಥಿಗಳಿದ್ದರು. ವಿದ್ಯಾಭ್ಯಾಸದ ಜೊತೆಗೆ ನನ್ನ ಧಾರ್ಮಿಕ ಭಾವನೆಗಳು, ಭಕ್ತಿ ಶ್ರದ್ಧಾ ಗುಣಗಳು ಬೆಳೆಯಲು ನನಗೆ ತಕ್ಕ ಸಂಗಾತಿ ಸಿಕ್ಕಿದರು. ಶ್ರೀ ಪುಂಡಲೀಕ ಭಟ್ ಇವರು ನನ್ನ ಸಹಪಾಠಿಗಳು. ನಾನು ಎಂಟು ವರ್ಷದವನಿರುವಾಗ ಇಬ್ಬರೂ ರಾತ್ರಿ ಸುಮಾರು ಒಂದು ತಾಸು ಅವರ ಮಾಳಿಗೆಯ ಮೇಲೆ ದೇವರ ಫೋಟೋ ಇಟ್ಟು ಭಜನೆ ಮಾಡುತ್ತಿದ್ದೆವು. ಹಾಡುಗಳ ಅರ್ಥ ನಮಗೆ ತಿಳಿಯುವುದು ಅಷ್ಟಕ್ಕಷ್ಟೇ. ಆದರೆ ನಮ್ಮ ಭಕ್ತಿ-ಶ್ರದ್ಧೆಗಳಿಗೆ ಇದರಿಂದ ತುಂಬಾ ಪೋಷಣೆ ಸಿಕ್ಕಿತು. ಊರಲ್ಲಿ ಸಂಜೆ ಹೊತ್ತಿಗೆ ಒಂದೆರಡು ಕಡೆ ಪುರಾಣ ಹೇಳುತ್ತಿದ್ದರು—ರಾಮಾಯಣ, ಮಹಾಭಾರತ ಇತ್ಯಾದಿ. ಅಲ್ಲಿಗೂ ನಾನು ಹೋಗುತ್ತಿದ್ದೆ. ವೇ॥ ವಾಮನ ಭಟ್ಟರು, ವೇ॥ ಗೋಪಾಳ ಭಟ್ಟರು ವೇ॥ ಬಾಬಣ ಭಟ್ಟರು ಬಹಳೇ ಆಕರ್ಷಕ ರೀತಿಯಲ್ಲಿ ಪುರಾಣ ಹೇಳುತ್ತಿದ್ದರು. ಇವರೆಲ್ಲರ ಧಾರ್ಮಿಕ ಜೀವನವೂ ಊರಲ್ಲಿ ಆದರ್ಶ ಪ್ರಾಯವಾಗಿತ್ತು. ಆದ್ದರಿಂದ ಅವರ ಮಾತಿನ ಬೋಧೆಯು ಜನರ ಮನಸ್ಸಿನ ಮೇಲೆ ಉತ್ತಮ ಪರಿಣಾಮ ಮಾಡುತ್ತಿತ್ತು. ಮುಂದೆ ಶ್ರೀ ಶಾಂತಾರಾಮ ಭಟ್ಕಳಕರ ಇವರು ಶಾಲೆಯಲ್ಲಿ ನನ್ನ ಸಹಪಾಠಿಗಳು. ಅವರ ತಂದೆಯವರು ಬಹಳೇ ವಿದ್ಯಾವಂತರು. ವಿವಿಧ ಜ್ಞಾನ ಭಂಡಾರ ಅವರಲ್ಲಿತ್ತು. ಪುಸ್ತಕ ಮಾರಾಟದ ಅಂಗಡಿಯೂ ಅವರದಿತ್ತು. ಶಾಂತಾರಾಮನು ನಾನು ರಾಮಾಯಣ, ಭಾರತ, ಹರಿಶ್ಚಂದ್ರ ಕಾವ್ಯ, ನಳ ಚರಿತ್ರೆ, ಧ್ರುವ ಚರಿತ್ರೆ ಇತ್ಯಾದಿ ಕೂಡಿ ಓದುತ್ತಿದ್ದೆವು.

ಹತ್ತು ವರ್ಷದವನಾಗಿದ್ದಾಗ ನನ್ನ ಉಪನಯನವಾಯಿತು. ಕೆಲದಿನಗಳಲ್ಲಿ ಮನೆಯಲ್ಲಿ ಪ್ರತಿನಿತ್ಯ ರಾತ್ರಿ ನಾನು ಮನೆಯಲ್ಲಿ ಸ್ತೋತ್ರದ ಪಠ್ಯ ಪುಸ್ತಕಗಳನ್ನು ತೆಗೆದುಕೊಂಡು ಬೇರೆ ಬೇರೆ ದೇವರ ಸ್ತುತಿಗಳನ್ನು ಪಾರಾಯಣ ಮಾಡುತ್ತಿದ್ದೆ. ತಂದೆಯವರು ನನ್ನ ಸ್ಪಷ್ಟವಾದ ಉಚ್ಚಾರಗಳನ್ನು ಕೇಳಿ ಆನಂದ ವ್ಯಕ್ತ ಮಾಡುತ್ತಿದ್ದರು.

ನಾನು ಹುಟ್ಟಾ ಶೀಘ್ರ ಕೋಪಿ. ಸಿಟ್ಟು ಸಿಡುಕುತನ ಬಹಳ. ವಿದ್ಯಾರ್ಜನೆಯ ಹಸಿವು, ಅದರಂತೆ ಈ ಸಿಟ್ಟು, ಸಿಡುಕುತನ ಜನ್ಮತಃ ನನ್ನಲ್ಲಿ ಬಂದವು. ಪೂರ್ವ ಸಂಸ್ಕಾರವೋ ನಿಸರ್ಗದ ಕೃಪೆಯೋ ಯಾವದೆಂದು ನಾನು ಹೇಳಲಾರೆ. ಆದರೆ, ಯಾರ ಮೇಲಾದರೂ ನನ್ನ ಸಿಟ್ಟು ತೆಗೆಯುವ ಸಾಹಸ ಬಾಲ್ಯದಲ್ಲಿದ್ದಿಲ್ಲ. ತಾಯಿಯವರ ಮೇಲೆ ಅದು ಕೇಂದ್ರೀಕೃತವಾಗುತ್ತಿತ್ತು. ನನ್ನ ಬತ್ತಳಿಕೆಯಲ್ಲಿ ಅವಾಚ್ಯ ಬೈಗಳ ಬಾಣಗಳನ್ನು ಸಾಕಷ್ಟು ನಾನು ಸಂಗ್ರಹ ಮಾಡಿಕೊಂಡಿದ್ದೆ. ಮತ್ತು ತಾಯಿಯವರ ಮೇಲೆ, ಒಮ್ಮೊಮ್ಮೆ ಚಿಕ್ಕತಾಯಿಯವರ ಮೇಲೆ ಈ ಬಾಣಗಳ ಸುರಿಮಳೆಗರೆಯುತ್ತಿದ್ದೆ. ನಾನು ಎಲ್ಲರಿಗೂ ಚಿಕ್ಕವನು ಹಾಗು ಕೊನೆಯ ಮಗನಾಗಿದ್ದುದರಿಂದ ಅವರು ಎಲ್ಲವನ್ನೂ ಸಹನ ಮಾಡುತ್ತಾ ಇದ್ದರು. ಆದರೆ ಒಂದು ದಿನ ವಿಕೋಪಕ್ಕೆ ಹೋಯಿತು. ನಾನು 8 ವರ್ಷದವನಿರಬೇಕು. ಸಂಜೆಗೆ ಶಾಲೆಯಿಂದ ಬರುತ್ತಿದ್ದೆ. ಮನೆಯ ಸಮೀಪ ಬರುತ್ತಲೇ ನನ್ನ ತಾಯಿಯ ದನಿಯು ಒಂದು ನೆರೆಮನೆಯ ಮಾಳಿಗೆ ಮೇಲಿಂದ ಕೇಳಿಬಂತು. ನಾನು ನೆಟ್ಟಗೆ ಮಾಳಿಗೆ ಏರಿದೆ. ಅಲ್ಲಿ ಒಂದು ಆರತಿ ಸಮಾರಂಭಕ್ಕಾಗಿ ನೆರೆಹೊರೆಯ ಬಹಳ ಸ್ತ್ರೀಯರು ನೆರೆದಿದ್ದರು. ತಾಯಿಯವರಿಗೆ ಕೂಡಲೇ ಮನೆಗೆ ಬಾ ಮತ್ತು ನನಗೆ ತಿಂಡಿಕೊಡು, ಎಂದು ಆಗ್ರಹ ಮಾಡಹತ್ತಿದೆ. ಅವರು ಸಮಾರಂಭ ಬಿಟ್ಟು ಬರುವುದಿಲ್ಲವೆಂಬುದನ್ನು ನೋಡಿ, ಎಲ್ಲರ ಮುಂದೆ ನನ್ನ ಬೈಗಳ ಬಾಣಗಳನ್ನು ಒಂದರ ಹಿಂದೆ ಒಂದು ಅವರ ಮೇಲೆ ಬಿಟ್ಟೆ. ಎಲ್ಲ ಸ್ತ್ರೀಯರು ಕೇಳಿ ಬಹಳ ಸಿಟ್ಟು ಮಾಡಿದರು. ಮುಂದೆ ಈ ಸಂಗತಿ ನನ್ನ ಹಿರಿಯಣ್ಣನವರ ಕಿವಿಗೆ ಹೋಯಿತು. ಅವರು ಕೂಡಲೇ ನನ್ನನ್ನು ಮನೆಯ ಹಿಂದಿನ ಬಾಜುವಿಗೆ ಕರಕೊಂಡು ಹೋಗಿ, ಅಲ್ಲಿಯೇ ಸಮೀಪದಲ್ಲಿದ್ದ ದಾಳಿಂಬ ಮರದ ಸಣ್ಣ ಚೂಪಾದ ರೆಂಬೆಯನ್ನು ತೆಗೆದುಕೊಂಡು, ನನ್ನನ್ನು ಚೆನ್ನಾಗಿ ಥಳಿಸಿದರು. ಮತ್ತು ಇಂಥ ಬೈಗುಳನ್ನು ಪುನಃ ಉಚ್ಚರಿಸಲಿಕ್ಕಿಲ್ಲೆಂದು ನನ್ನಿಂದ ಕಬೂಲಿ ತಕ್ಕೊಂಡು ನನ್ನನ್ನು ಬಿಟ್ಟರು. ಅಂದಿನಿಂದ ನನ್ನ ಬೈಗುಳ ಬಾಣಗಳು ಮೊಂಡಾದವು. ಬೈಗಳು ಕಡಿಮೆಯಾದವು.

ಜ್ಯೋತಿಷ್ಯದಲ್ಲಿ ವಿದ್ವಾಂಸರೆಂದೆನಿಸಿಕೊಂಡ ಒಬ್ಬ ಬ್ರಾಹ್ಮಣರು ಒಮ್ಮೆ ಊರಲ್ಲಿ ಬಂದಿದ್ದರು. ಅಲ್ಲಲ್ಲಿ ಜನರು ಅವರಿಗೆ ಮನೆಯವರ ಜಾತಕಗಳನ್ನು

ತೋರಿಸುತ್ತಿದ್ದರು. ನನ್ನ ತಂದೆಯವರೂ ಅವರ ವಿದ್ಯೆಯಿಂದ ಪ್ರಭಾವಿತರಾಗಿರಬೇಕು. ಅವರನ್ನು ಮನೆಗೆ ಕರೆತಂದು, ಎಲ್ಲ ಮಕ್ಕಳ ಜಾತಕ ತೋರಿಸಿದರು. ಆ ಸಮಯದಲ್ಲಿ ತಾಯಿಯವರೊಂದಿಗೆ ನಾನು ಸಮೀಪದ ಒಳಗಿನ ಕೋಣೆಯಲ್ಲಿ ಕೂತು ಜ್ಯೋತಿಷಿಯ ಮಾತುಗಳನ್ನು ಕುತೂಹಲದಿಂದ ಕೇಳುತ್ತಿದ್ದೆವು. ನನ್ನ ಜಾತಕ ಕೈಗೆ ಬಂದೊಡನೆ ಒಂದೆರಡು ನಿಮಿಷ ಅದರ ಮೇಲೆ ತನ್ನ ದೃಷ್ಟಿಯನ್ನು ಹಾಯಿಸಿ, 'ಇವನು ಸಣ್ಣ ಮೆಣಸಿನಕಾಯಿ ಇದ್ದಾನೆ'ಂದೂ ಹೇಳಿದರು. ಅದೇ ಕಾಲಕ್ಕೆ ಅಜ್ಜನ ಹೆಸರನ್ನು ಮುಂದೆ ತಂದರೆ ಇವನೇ ತರಬೇಕು, ಎಂಬ ಮಾತನ್ನು ಸಹ ಹೇಳಿದರು. ನನಗೆ ಆ ಕಾಲದಲ್ಲಿ ಜಾತಕದಲ್ಲಿ ನಂಬುಗೆ ಇತ್ತು. ಈಗಲೂ ಅದರ ಕುರಿತು ಅಪನಂಬಿಕೆಯಿದೆಯಂತಲ್ಲ. ಪ್ರಾರಬ್ಧವನ್ನು ಕೆಲಮಟ್ಟಿಗೆ ಅದು ಹೇಳುತ್ತಿರಬಹುದು. ಆದರೆ ನಮ್ಮ ಪುರುಷಾರ್ಥದಿಂದ ಅದನ್ನು ಜಯಿಸುವುದು ನಮ್ಮ ಕೈಯಲ್ಲಿದೆ. ಈ ಮಾತನ್ನು ನಾನು ದೃಢವಾಗಿ ನಂಬಿರುವೆನಾದ್ದರಿಂದ, ಜಾತಕದ ಕುರಿತೂ ನನಗೆ ಮಹತ್ವವಿಲ್ಲ. ಇಷ್ಟೇ ಅಲ್ಲ, ನಮ್ಮ ಕುಲಪುರೋಹಿತ ಶ್ರೀನಿವಾಸಾಚಾರ್ಯರು ನಮಗೆ ಹೇಳಿದ್ದರು: ಜ್ಯೋತಿಷ್ಯ ಶಾಸ್ತ್ರದಲ್ಲಿ ಸಹ ಯೋಗಿಗೆ ಗ್ರಹಗಳ ಬಾಧೆ ತಟ್ಟುವುದಿಲ್ಲವೆಂದು ಹೇಳಲಾಗಿದೆ, ಎಂದು. ಅವರು ಸಹ ಜಾತಕ ವಿದ್ಯೆಯಲ್ಲಿ ಘನ ವಿದ್ವಾಂಸರೇ ಇದ್ದರು. ಅರ್ಥಾತ್ ಮನುಷ್ಯನು ಗೀತೆಯಲ್ಲಿ ಹೇಳಿದ ಸ್ಥಿತ–ಪ್ರಜ್ಞತೆಯ ಸಾಧನೆಯಲ್ಲಿ ಮುಂದರಿದಂತೆ ಅವನು ಭೌತಿಕ–ಆದಿದೈವಿಕ, ಅನುಕೂಲ–ಪ್ರತಿಕೂಲತೆಗಳಿಂದ ಅಲಿಪ್ತನಾಗಿರುವ ಸಾಮರ್ಥ್ಯ ಅವನಲ್ಲಿ ಬೆಳೆಯುವದು.

## ದೇಶಭಕ್ತಿ

ಹಿಂದೆ ಶಾಂತಾರಾಮ ಭಟ್ಕಳಕರ ಈ ನನ್ನ ಸಹಪಾಠಿಯ ಸತ್ ಸಹವಾಸದಿಂದ ನನಗೆ ಸದ್ಗ್ರಂಥಗಳ ವಾಚನದ ಸಂಧಿಯು ಲಭಿಸಿದ ಸಂಗತಿಯನ್ನು ಉಲ್ಲೇಖಿಸಿರುವೆ. ಅವರ ಮನೆಯಲ್ಲಿ ನಾನು ಬಹಳ ವೇಳೆ ಕಳೆಯುತ್ತಿದ್ದೆ. ಅವರ ತಂದೆಯವರು 'ಕೇಸರಿ' ಮುಂತಾದ ವರ್ತಮಾನ ಪತ್ರಗಳನ್ನು ತರಿಸುತ್ತಿದ್ದರು. ಬಂಗಾಲದ ಇಬ್ಭಾಗದ ಕುರಿತು ವಂಗಭಂಗ ಆಂದೋಳನವು ಜೋರಿನಿಂದ ನಡೆದಾಗ, ಸಂಜೆ ಹೊತ್ತಿಗೆ ಅವರಲ್ಲಿ ಆ ಊರಿನ ದೇಶಾಭಿಮಾನಿ ಜನರ ತಂಡವು ನೆರೆಯುತ್ತಿತ್ತು. "ಕೇಸರಿ" ಯಂಥ ವರ್ತಮಾನ ಪತ್ರಗಳ ಸಾಮೂಹಿಕ ವಾಚನ–ಚರ್ಚೆ ಇತ್ಯಾದಿ ನಡೆಯುತ್ತಿತ್ತು. ಅದನ್ನು ನಾನು ಲಕ್ಷ್ಯಪೂರ್ವಕ ಕೇಳುತ್ತಿದ್ದೆ. 'ವಂದೇ ಮಾತರಂ' ಘೋಷಣೆಗಾಗಿ ಛಟಕಿ ಶಿಕ್ಷೆಕೊಟ್ಟಾಗ ಅಲ್ಲಿಯ ಯುವಕರು "ಇನ್ನೊಮ್ಮೆ ವಂದೇ ಮಾತರಂ ಹೇಳುತ್ತೇನೆ. ಮತ್ತೊಂದು ಛಟಕಿ ಹೊಡೆ", ಎಂದು ಹೇಗೆ ದಿಟ್ಟತನದಿಂದ ಅಧಿಕಾರಿಗೆ ಹೇಳುತ್ತಿದ್ದರು, ಇಂಥ ಸಂಗತಿಗಳನ್ನು ಕೇಳಿ ನಮ್ಮಿಬ್ಬರ ಅಂತಃಕರಣದಲ್ಲೂ ದೇಶಾಭಿಮಾನದ ಜ್ಯೋತಿಯು ಜಾಗೃತವಾಗುತ್ತಿತ್ತು. ಸ್ವದೇಶಿ

ಆಂದೋಲನದ ಬಗ್ಗೆ ಅಲ್ಲಿ ಚರ್ಚೆ ನಡೆಯುತ್ತಿತ್ತು. ಆಗ ನಾವಿಬ್ಬರೂ ಸಕ್ಕರೆ ತಿನ್ನುವದು ಬಿಟ್ಟೆವು. ಚೌತಿಹಬ್ಬದಲ್ಲಿ ಪಟಾಕ್ಷಿಗೆ ಸಹ ಬಹಿಷ್ಕಾರ ಹಾಕಿದೆವು. ಒಂದು ದಿನ ನಮ್ಮ ಊರ ಹೊರಗಿರುವ ದೊಡ್ಡ ಆಟದ ಬೈಲಿನಲ್ಲಿ ಸಿರ್ಸಿಯ ಓರ್ವ ಗೃಹಸ್ಥರ ವ್ಯಾಖ್ಯಾನವಾಯಿತು. ಅವರು ಆಗಿನ ಮುನ್ಸಿಪಲ್ ಶಾಲೆಯ ಹೆಡ್‌ಮಾಸ್ತರರಂತ ಕೇಳಿದ ನೆನಪು. ಆ ವ್ಯಾಖ್ಯಾನ ಕೇಳುವ ಸಂಧಿ ನನಗೆ ಸಿಕ್ಕಿತ್ತು. ಅವರು ಭಾರತದ ಹಿಂದಿನ ವೈಭವ, ವಿದ್ಯಾರಣ್ಯರು ಬಂಗಾರದ ಮಳೆಗರೆದದ್ದು, ಇತ್ಯಾದಿ ವರ್ಣಿಸಿದರಲ್ಲದೆ, ಭಾರತೀಯರ ಪೋಷಾಕು ಎಷ್ಟು ಶ್ರೇಷ್ಠ, ನಾವು ಶರ್ಟು ವಗೈರೆ ಹಾಕುವುದು ಮೂರ್ಖತನ ಇತ್ಯಾದಿ ಮಾತುಗಳನ್ನು ಸಹ ಹೇಳಿದರು. ಆ ವ್ಯಾಖ್ಯಾನವನ್ನು ನಾನು ಕೇಳಿದೆ. ರಾತ್ರಿ ಮನೆಯಲ್ಲಿ ಊಟಕ್ಕೆ ಕೂತಾಗ ಈ ವ್ಯಾಖ್ಯಾನದ ಕೆಲಮುಖ್ಯ ಮಾತುಗಳನ್ನು ನಮ್ಮ ತಂದೆಯವರಿಗೆ ಹೇಳಲಾಗಿ ಅವರು ಹಿಂದಿನ ಬಗಲಬಂಡಿ ಅಂಗಿಯು ಹೇಗೆ ಆರೋಗ್ಯಕ್ಕೆ ಹಿತಕರ ವಿತ್ತು, ಈಗಿನ ಫ್ಯಾಷನ್ ಹೇಗೆ ನಿರುಪಯುಕ್ತ, ಎಂಬ ಮಾತನ್ನು ದೃಢೀಕರಿಸಿದರು.

ಸುಮಾರು ಇದೇ ಸಮಯದಲ್ಲಿ ನಮ್ಮ ನೆರೆಯ ಸಿರಸಿಯಲ್ಲಿ ಓರ್ವ ಸಾಹುಕಾರರು ಮೊಟ್ಟಮೊದಲು ಭತ್ತದ ಗಿರಣಿ ಪ್ರಾರಂಭಿಸಿದರು. ಅಣ್ಣನವರು ಈ ಸಮಾಚಾರವನ್ನು ತಂದೆಯವರಿಗೆ ಹೇಳಲಾಗಿ ತಂದೆಯವರು 'ಊರಲ್ಲಿ ಬತ್ತ ಕುಟ್ಟಿ ಎಷ್ಟೋ ಬಡಜನರು ಹೊಟ್ಟೆ ತುಂಬಿಕೊಳ್ಳುತ್ತಿದ್ದರು. ಅವರ ಹೊಟ್ಟೆಯ ಮೇಲೆ ಗದೆ ಬಂತು', ಎಂದು ಉದ್ಗಾರ ತೆಗೆದರು. ಈ ಮಾತು ನನ್ನ ಮನಸ್ಸಿನಲ್ಲಿ ನೆಲೆಸಿತು. ನನ್ನ ತಂದೆಯವರಿಗೆ ರಾಜಕಾರಣದ ಅಭಿರುಚಿ ಇದ್ದಿಲ್ಲ. ರಾಷ್ಟ್ರೀಯ ಭಾವನೆಯು ಅರಿವು ಅವರಲ್ಲಿದ್ದಿಲ್ಲ. ಓರ್ವ ಸರಳ ಜೀವನ ನಡೆಸುವ ಮಾನವತಾ ಹೃದಯಕ್ಕೆನಿಸುವ ಉದ್ಗಾರಗಳನ್ನು ಅವರು ತೆಗೆಯುತ್ತಿದ್ದರು.

ಹೀಗೆ ಕನ್ನಡ ಐದನೆಯ ಇಯತ್ತೆ ಮುಗಿಸಿ ಆರನೆಯ ಇಯತ್ತೆಯಲ್ಲಿ ಕಾಲಿಟ್ಟಿದ್ದೆ. ನಮ್ಮ ಊರಲ್ಲಿ ಆಗ ಕನ್ನಡ ಏಳನೆಯ ಇಯತ್ತೆಯ ನಂತರ ಮುಂದೆ ಯಾವ ಶಿಕ್ಷಣಕ್ಕೂ ಅವಕಾಶವಿದ್ದಿಲ್ಲ. ನಮ್ಮ ಬಡತನದ ಮೂಲಕ ಮುಂದಿನ ಶಿಕ್ಷಣದ ವಿಚಾರ ಮಾಡುವದು ಶಕ್ಯವಿದ್ದಿಲ್ಲ. ನನ್ನ ತಂದೆಯವರಾದರೋ ಈ ಕುರಿತು ಹೆಚ್ಚಿನ ವಿಚಾರ ಮಾಡುವ ಪರಿಸ್ಥಿತಿಯಿರಲಿಲ್ಲ. ನನ್ನ ಅಣ್ಣಂದಿರಿಬ್ಬರೂ ಕನ್ನಡ ೨-೩ ನೆಯ ಇಯತ್ತೆ ಮುಗಿಸಿದ್ದರು. ಶಿಕ್ಷಣ ಕ್ಷೇತ್ರದ ವಿಚಾರಗಳೇ ನಮ್ಮ ತಂದೆಯವರಿಗಾಗಲೀ, ಹಿರಿಯಣ್ಣನವರಿಗಾಗಲೀ ಇದ್ದಿರಲಿಲ್ಲ. ಹೀಗಾಗಿ ನಾನು ಹೆಚ್ಚೆಂದರೆ ಕನ್ನಡ ಮುಲ್ಕಿ ಪರೀಕ್ಷೆಗೆ ಕೂಡಬಹುದಿತ್ತು. ನನ್ನ ವಿದ್ಯಾರ್ಜನೆಯ ಹಸಿವನ್ನು ಈ ಪರಿಸ್ಥಿತಿಯಲ್ಲಿ ಅಷ್ಟರಿಂದಲೇ ತೃಪ್ತಿಪಡಿಸಿಕೊಳ್ಳಬೇಕಿತ್ತು. ನಮ್ಮ ಕನ್ನಡ ಶಾಲೆಯ ಆಗಿನ ಹೆಡ್‌ಮಾಸ್ತರರು ಸರಿಯಾಗಿ ಶಾಲೆಗೆ ಬರುತ್ತಿರಲಿಲ್ಲ. ಅವರು ಬಾಕಿ ರೀತಿ ಒಳ್ಳೆಯವರೇ ಇದ್ದರು. ಕಲಿಸುವುದರಲ್ಲೂ ಪ್ರವೀಣರು.

ಆದರೆ ಶಾಲೆಗೇ ಬರುತ್ತಿರಲಿಲ್ಲ. ಆಗಿನ ಪರಿಸ್ಥಿತಿಯಿಲ್ಲಿ ಊರ ಜನರು ಕೂಡ ಈ ಬಗ್ಗೆ ಅಜ್ಞಾನದ ಮೂಲಕ ಸುಮ್ಮನೇ ಇರುತ್ತಿದ್ದರು. ಹುಡುಗರಲ್ಲಿ ಆ ಹೆಡ್ ಮಾಸ್ತರರಿಗೆ ಜುಗಾರ ಆಡುವ ವ್ಯಸನವಿದೆಯೆಂದು ತಿಳುವಳಿಕೆಯಾಗಿದ್ದಿತು. ಈ ರೀತಿಯಾಗಿ ಶಾಲೆಯ ಆಗಿನ ನಮ್ಮ ಮುಖ್ಯ ಅಧ್ಯಾಪಕರಿಂದಲೂ ಯಾವುದೇ ಮುಂದಿನ ದಾರಿಯ ಬಗ್ಗೆ ಮಾರ್ಗದರ್ಶನ ಸಿಗುವಂತಿಲ್ಲ. ಹೀಗಾಗಿ ನನ್ನ ಬೌದ್ಧಿಕ ವಿಕಾಸವು ಅಲ್ಲಿಗೇ ನಿಂತು ಹೋಗುತ್ತಿತ್ತು. ಆದರೆ ದೇವರ ಸಂಕಲ್ಪವೇ ಬೇರೆ ಇದ್ದಿರಬೇಕು. ಅನಿರೀಕ್ಷಿತವಾಗಿ ಪರಿಸ್ಥಿತಿಯಲ್ಲಿ ಒಮ್ಮಿಂದೊಮ್ಮೆ ಪರಿವರ್ತನೆ ಯಾಯಿತು. ಮತ್ತು ನನ್ನ ಜೀವನದ ಮುಂದಿನ ಮಾರ್ಗ ಕ್ರಮೇಣ ಒಂದು ವಿಶಿಷ್ಟರೂಪ ಪಡೆಯಿತು. ಇದರಿಂದ ಪರಿಸ್ಥಿತಿಯು ಮಾನವನ ಜೀವನದಲ್ಲಿ ಹೇಗೆ ಮಹತ್ ಸ್ಥಿತ್ಯಂತರಗಳನ್ನು ತಂದೊಡ್ಡುತ್ತದೆ ಎಂಬ ಸಂಗತಿಯು ನನಗೆ ಮನದಟ್ಟಾಗುತ್ತದೆ.

## ಹೈಸ್ಕೂಲಿಗೆ

ಕುಮಟೆಯಲ್ಲಿ ನಾರಾಯಣ ಸುಬ್ರಾವ ಕಾಮತ್ ಎಂಬವರು ಅಲ್ಲಿಯ ಮ್ಯುನಿಸಿಪಲ್ ಇಂಗ್ಲಿಷ್ ಶಾಲೆಯ ಹೆಡ್‌ಮಾಸ್ತರರಿದ್ದರು. ಕೆಲ ಕಾರಣಗಳ ಮೂಲಕ ಅವರಿಗೆ ಆ ಸ್ಥಳಕ್ಕೆ ತ್ಯಾಗಪತ್ರ ಕೊಡಬೇಕಾಯಿತು. ಅವರು ಕಲಿಸುವ ಕಲೆಯ ಬಗ್ಗೆ ಪ್ರಸಿದ್ಧರಿದ್ದರು. ಊರೊಳಗಿನ ಅವರ ಅಭಿಮಾನಿಗಳೂ ಮಿತ್ರರೂ ಸ್ವತಂತ್ರ ಒಂದು ಶಾಲೆಯನ್ನು ಸ್ಥಾಪಿಸಿ ಅವರ ಚಾಲಕತ್ವದಲ್ಲಿ ನಡೆಸುವ ವಿಚಾರ ಮಾಡಿದರು. ಮತ್ತು ಅವರೆಲ್ಲರ ದೃಢ ನಿರ್ಧಾರದ ಮೂಲಕ ಶಾಲೆಯು ಅಸ್ತಿತ್ವದಲ್ಲಿ ಬಂತು. ಹಾಯಸ್ಕೂಲ ವರ್ಗಗಳೂ ಅದರಲ್ಲಿ ತೆರೆಯಲಾದವು. 'ಬಡವರ ಮಕ್ಕಳಿಗೆ ಮಾಫೀ ವಗೈರೆಕೊಟ್ಟು ಅಲ್ಲಿ ಉತ್ತೇಜನ ಕೊಡಲಾಗುತ್ತದೆ; ಗೀತೆಯಂಥ ಧರ್ಮ ಗ್ರಂಥಗಳ ಪಠಣ ಮಾಡಿಸಲಾಗುತ್ತದೆ; ಈ ಹೊಸ ಶಾಲೆಯ ಶಿಕ್ಷಕರೆಲ್ಲರೂ ಶಿಕ್ಷಣ ಪ್ರೇಮದಿಂದ, ಸೇವಾಭಾವದಿಂದ ಬಂದವರಿದ್ದು ಕಲಿಸುವ ಕಲಸದಲ್ಲಿ ತುಂಬಾ ಉತ್ಸಾಹದಿಂದ ದುಡಿಯುತ್ತಾರೆ', ಹೀಗೆ ಆ ಶಾಲೆಯ ಪ್ರಶಂಸೆ ಸಮ್ಮೂರ ತನಕ ಹಬ್ಬಿತು. ಹೀಗಿದ್ದರೂ ನಮ್ಮ ಮನೆಯವರಿಗೆ ಇದೆಲ್ಲಾ ಸಮಾಚಾರ ತಿಳಿಯುವಷ್ಟು ಅವರು ಜನರಲ್ಲಿ ಬೆರೆತಿರಲಿಲ್ಲ. ನಮ್ಮ ನೆರೆಯ ಇಬ್ಬರು ವಿದ್ಯಾರ್ಥಿಗಳ ಮನಸ್ಸಿನಲ್ಲಿ ಇಂಗ್ಲಿಷ್ ಕಲಿಯಬೇಕೆಂಬ ಆಕಾಂಕ್ಷೆ ಯುಂಟಾಯಿತು. ಒಬ್ಬರಂತೂ ಬಡವರಿದ್ದರೂ ಕುಮಟೆಗೆ ಹೋಗಿ ಅಲ್ಲಿಯ ಓರ್ವ ಸಿರಿವಂತರ ಮನೆಯಲ್ಲಿ ಉಳಕೊಂಡು ಕಲಿಯಹತ್ತಿದರು. ಮತ್ತೊಬ್ಬರು ಹರಿ ದಾಮೋದರ ಬಿಳಗಿ (ಮಡಗಾಂವಕರ); ಇವರು ಮನೆಯಲ್ಲಿ ತಕ್ಕಮಟ್ಟಿಗೆ ಶ್ರೀಮಂತರು. ಅವರ ಕಲಿಯುವ ತೀವ್ರ ಇಚ್ಛೆಯನ್ನು ನೋಡಿ ಅವರ ಅಣ್ಣ ನವರು ಖಾಸಗಿ ಶಿಕ್ಷಕನೊಬ್ಬನನ್ನು ಇಟ್ಟು ಊರಲ್ಲಿ ಒಂದು ವರ್ಷದಲ್ಲಿ ಮೂರು

ಇಯತ್ತೆ ಮುಗಿಸಿ, ಅನಂತರ ಕುಮಟೆ ಶಾಲೆಗೆ ಹೋಗುವದು ಹೆಚ್ಚು ಯುಕ್ತ ವಾಗುವದು; ಅದರಿಂದ ೨ವರ್ಷ ಉಳಿಸಿದಂತಾಗುವದು; ಖರ್ಚು ಕಡಿಮೆ ಬರುವದು, ಎಂತ ವಿಚಾರ ಮಾಡಿದರು. ಹರಿ ಇವರು ಕನ್ನಡ ೬-೭ ಇಯತ್ತೆ ತನಕ ಕಲಿತಿದ್ದ ಮೂಲಕ ಒಂದು ವರ್ಷದಲ್ಲಿ ಮೂರು ಇಯತ್ತೆಗಳ ಅಭ್ಯಾಸ ಮುಗಿಸುವುದು ಕಠಿಣವಿದ್ದಿಲ್ಲ. ಆದರೆ ಖಾಸಗಿ ಶಿಕ್ಷಕನೆಂದು ತಾಲೂಕ್ ಕಛೇರಿಯ ಒಬ್ಬ ಸ್ಕೂಲ್ ಫಾಯಿನಲ್ ಪಾಸಾದ ಕ್ಲಾರ್ಕನನ್ನು ನೇಮಿಸಿಕೊಳ್ಳುವ ವಿಚಾರ ಮಾಡಿದರು. ಆದರೆ ಒಬ್ಬ ವಿದ್ಯಾರ್ಥಿಯ ಸಲುವಾಗಿ ಅವರು ಬಂದರೆ ಅವರಿಗೆ ಕೊಡಲಾಗುವ ಪ್ರತಿಫಲವು ಸಾಕಷ್ಟೆನಿಸದೆ ಅವರು ಬರಲು ಒಪ್ಪಲಿಕ್ಕಿಲ್ಲ. ಆದರೆ ಇಬ್ಬರು ವಿದ್ಯಾರ್ಥಿಗಳಾದರೂ ಇದ್ದರೆ ಅವರಿಗೆ ಆಕರ್ಷಕವಾಗಬಹುದು, ಎಂದು ವಿಚಾರ ಹಾಕಿ, ಹರಿ ಇವರ ಅಣ್ಣನವರು ನನ್ನ ತಂದೆಯವರಿಗೆ, ಅಣ್ಣನವರಿಗೆ ನನ್ನನ್ನು ಸಹ ಖಾಸಗೀ ವರ್ಗಕ್ಕೆ ಸೇರಿಸಲು ಪ್ರೇರೇಪಿಸಿದರು. ಇಲ್ಲಿ ಮೂರು ಇಯತ್ತೆ ಮುಗಿಸಿದ ನಂತರ ನನಗೆ ಕುಮಟೆಯಲ್ಲಿ ಮಾಫಿ ಸಿಗಬಹುದು; ಊಟದ ವ್ಯವಸ್ಥೆ ಬಗ್ಗೆ ಸಹ ಸಹಾಯ ಸಿಗಬಹುದು, ಈ ಹೊಸದಾಗಿ ಸ್ಥಾಪನೆಯಾದ ಶಾಲೆಯಲ್ಲಿ, ಹೀಗೆ ಮಾತು ನಡೆದು ನನಗೆ ಈ ಖಾಸಗೀ ಶಿಕ್ಷಣದ ವರ್ಗಕ್ಕೆ ಕಳಿಸುವ ನಿಶ್ಚಯವಾಯಿತು. ಈ ರೀತಿಯಾಗಿ, ಏನೊಂದು ದೈವೀ ಘಟನೆಯಿಂದ ಎಂಬು ವಂತೆ, ನನ್ನ ಮುಂದಿನ ಶಿಕ್ಷಣದ ದ್ವಾರ ತೆರೆಯಿತು. ಇದೆಲ್ಲವನ್ನೂ ವಿಚಾರ ಮಾಡಲಾಗಿ ಪರಿಸ್ಥಿತಿಯ ಪ್ರತಿಕೂಲತೆ ಅನುಕೂಲತೆಗಳು ಯಾರೊಬ್ಬರ ಜೀವನದಲ್ಲಿ ಹೇಗೆ ನಿರ್ಣಾಯಕ ಅಂಶ ಆಗುತ್ತದೆಂಬುದು ನನಗೆ ಈಗಲೂ ಈ ಬಗ್ಗೆ ವಿಚಾರ ಮಾಡಿದಾಗ ಅನಿಸುತ್ತದೆ

ಮೇಲಿನ ವಿಸ್ತೃತ ವಿವರಣೆಯಿಂದ, ಕೇವಲ ಇಂಗ್ಲಿಷ್ ಶಿಕ್ಷಣದಿಂದ ನನ್ನ ಜೀವನವು ಕೃತಾರ್ಥವಾಯಿತೆಂದು ನಾನು ತಿಳಿಯುತ್ತೇನೆಂದು ತಮ್ಮ ಕಲ್ಪನೆ ಯಾಗುವ ಸಂಭವವಿದೆ. ಆದರೆ ಮಹಾತ್ಮಾ ಗಾಂಧಿಯವರ ತ್ಯಾಗಮಯಿ ಆಂದೋಳನದ ಝಂಝಾವಾತವು ನನ್ನನ್ನು ಹೊಡೆದೆಬ್ಬಿಸದಿದ್ದರೆ ನಾನು ಈ ಇಂಗ್ಲಿಷ್ ಶಿಕ್ಷಣದ ಮೂಲಕವೇ ಯಾವ ಮೋಹಜಾಲದಲ್ಲಿ ಬಿದ್ದು ನನ್ನ ನಿಜ ವಿಕಾಸಕ್ಕೆ ಭಂಗ ತಂದುಕೊಂಡು ಜೀವನವನ್ನು ವ್ಯರ್ಥಗೊಳಿಸುತ್ತಿದ್ದೆನೆಂಬ ವಿಚಾರ ವನ್ನು ಸ್ಮರಿಸಬೇಕಾಗಿದೆ. ನೌಕರಿಗಿಂತ ಜ್ಞಾನಾರ್ಜನವೇ ನನ್ನ ಸ್ವಭಾವಕ್ಕೆ ಆಕರ್ಷಕವಾಗಿದ್ದರೂ, ಇಂಗ್ಲಿಷ್ ಶಿಕ್ಷಣದಿಂದುಂಟಾಗುವ ಆಗಿನ ಪ್ರಲೋಭನ, ನನ್ನ ಮನೆಯ ಪರಿಸ್ಥಿತಿ, ಸುತ್ತಲಿನ ವಾತಾವರಣ ಇವುಗಳನ್ನೆಲ್ಲ ನೆನಪಿಗೆ ತಂದುಕೊಂಡರೆ ನನಗೆ ದೊರಕಿದ ಇಂಗ್ಲಿಷ್ ಶಿಕ್ಷಣದ ಸಂಧಿಯೇ ನನ್ನ ಜೀವನವನ್ನು ಸ್ವಾರ್ಥದ ಪರಿಧಿಗೆ ಪಚ್ಚಲು ಕಾರಣವಾಗುವ ಸಂಭವವೇ ಹೆಚ್ಚಿತ್ತು. ಇಂಗ್ಲಿಷ್ ಶಿಕ್ಷಣ ಪಡೆಯುವವರೂ ಈ ತ್ಯಾಗಯಜ್ಞದಲ್ಲಿ ಭಾಗವಹಿಸಿ ಉತ್ತಮ ಪಾತ್ರವನ್ನು

ಆಡಿದ್ದಾರೆ. ಆದ್ದರಿಂದ ಗಾಂಧೀಜಿಯವರ ಕರೆಗೆ—ನಾನು ಇಂಗ್ಲಿಷ್ ಶಿಕ್ಷಣ ಪಡೆಯದೆ ಇದ್ದರೆ—ನಾನು ಓಗೊಡುತ್ತಿದ್ದೆನೋ, ಕೊಟ್ಟರೆ ಎಷ್ಟರ ಮಟ್ಟಿಗೆ ಕೊಡಬಹುದಿತ್ತು, ಇದು ಕೇವಲ ತರ್ಕದ ವಿಷಯ. ಇಂಗ್ಲಿಷ್ ಶಿಕ್ಷಣದಿಂದ ನನಗೆ ಸಿಗುವ ಅನುಕೂಲ ಪರಿಸ್ಥಿತಿ ಉದ್ಭವಿಸಿದ ಕುರಿತು ವಿಸ್ತೃತ ಬರೆದದ್ದರ ಕಾರಣ ಇಷ್ಟೇ: ಅದು ನನ್ನ ಜೀವನದಲ್ಲಿ, ಆ ಒಂದು ಅನಿರೀಕ್ಷಿತ ಹಾಗೂ ಮಹತ್ವದ ಸ್ಥಿತ್ಯಂತರವನ್ನು ತಂದಿತು; ಗಾಂಧೀಜಿಯವರ ಪುಣ್ಯ ಪ್ರಭಾವದ ಬಲ ನನಗೆ ಸಿಗದೆ ಇದ್ದರೆ ಇಂಗ್ಲಿಷ್ ಶಿಕ್ಷಣದಿಂದ ನನ್ನ ಜೀವನ ಶ್ರೇಯಾಭಿವೃದ್ಧಿ ಜೀವನ ವಾಗದೆ ಪ್ರೇಯಾರ್ಥಿಯ ಜೀವನವಾಗುವ ಸಂಭವ ಹೆಚ್ಚಿತ್ತೇ ಎಂದು ನನ್ನ ಮನೋದೌರ್ಬಲ್ಯ ಅರಿತಿದ್ದ ನನಗನಿಸುತ್ತದೆ. ಗಾಂಧೀಜಿಯವರ ಪಾವನ ಸಂಪರ್ಕದಿಂದಲೇ ನನ್ನ ಅಲ್ಪ ಬುದ್ಧಿಶಕ್ತಿಯನ್ನು ಸೇವಾ ಮಾರ್ಗದಲ್ಲಿ ತೊಡಗಿಸಿ ಜೀವನವನ್ನು ಕೃತಾರ್ಥಗೊಳಿಸುವ ಅವಕಾಶ ನನಗೆ ದೊರೆಯಲೂ ನನ್ನ ಜ್ಞಾನಾರ್ಜನೆಯ ಹಸಿವು ಸನ್ಮಾರ್ಗಕ್ಕೆ ಕಿಂಚಿತ್ತಾದರೂ ಉಪಕಾರವಾಗಲು ಸಹಾಯವಾಯಿತು. ಈ ಎಲ್ಲ ವಿಚಾರಗಳಿಂದ ಮಾನವನ ಜೀವನವನ್ನು ವಿಶ್ವ-ಶಕ್ತಿಗಳು ಹೇಗೆ ರೂಪಿಸುತ್ತವೆ—ತನ್ನ ಜೀವನವನ್ನು ರೂಪಿಸುವಲ್ಲಿ ಅವನ ಸ್ವಂತದ ಪಾತ್ರವು ಎಷ್ಟು ಅಲ್ಪವಾಗಿರುವುದು—ಎಂದು ನನಗನ್ನಿಸುತ್ತದೆ. ಇನ್ನು ಇತರ ವ್ಯಕ್ತಿಗಳ ಅನುಭವ ಬೇರೇನೇ ಇರಬಹುದು. ಆದರೂ ನಾನು ವಿಚಾರ ಮಾಡಿದ ಮಟ್ಟಿಗೆ ಸಮುದ್ರದೊಳಗಿನ ತೆರೆಗಳಿಗೆ ಎಷ್ಟೊಂದು ಸ್ವತಂತ್ರ ಅಸ್ತಿತ್ವವಿದೆಯೊ ಅದಕ್ಕೂ ಹೆಚ್ಚಿನ ಸ್ವಾತಂತ್ರ್ಯ ಮಾನವ ವ್ಯಕ್ತಿಗಿದೆಯೆಂದು ನನಗನಿಸುವುದಿಲ್ಲ.
We are not; He alone is..... Under cover of free will He leaves us a margin so wholly inadequate as to provide only mirth for Himself at our expense..... If we will be, let us dance to the tune of His Bansi (ಬನ್ಸಿ)-Let us do His will and all would be well.

ಈ ರೀತಿಯಾಗಿ ಶ್ರೀ ಹರಿ ಬಿಳಗಿ ಮತ್ತು ನನ್ನ ಇಂಗ್ಲಿಷ್ ಶಿಕ್ಷಣಕ್ಕಾಗಿ ಅಲ್ಲಿಯ ಕಚೇರಿಯ ಕಾರಕೂನನೊಬ್ಬನನ್ನು ತೊಡಗಿಸಿಯಾಯಿತು. ಪ್ರತಿಯೊಬ್ಬರೂ ತಿಂಗಳಿಗೆ ೨ರೂ ಫೀ ಕೊಡುತ್ತಿದ್ದೆವು. ಅವರು ಚೆನ್ನಾಗಿ ಕಲಿಸುತ್ತಿದ್ದರು. ಮುಂದೆ ಅವರಿಗೆ ಬೇರೆ ಕೆಲ್ಸ ಬಂದ ಮೂಲಕ ನಮ್ಮ ವರ್ಗವನ್ನು ಬೇರೊಬ್ಬ ಕಾರಕೂನರಿಗೆ ಒಪ್ಪಿಸಿದರು. ಅವರ ಹೆಸರು ಬಿಕ್ಕು ಅನಂತ ಪಂಡಿತ. ಇವರು ಕಲಿಸುವಾಗ ಆತ್ಮೀಯತೆಯಿಂದ ಕಲಿಸುತ್ತಿದ್ದರು. ಕೇವಲ ಪಠ್ಯ ಪುಸ್ತಕಗಳ ವಿಷಯ ಮಾತ್ರವಲ್ಲ, ಧಾರ್ಮಿಕ, ಸಾಮಾಜಿಕ ವಿಷಯದಲ್ಲಿ, ದೇಶದಲ್ಲಿ ನಡೆದಿರುವ ಅನೇಕ ಹೊಸ ಜೀವನದ ಪ್ರವೃತ್ತಿಗಳ ವಿಷಯದ ಬಗ್ಗೆ ಹೇಳುತ್ತಿದ್ದರು.

ಪ್ರಾರ್ಥನಾ ಸಮಾಜ, ಬ್ರಹ್ಮ ಸಮಾಜ ಈ ವಿಷಯ ಹೇಳುತ್ತಿದ್ದರು. ಒಮ್ಮೊಮ್ಮೆ ಸ್ಫೂರ್ತಿ ಬಂದಾಗ ಪ್ರಾತಃಕಾಲದಲ್ಲಿ ಗೀತೆಯ ಪಠಣ ಮಾಡುತ್ತಿದ್ದರು. ನಮ್ಮ ಶಿಕ್ಷಣವು ಮುಂದೆ ಹೇಗೆ ಸಾಗಬೇಕು ಈ ಬಗ್ಗೆ ವಿಚಾರ ಮಾಡುತ್ತಿದ್ದರು. ಅಂತೂ ನಾವು ಇಂಗ್ಲಿಷ್ ಎರಡನೆಯ ವರ್ಗದ ಮಟ್ಟವನ್ನು ಮುಗಿಸಿ ಮೂರನೆಯ ವರ್ಗದ ಅಭ್ಯಾಸ ಪ್ರಾರಂಭವಾಗಿತ್ತು. ಆರು ತಿಂಗಳು ಕಳೆದಿದ್ದವು. ಆದರೆ, ಒಂದು ಸ್ಥಾನಿಕ ಘಟನೆಯ ಕಾರಣದಿಂದಾಗಿ ಬಿಕ್ಕು ಪಂಡಿತ ಇವರು ರೆವಿನ್ಯೂ ಖಾತೆಯ ತನ್ನ ಕೆಲಸಕ್ಕೆ ರಾಜೀನಾಮೆ ಕೊಟ್ಟರು. ಮುಂದೆ ಅವರು ತನ್ನ ಊರು ಕುಮಟೆಗೆ ಹೋಗಿ ಅಲ್ಲಿ ಜ್ಯುಡಿಷಿಯಲ್ ಡಿಪಾರ್ಟ್‌ಮೆಂಟ್‌ನಲ್ಲಿ ನೌಕರಿ ಹಿಡಿಯ ಬೇಕೆಂದು ನಿಶ್ಚಯಿಸಿದರು. ಇದು ನಮ್ಮಿಬ್ಬರಿಗೆ, ವಿಶೇಷತಃ ನನಗೆ, ಅನುಕೂಲ ವಾಯಿತು. ಹೀಗೆ ಅವರು ರೆವಿನ್ಯೂ ಖಾತೆಗೆ ರಾಜೀನಾಮೆ ಕೊಡುವ ಪ್ರಸಂಗದ ಮೂಲಕ ನನ್ನ ಹಾಯಸ್ಕೂಲ ಶಿಕ್ಷಣದ ಮಾರ್ಗವು ಸುಗಮವಾಯಿತು. ಯಾಕೆಂದರೆ ಅವರೇ ತಾನು ಹೋಗುವಾಗ ನಮ್ಮಿಬ್ಬರನ್ನು ಕರೆದುಕೊಂಡು ಹೋದರು. ಮತ್ತು ಅಲ್ಲಿಯ ಶಾಲಾಸ್ಥಾಪಕ ನಾರಾಯಣ ಕಾಮತ್ ಅವರಿಗೆ ನನ್ನ ಎಲ್ಲ ವಿಷಯ ತಿಳಿಸಿ ನನಗೆ ಮಾಫಿಯಾಗುವಂತೆ ಮಾಡಿದರಷ್ಟೇ ಅಲ್ಲ, ಅವರ ಹೊಸ್ಟೆಲ್‌ನಲ್ಲಿ ತಿಂಗಳ ಊಟದ ಚಾರ್ಜಿನಲ್ಲಿಯೂ ಸವಲತ್ತು ಸಿಗುವಂತೆ ಮಾಡಿದರು. ಇಷ್ಟೇ ಅಲ್ಲ, ನನಗೆ ಮೂರನೆಯ ಇಯತ್ತೆಯ ಸ್ಕಾಲರ್‌ಶಿಪ್ ಪರೀಕ್ಷೆಗೆ ಕೂಡಿಸುವ ವಿಚಾರ ಸಹ ಮಾಡಿದರು. ಆದರೆ, ನನ್ನ ಆತ್ಮವಿಶ್ವಾಸದ ಅಭಾವದಿಂದಲೋ, ಬೇರೆ ಕಾರಣದಿಂದಲೋ ನಾನು ಆ ಪರೀಕ್ಷೆಗೆ ಕೂಡ್ರಲಿಲ್ಲ— ಆ ಮಾತು ಬೇರೆ. ಇಷ್ಟೇ ಅಲ್ಲ; ನಾನು ಮೆಟ್ರಿಕ್ ಮುಗಿಸಿದ ನಂತರ ಸಹ ಅವರು ನನ್ನನ್ನು ಕಾಲೇಜ ಶಿಕ್ಷಣಕ್ಕೆ ಪ್ರೋತ್ಸಾಹಿಸಿದರು.

ಹೀಗೆ ಕುಮಟೆಯ "ನ್ಯೂ ಇಂಗ್ಲಿಷ್ ಸ್ಕೂಲ್"ನಲ್ಲಿ ನನ್ನ ಪ್ರವೇಶವಾಯಿತು. ಊಟಕ್ಕಾಗಿ ನಾವು ಅಲ್ಲಿಯ ಬೋರ್ಡಿಂಗದಲ್ಲಿರುತ್ತಿದ್ದೆವು. ನಾನು ತಿಂಗಳಿಗೆ ನಾಲ್ಕು ರೂಪಾಯಿ ಊಟದ ಖರ್ಚಿಗೆ ಕೊಡುತ್ತಿದ್ದೆ. ಮಾರ್ಕೆಟ್‌ನಿಂದ ಕಾಯಿಪಲ್ಲೆ ಬೋರ್ಡಿಂಗಕ್ಕಾಗಿ ತರುವದು, ಈ ಕೆಲಸ ನಾನು ಮಾಡುತ್ತಿದ್ದೆ. ಊಟದ ಖರ್ಚಿಗೆ ಸಾಮಾನ್ಯವಾಗಿ 6ರೂಪಾಯಿ ಬರುತ್ತಿತ್ತು. ಊಟದ ಖರ್ಚಿನಲ್ಲಿ ನಾನು ನಾಲ್ಕು ರೂಪಾಯಿ ಕೊಟ್ಟ ಮೇಲೆ ಬಾಕಿ ನನ್ನ ಖರ್ಚನ್ನು ಇತರ ವಿದ್ಯಾರ್ಥಿಗಳು ವಹಿಸುತ್ತಿದ್ದರು. ನಾನು ವರ್ಗದಲ್ಲಿ ಬರಬರುತ್ತಾ ಮೊದಲನೆಯ 3 ನಂಬರದೊಳಗೆ ಇರುತ್ತಿದ್ದೆ. ಈ ಪ್ರಕಾರ ಊಟದ ಖರ್ಚಿನಲ್ಲಿ ಸವಲತ್ತು ಪಡೆಯುತ್ತಿದ್ದ ಇನ್ನೂ ಇಬ್ಬರು ಬಡ ವಿದ್ಯಾರ್ಥಿಗಳು ಬೋರ್ಡಿಂಗ ದಲ್ಲಿರುತ್ತಿದ್ದರು. ಮುಂದೆ ನಾನು ೫ನೆಯ ಇಯತ್ತೆಯಲ್ಲಿರುವಾಗ ಆಗಲೇ ಪ್ರಾರಂಭವಾಗಿರುವ ದಾಭೋಳಕರ್ ವಿದ್ಯಾರ್ಥಿ ಸಹಾಯ ನಿಧಿಗೆ ಶಾಲೆಯ ೪–೫

ವಿದ್ಯಾರ್ಥಿಗಳನ್ನು ಶಿಫಾರಸು ಮಾಡಿ ನಮ್ಮ ಶಾಲ ಸೂಪರಿಂಟೆಂಡೆಂಟ್ ನಾರಾಯಣ ಕಾಮತ್ ಗುರುಗಳು ಕಳಿಸಿದರು. ಅರ್ಜಿಗಳು ಮಂಜೂರಾದವು. ನನಗೆ ಆಗ ತಿಂಗಳಿಗೆ ೫ ರೂಪಾಯಿ ಆ ಫಂಡಿನಿಂದ ಸ್ಕಾಲರ್‌ಶಿಪ್ ಸಿಗುತ್ತಿತ್ತು. ಇದರಿಂದ ನಮ್ಮ ಮನೆಯವರ ಭಾರ ಬಹುಮಟ್ಟಿಗೆ ಕಡಿಮೆಯಾಯಿತು. ಶ್ರೀ ನಾರಾಯಣ ಕಾಮತ್ ಗುರುಗಳು ವರ್ಗ ತೆಗೆದುಕೊಳ್ಳುವಾಗ ಅನೇಕ ಕಥೆಗಳನ್ನು ಹೇಳುತ್ತಿದ್ದರು. ಇದಲ್ಲದೆ ನಾನು ಮೆಟ್ರಿಕ್ ವರ್ಗದಲ್ಲಿರುವಾಗ ಒಮ್ಮೆ ಗೋಪಾಲಕೃಷ್ಣ ಗೋಖಲೆಯವರ ಮಾತು ಹೇಳಿದರು. ಇನ್ನೊಂದು ದಿನ ನಮಗೆ ಪ್ರಥಮ ಚಿಕಿತ್ಸೆಯ ವರ್ಗ ಪ್ರಾರಂಭವಾಗುವದಿತ್ತು. ಆಗ ಅವರು ಆ ಸಂದರ್ಭದಲ್ಲಿ ಸಮಾಜಸೇವೆಯ ಮಹತ್ವವನ್ನು ಬಿಂಬಿಸುವಾಗ ಮಹಾದೇವ ಗೋವಿಂದ ರಾನಡೆ (ಗೋಖಲೆಯವರ ಗುರುಗಳು)ಯವರ ಜೀವನದ ಒಂದು ಘಟನೆ ಹೇಳಿದರು. ಅವರು ಹಾಯಕೋರ್ಟಿಗೆ ಜಡ್ಜರಿದ್ದರು. ಒಂದು ದಿನ ಪುಣೆಯಲ್ಲಿ ತಿರುಗಾಟಕ್ಕೆ ಹೋಗುತ್ತಿದ್ದಾಗ, ಒಬ್ಬ ಬಡ ಹೆಣ್ಣು ಮಗಳು ಕಟ್ಟಿಗೆಯ ಒಂದು ಹೊರೆಯನ್ನು ಕೆಡವಿಕೊಂಡು ಕೂತಿದ್ದಳು. ರಾನಡೆಯವರು ಅದನ್ನು ನೋಡಿ ಅವಳಿಗೆ ಕಟ್ಟಿಗೆ ಹೊರೆಯನ್ನು ಪುನಃ ತಲೆಯ ಮೇಲೆ ತೆಗೆದುಕೊಳ್ಳಲು ಸ್ವತಃ ತನ್ನ ಕೈಯಿಂದ ನೆರವಾದರು. ಈ ಅವರ ಮಾತಿನಿಂದ ನನಗೆ ರಾನಡೆ, ಗೋಖಲೆಯವರ ಬಗ್ಗೆ ಪೂಜ್ಯಭಾವ ಆಗಲೇ ಹುಟ್ಟಿತು. ನಾನು ಮೆಟ್ರಿಕ್ ವರ್ಗದಲ್ಲಿರುವಾಗಲೇ ಶ್ರೀ ಮಾಧವ ಶಾನಭಾಗ ಎಂಬ ಗುರುಗಳು ನಮಗೆ ಕಲಿಸಲು ಬರುತ್ತಿದ್ದರು. ಅವರು ವಿದ್ಯಾರ್ಥಿಗಳ ಜೀವನದ ಕಡೆಗೆ ಬಹಳ ಲಕ್ಷ್ಯ ಕೊಡುತ್ತಿದ್ದರು. ನನ್ನ ಸ್ವಭಾವವು ಸ್ವಾರ್ಥಿ ಇದೆಯೆಂದು ಕೆಲ ಸಂಗತಿಗಳಿಂದ ಅವರಿಗೆ ಹೊಳೆದು ಅವರು ನನ್ನನ್ನು ಅನೇಕ ಬಾರಿ ತನ್ನ ಹತ್ತಿರ ಕರೆಸಿಕೊಂಡು ಪ್ರೇಮದಿಂದ ಉಪದೇಶ ಮಾಡುತ್ತಿದ್ದರು. 'ಸದ್ಗುಣಗಳೇ ನಿಜವಾದ ಸಂಪತ್ತು; ಬರೇ ವಿದ್ಯೆಯಿಂದ ಪ್ರಯೋಜನವಿಲ್ಲ. ಸದ್ಗುಣಗಳನ್ನು ಬೆಳೆಸಿಕೊಳ್ಳಬೇಕು', ಎಂದು ಹೇಳುತ್ತಿದ್ದರು. ನಾನು ಅಭ್ಯಾಸದಲ್ಲಿ ಮಗ್ನನಾದೆನೆಂದರೆ ಒಂದೊಂದು ದಿನ ಸ್ನಾನವನ್ನೇ ಮಾಡುತ್ತಿದ್ದಿಲ್ಲ. ಇದನ್ನು ತಿಳಿದು ಅವರು ನನಗೆ ಪ್ರತಿದಿನ ಸ್ನಾನಮಾಡಲು ಹಚ್ಚಿದರು. ನನ್ನ ಉಗುರು, ಹಲ್ಲು ತಪಾಸ ಮಾಡಿ ಅವುಗಳ ಸ್ವಚ್ಛತೆಯ ಬಗ್ಗೆ ನನಗೆ ತಿಳಿಸಿ ಹೇಳುತ್ತಿದ್ದರು. ಬಡ ವಿದ್ಯಾರ್ಥಿಗಳ ಬಗ್ಗಂತೂ ಅವರ ವಿಶಿಷ್ಟ ಸಹಾನುಭೂತಿ ಇತ್ತು. ನನ್ನ ಬಾಲ ಮನಸ್ಸಿನ ಮೇಲೆ ಅವರ ಉಪದೇಶದಿಂದ ಆಳವಾದ ಪರಿಣಾಮವಾಯಿತು. ಅವರ ಈ ಉಪದೇಶವನ್ನು ನಾನು ಎಂದೂ ಮರೆತಿದ್ದಿಲ್ಲ. ಮುಂದೆ ಕಾಲೇಜಕ್ಕೆ ಹೋಗಲು ಅವರೇ ಮುಂದೆ ಬಂದು ಸಹಾಯ ಮಾಡಿದರು. ಈ ಮಾತು ಮುಂದೆ ಬರುವದು. ಅವರೂ ಬೋರ್ಡಿಂಗ್‌ದಲ್ಲಿ ಇರುತ್ತಿದ್ದರು. ಹೀಗೆ ನಾನು self-centred ಇದ್ದೆ. (೨೭-೧-೬೮)

[ಇಲ್ಲಿಗೆ ಈ ಬರಹ ನಿಂತಿದೆ—ಸಂ॥]

## ಭಾಗ ೨

ಸಿದ್ಧಾಪುರದವನಾದ ನಾನು ಕುಮಟಾದ ಗಿಬ್ ಹೈಸ್ಕೂಲಿನಲ್ಲಿ ಓದುತ್ತಿದ್ದಾಗ ನಮ್ಮ ಶಾಲೆಯ ಸ್ಥಾಪಕರಾದ ನಾರಾಯಣ ಕಾಮತ್ ಮತ್ತು ಅಧ್ಯಾಪಕರಾದ ಮಾಧವ ಶಾನುಭಾಗರು ರಾಷ್ಟ್ರೀಯ ವಿಚಾರಗಳ ಬೀಜವನ್ನು ನನ್ನಲ್ಲಿ ಬಿತ್ತಿದ್ದರೆಂದು ಹೇಳಬೇಕು. ಮುಂದೆ ನಾವು ನಾಲ್ಕು ಜನ ಬಡ ವಿದ್ಯಾರ್ಥಿಗಳು ಶಿಕ್ಷಣಕ್ಕಾಗಿ ಪುಣೆಗೆ ಹೋದಾಗ ಮಾಧವ ಶಾನುಭಾಗ ಅವರು ನಮ್ಮ ಜೊತೆ ಎಂ. ಎ. ಶಿಕ್ಷಣ ಕ್ಕಾಗಿ ಬಂದರು. ಅವರು ನಮಗೆ ಫ್ರೀಶಿಪ್ ಸಿಗಲು ನೆರವಾದರು.

ಆ ಕಾಲದಲ್ಲಿ ರ್‍ಯಾಂಗ್ಲರ್ ಪರಾಂಜಪೆ ಅವರು ಕಾಲೇಜಿನ ಪ್ರಿನ್ಸಿಪಾಲರಾಗಿದ್ದು ಅವರು ಇಂಗ್ಲೆಂಡ್‌ನಲ್ಲಿ ಸೀನಿಯರ್ ರ್‍ಯಾಂಗ್ಲರ್ ಆದ ಪ್ರಥಮ ಭಾರತೀಯರು. ಇಡೀ ಭಾರತದಲ್ಲೇ ಅವರು ಗೌರವಿತರಾಗಿದ್ದರು. ಆಗಿನ ಬರೋಡಾ ಮಹಾರಾಜರು ಅವರಿಗೆ ತಿಂಗಳಿಗೆ ೨,೦೦೦ ವೇತನದ ಮೇಲೆ ಕೆಲಸಕ್ಕೆ ಕರೆದರು. ಆದರೆ ಡೆಕ್ಕನ್ ಎಜ್ಯುಕೇಶನ್ ಸೊಸೈಟಿಯವರೇ ಅವರನ್ನು ಇಂಗ್ಲಂಡಿಗೆ ತಮ್ಮ ಖರ್ಚಿನಲ್ಲಿ ಕಳುಹಿಸಿಕೊಟ್ಟಿದ್ದರು. ಸೊಸೈಟಿಯ ಆಜೀವ ಸದಸ್ಯರಾಗಿ ೨೦ ವರ್ಷ ಸೇವೆ ಸಲ್ಲಿಸುವುದಾಗಿ ಪರಾಂಜಪೆ ಕರಾರು ಬರೆದುಕೊಟ್ಟಿದ್ದರು. ಅದು ತ್ಯಾಗ ಜೀವಿಗಳ ಸಂಸ್ಥೆಯಾಗಿದ್ದು ಆಜೀವ ಸದಸ್ಯರೆಲ್ಲರೂ ಕೇವಲ ೧೦೦ ರೂ. ವೇತನದ ಮೇಲೆ ಸೇವೆ ಸಲ್ಲಿಸುತ್ತಿದ್ದರು. ಸೊಸೈಟಿಯವರು ಪರಾಂಜಪೆ ಅವರನ್ನು ಕರಾರಿನಿಂದ ಮುಕ್ತಗೊಳಿಸಲು ಸಿದ್ಧರಿದ್ದರೂ ಅವರು ತಾವು ಕೊಟ್ಟ ವಚನಕ್ಕೆ ಬದ್ಧರೆಂದು ಅಲ್ಲಿಯ ಅಲ್ಪವೇತನದ ಮೇಲೆ ಕೆಲಸ ಮುಂದುವರಿಸಿದ್ದರು. ಅವರ ಸಾದಾ ಜೀವನ ಮತ್ತು ಅಲ್ಲಿಯ ತ್ಯಾಗದ ವಾತಾವರಣ ನನ್ನ ಮೇಲೆ ಅಪಾರ ಪ್ರಭಾವ ಬೀರಿತು.

ರಾಷ್ಟ್ರೀಯ ವಿಚಾರಗಳಲ್ಲಿ ನನ್ನ ಒಲವು ಗೋಪಾಲಕೃಷ್ಣ ಗೋಖಲೆಯವರ ಕಡೆಗಿತ್ತು. ಏಕೆಂದರೆ ಅವರು ಕೇವಲ ರಾಜಕೀಯ ಸ್ವಾತಂತ್ರ್ಯಕ್ಕಷ್ಟೇ ಅಲ್ಲ ಸಾಮಾಜಿಕ ಸಮತೆಗೂ ಮಹತ್ವ ನೀಡುತ್ತಿದ್ದರು. ನನಗೆ ಸರ್ವೆಂಟ್ಸ್ ಆಫ್ ಇಂಡಿಯ ಸೊಸೈಟಿ ಸೇರಬೇಕೆಂದು ಬಯಕೆ ಆಗಿತ್ತು. ದಾಭೋಳ್‌ಕರ್ ಸ್ಕಾಲರ್‌ಶಿಪ್ ಮತ್ತು ಕಾಲೇಜ್ ಫ್ರೀಶಿಪ್‌ಗಳ ನೆರವಿನಿಂದ ಅಲ್ಲಿಯ ಶಿಕ್ಷಣ ಕ್ರಮವನ್ನು ಮುಗಿಸಿ ೧೯೧೮ರಲ್ಲಿ ಬಿ. ಎ. ಪಾಸಾದೆ.

ಎಂ. ಎ. ಅಭ್ಯಾಸಕ್ಕಾಗಿ ಮುಂಬೈಗೆ ಹೋದೆ. ಕಾನೂನು ಶಿಕ್ಷಣ ಅದರ ಜೊತೆಗೇ ಆರಂಭಿಸಿ ಮುಂದೆ ಕಾನೂನು ಶಿಕ್ಷಣ ಬಿಟ್ಟುಕೊಟ್ಟೆ. ಇದೇ ಕಾಲದಲ್ಲಿ ಮುಂಬೈ ಸೆಕ್ರೆಟೇರಿಯೆಟ್‌ನಲ್ಲಿ ತಾತ್ಪೂರ್ತಿಕ ನೌಕರಿ ಮಾಡುತ್ತಿದ್ದೆ. ಮುಂದೆ ಕಾಯಿಲೆ ಆಗಿ ಹಾಸಿಗೆ ಹಿಡಿದಾಗ ತಿ॥ ಅಣ್ಣನವರು ಬಂದು ಊರಿಗೆ ಕರೆದೊಯ್ದರು. ಪುಣೆ, ಮುಂಬೈಗಳಲ್ಲಿ ಇದ್ದಾಗ ಸಭೆ ಮುಂತಾದವುಗಳಲ್ಲಿ ಉಪಸ್ಥಿತನಿರುತಿದ್ದೆ ನಾದುದರಿಂದ ಹಾಗೂ ನನ್ನ ವಾಚನದಿಂದ ರಾಷ್ಟ್ರೀಯ ಭಾವನೆಗಳು ಮನದಲ್ಲಿ ಬೇರೂರುತ್ತಲಿದ್ದುವು. ಪುಣೆಯಲ್ಲಿ ಇದ್ದಾಗ "ಇಂಡಿಯನ್ ರಿವ್ಯೂ" ಪತ್ರಿಕೆಯಲ್ಲಿ, ಗಾಂಧೀಜಿ ದಕ್ಷಿಣ ಆಫ್ರಿಕದಲ್ಲಿ ನಡೆಸಿದ್ದ ಸತ್ಯಾಗ್ರಹ ಪ್ರಯೋಗಗಳ ವಿಚಾರ ಓದಿದ್ದೆ. ಅವರ ವಿಚಾರ ಸರಣಿಯನ್ನು ಮೆಚ್ಚಿದ್ದೆ. ಮದ್ರಾಸಿನ ನಟೇಶನ್ ಅವರ ಕಿರು ಪ್ರಕಟಣೆಗಳನ್ನು ಓದಿದ್ದೆ. ಪರಮಹಂಸರೂ ಗಾಂಧೀಜಿಯವರೂ ನನ್ನ ಮನದ ಮೇಲೆ ಅಪಾರ ಪ್ರಭಾವ ಬೀರಿದ್ದರು. ಪರಮಹಂಸರ ಆಧ್ಯಾತ್ಮಿಕ ವಿಚಾರಗಳು ನನ್ನ ಮೇಲೆ ಅಪಾರ ಪ್ರಭಾವ ಬೀರಿದ್ದುವು. ನಾನು ಪುಣೆಯಲ್ಲಿದ್ದಾಗಲೇ ಗಾಂಧೀಜಿ ಭಾರತಕ್ಕೆ ಬಂದಿದ್ದು ಸರ್ವೆಂಟ್ಸ್ ಆಫ್ ಇಂಡಿಯ ಸೊಸೈಟಿ ಅವರಿಗೆ ಒಂದು ಸ್ವಾಗತ ಸಮಾರಂಭ ಏರ್ಪಡಿಸಿತ್ತು. ಪುಣೆಯಲ್ಲಿ ಅವರ ಭಾಷಣ ಕೇಳಿ ಇವರೇ ನನ್ನ ಆದರ್ಶ ಎಂಬ ಭಾವನೆ ಆಗಲೇ ಉಂಟಾಗಿತ್ತು.

ನಾನು ಸೀಕಿನಿಂದ ಗುಣವಾದ ನಂತರ ಶಿರಸಿಯ ಆ್ಯಂಗ್ಲೊ ವರ್ನಾಕ್ಯುಲರ್ ಶಾಲೆಯ ಮುಖ್ಯಾಧ್ಯಾಪಕನಾಗಿ ನಿಯುಕ್ತನಾದೆ (೧೯೨೦). ಎಂ. ಎ. ಅಭ್ಯಾಸ ವನ್ನು ಖಾಸಗಿಯಾಗಿ ಮುಂದುವರಿಸಿದೆ. ೧೯೨೧ರಲ್ಲಿ ಅಸಹಕಾರ ಚಳುವಳಿ ಆದಾಗ ಶಾಲೆಗಳನ್ನು ಬಾಯ್‌ಕಾಟ್ ಮಾಡುವ ಕ್ರಮ ನನಗೆ ಸರಿಕಾಣಿಸಲಿಲ್ಲ. ದಿನಹೋದಂತೆ ಸರಕಾರ ನಿಯಂತ್ರಿತ ಶಿಕ್ಷಣವು ಶಿಕ್ಷಕರ ಹಾಗೂ ವಿದ್ಯಾರ್ಥಿಗಳ ನಿಜವಿಕಾಸಕ್ಕೆ ಹಾಗೂ ನೈತಿಕ ಜೀವನಕ್ಕೆ ಎಷ್ಟು ವಿಘ್ನಕಾರಿಯೆಂದು ಮನಸ್ಸಿಗೆ ಪ್ರತೀತಿ ಆಯಿತು. ನಾನು ಮಾಡುತ್ತಿರುವ ನೌಕರಿ ಆತ್ಮಸಾಕ್ಷಿಗೆ ವಿರುದ್ಧವಾದ ಕಾರ್ಯ ಎಂದು ಅನಿಸಹತ್ತಿತು. ನೌಕರಿ ಬಿಡೋಣವೆಂದರೆ ಮುಂದೆ ಜೀವನ ಹೇಗೆ, ಎಂಬ ಭಯವಿತ್ತು.

ಇದೇ ಕಾಲಕ್ಕೆ 'ಯಂಗ್ ಇಂಡಿಯಾ'ದಲ್ಲಿ ಗಾಂಧೀಜಿಯವರ ಚಿಕ್ಕ ಲೇಖನ ಬಂತು. ಅದರೊಳಗಿನ ಒಂದು ಮುಖ್ಯ ಮಾತು, "It is not the question of bread. It is the question of bread labour" ಎಂದಿತ್ತು. "ಜೀವನ ನಿರ್ವಾಹ ಒಂದು ಮುಖ್ಯ ಸಮಸ್ಯೆಯಲ್ಲ. ಯಾವುದೇ ಉತ್ಪಾದಕ ಶರೀರ ಶ್ರಮಮಾಡಲು ಸಿದ್ಧನಿದ್ದವನಿಗೆ ಉದರ ನಿರ್ವಾಹವು ಒಂದು ಸಮಸ್ಯೆ ಯಾಗಿರುವುದಿಲ್ಲ"—ಇದು ಈ ಲೇಖನದ ಮುಖ್ಯ ಆಶಯ. ಅದನ್ನು ಓದಿ ನಾನು ಈ ಕುರಿತು ಆಳವಾಗಿ ಚಿಂತನೆ ಮಾಡುತ್ತಿದ್ದೆ. ಒಂದು ಪುಸ್ತಕ ತರಲು

ಗೋಪಾಲಕೃಷ್ಣ ದೇವಾಲಯುದಲ್ಲಿದ್ದ ಪುಸ್ತಕ ಭಂಡಾರಕ್ಕೆ ಹೋದೆ. ಆ ಕಾಲದಲ್ಲಿ ವಾಮನ ಹೊದಿಕೆಯವರು ಅಲ್ಲಿ ರಾಷ್ಟ್ರೀಯ ಶಾಲೆ ನಡೆಸುತ್ತಿದ್ದರು. ನಾನು ಅಲ್ಲಿಗೆ ಹೋದಾಗ ಅವರು ತಮ್ಮ ವಿದ್ಯಾರ್ಥಿಗಳಿಗೆ ಅದೇ ವಾಕ್ಯವನ್ನು ಓದಿಹೇಳಿ ಮನಸ್ಸಿನ ಮೇಲೆ ಬಿಂಬಿಸುತ್ತಿದ್ದರು. ಆಗಲೇ ನನ್ನ ಪರಿವರ್ತನೆಯ ಅಂತಿಮ ಕ್ಷಣ ಬಂತು, ಅಲ್ಲಿಯೇ ನಿರ್ಧಾರ ಆಯಿತು. ಡಿಸೆಂಬರ್ ೧೨, ೧೯೨೧ರಲ್ಲಿ ನೌಕರಿಗೆ ರಾಜೀನಾಮೆಕೊಟ್ಟೆ. ಆ ತನಕ ಲೇಖನ, ಚರ್ಚೆಗಳ ಮೂಲಕ ಚಳುವಳಿಯಲ್ಲಿ ಪರೋಕ್ಷವಾಗಿ ಭಾಗವಹಿಸುತ್ತಿದ್ದ ನಾನು ಅಂದಿನಿಂದ ನೇರವಾಗಿ ಚಳುವಳಿಯಲ್ಲಿ ಭಾಗವಹಿಸಹತ್ತಿದೆ.

ನಾನು ನೌಕರಿ ಬಿಟ್ಟಾಗ ನನ್ನ ಕೆಲವು ವಿದ್ಯಾರ್ಥಿಗಳೂ ನನ್ನ ಜೊತೆ ಶಾಲೆ ಬಿಟ್ಟರು. ಗೆಳೆಯನೊಬ್ಬನ ಮಹಡಿಯ ಮೇಲೆ ಅವರಿಗೆ ಪಾಠ ಹೇಳುತ್ತಲಿದ್ದೆ. ಇದೇ ವೇಳೆಗೆ ಶಿರಸಿಯ ರಾಷ್ಟ್ರೀಯ ಶಾಲೆಯ ಆಮಂತ್ರಣದಂತೆ ಆ ಶಾಲೆಯ ಅಧ್ಯಾಪಕ ವರ್ಗಕ್ಕೆ ಮುಂದೆ ಸೇರಿಕೊಂಡೆ.

ಶ್ರೀಗಳಾದ ಹೊದಿಕೆ, ದತ್ತಾತ್ರೇಯ ಜೋಷಿ, ಮರಾಠೆ ಇವರು ಅಲ್ಲಿನ ಪ್ರಮುಖ ಅಧ್ಯಾಪಕರು. ಶಾಲೆಯ ವಾರದ ರಜದ ದಿನಗಳಲ್ಲಿ ಅವರು ರಾಷ್ಟ್ರೀಯ ವಿಚಾರಗಳ ಪ್ರಚಾರಕ್ಕಾಗಿ ಹಳ್ಳಿಹಳ್ಳಿಗಳಿಗೆ ಹೋಗುತ್ತಿದ್ದರು. ಮುಂದೆ ನಾನೂ ಹೋಗಹತ್ತಿದೆ. ಶ್ರೀಗಳಾದ ಜೋಷಿ ಮತ್ತು ಮರಾಠೆ ಇವರುಗಳಿಗೆ ಈ ಬಗ್ಗೆ ಸರಕಾರದಿಂದ, “ನೀವು ಹಮೇಶಾ ರಾಜದ್ರೋಹಿ ಭಾಷಣ ಮಾಡುತ್ತಿರುವಿರಿ. ನಿಮ್ಮಿಂದ ಒಳ್ಳೆಯ ನಡತೆಯ ಬಗ್ಗೆ ಯಾಕೆ ಮುಚ್ಚಳಿಕೆ ಬರಕೊಳ್ಳಬಾರದು ?” ಎಂದು ನೋಟೀಸು ಬಂತು. ನಾವು ನಮ್ಮ ಚಟುವಟಿಕೆ ನಿಲ್ಲಿಸಲಿಲ್ಲ. ಅವರಿಬ್ಬರಿಗೂ ಮುಂದೆ ಒಂದು ವರ್ಷ ಸಶ್ರಮ ಶಿಕ್ಷೆ ಆಯಿತು. ಇದಕ್ಕೂ ಮೊದಲು ನಮ್ಮ ಜಿಲ್ಲೆಯ ಬೇಡಕಣಿಯ ಚೌಡನಾಯ್ಕರು ಮತ್ತು ಶಿರಸಿಯ ಪುಡಿ ಸಾಹೇಬರು ಇವರಿಗೆ ಆರು ತಿಂಗಳು ಹಾಗೂ ಒಂದು ವರ್ಷ ಸಕ್ರಮ ಸಜೆ ಆಗಿತ್ತು.

ಇದೇ ಕಾಲಕ್ಕೆ ಶಿರಸಿಗೆ ಸ್ವಾಮಿ ಧರ್ಮಾನಂದರು ಬಂದರು. ಅವರು ಭಾಷಣ ಮಾಡಿದ ಸಾರ್ವಜನಿಕ ಸಭೆಯಲ್ಲಿ ನನ್ನದೂ ಒಂದು ಭಾಷಣವಾಯಿತು. ನನಗೆ ಸರಕಾರದ ನೋಟೀಸ್ ಬಂತು. ಆ ನೋಟೀಸ್‌ನಲ್ಲಿ ನನ್ನ ಹೆಸರು ತಿಮ್ಮಪ್ಪ ಶೇಷಗಿರಿ ನಾಯಕ್ ಎಂದಿತ್ತು. ನನ್ನ ತಂದೆಯವರ ಹೆಸರು ಶೇಷಗಿರಿ ಅಲ್ಲ, ಶ್ರೀನಿವಾಸ ಎಂದು ನೋಟೀಸನ್ನು ಸ್ವೀಕರಿಸಲಿಲ್ಲ. ಎರಡು ತಿಂಗಳ ನಂತರ ಸರಿಯಾದ ಹೆಸರಿನಲ್ಲಿ ನೋಟೀಸ್ ಬಂದು, ಬಂಧನವಾಗಿ ಒಂದು ವರ್ಷ ಸಶ್ರಮ ಶಿಕ್ಷೆಯಾಯಿತು. ಇದು ಬಹುಶಃ ೧೯೨೨ರ ಮೇ ತಿಂಗಳಲ್ಲಿ. ಆಗ ಕಾರವಾರ ಜೈಲಿನಲ್ಲಿ ನಾಲ್ಕು-ಐದು ರಾಜಕೀಯ ಕೈದಿಗಳು ಮಾತ್ರ ಇದ್ದು ಪ್ರತಿಯೊಬ್ಬರಿಗೆ ಪ್ರತ್ಯೇಕ ಕೊಠಡಿಗಳು ಇದ್ದವು.

ನಾನು ಬಿಡುಗಡೆಯಾಗಿ ಬರುವಾಗ ಚಳುವಳಿಯು ತಣ್ಣಗಾಗಿತ್ತು. ರಾಷ್ಟ್ರೀಯ ಶಾಲೆಯ ಪ್ರಾಥಮಿಕ ತರಗತಿಗಳನ್ನು ಮುಚ್ಚಲಾಗಿತ್ತು. ಕೇವಲ ನಾಲ್ಕು–ಐದು ಅಧ್ಯಾಪಕರು ಉಳಿದಿದ್ದರು. ಶಿಕ್ಷಣ ಕ್ರಮದಲ್ಲಿ ಔದ್ಯೋಗಿಕ ಶಿಕ್ಷಣವು ಇರಬೇಕೆಂದು ಅನಿಸಿ ನಾವು ಒಂದು ತರಕಾರಿ ಬೆಳೆಸುವ ಯೋಜನೆ ಮತ್ತು ನೇಯ್ಗೆಯ ಪ್ರಬಂಧ ಕೈಗೊಂಡೆವು. ಪ್ರತಿದಿನ ಬೆಳಿಗ್ಗೆ ಶಿಕ್ಷಕರೂ ವಿದ್ಯಾರ್ಥಿಗಳೂ ಕೂಡಿ ಒಕ್ಕಲತನದ ಸಲಕರಣೆಗಳನ್ನು ತಕ್ಕೊಂಡು ತರಕಾರಿ ಬೆಳೆಸುವ ಸ್ಥಳಕ್ಕೆ ಹೋಗುತ್ತಿದ್ದೆವು. ಕೆಲ ಪಾಲಕರ ಮನಸ್ಸಿಗೆ ಇದು ಸರಿಬಂದಿರಲಿಕ್ಕಿಲ್ಲ. ಆಗ ವಿದ್ಯಾರ್ಥಿ ಸಂಖ್ಯೆ ಇಳಿಮುಖವಾಯಿತು. ಆಗ ನಾವು ಶಾಲೆ ಮುಚ್ಚಿದೆವು. ನಾನು ಸಾಬರಮತಿ ಆಶ್ರಮಕ್ಕೆ ಹೋಗಿ ಅಲ್ಲಿ ಒಂದು ವರ್ಷ ಇದ್ದು ನೂಲುವುದು ನೇಯುವುದು ಕಲಿತೆ. ಆದರಲ್ಲಿ ನನ್ನ ಹೆಚ್ಚಿನ ಪ್ರಗತಿಯಾಗಲಿಲ್ಲ. ಈ ಕಾಲದಲ್ಲಿ ಅಲ್ಲಿನ ಪುಸ್ತಕ ಭಂಡಾರದ ಪೂರ್ತಿ ಲಾಭ ಪಡದೆ. [ಅಲ್ಲಿನ ಅನುಭವಗಳನ್ನು ಭಾಗ ೩ರಲ್ಲಿ ನೋಡಿ–ಸಂ ॥]. ಟಾಲ್‌ಸ್ಟಾಯ್ ನನ್ನ ಮೇಲೆ ಅಪಾರ ಪ್ರಭಾವ ಬೀರಿದ. ಮುಂದೆ ಸಾಬರಮತಿ ಶಿಕ್ಷಣದ ನಿಯಮದಂತೆ ಎರಡು ವರ್ಷ ಸೇವೆ ಸಲ್ಲಿಸಲು ಗಂಗಾಧರರಾವ್ ದೇಶಪಾಂಡೆಯವರ ಹುದಲಿ ಆಶ್ರಮಕ್ಕೆ ಬಂದೆ. ಅಲ್ಲಿ ರಾಷ್ಟ್ರೀಯ ಶಾಲೆ ನಡೆಸಲು ಕೊಟ್ಟರು. ಎರಡು ವರ್ಷಗಳ ನಂತರ ಒಂದು ವರ್ಷ ಕುಮರಿಯ ಆಶ್ರಮದಲ್ಲಿ ಕೆಲ ಆಶ್ರಮವಾಸಿಗಳಿಗೆ ಗಾಂಧೀ ವಿಚಾರದಲ್ಲಿ ಶಿಕ್ಷಣ ಕೊಡುತ್ತ ಉಳಿದೆ. ಮುಂದೆ ನಮ್ಮ ಜಿಲ್ಲೆಗೆ ಬಂದು ಶಿರಸಿಯಲ್ಲಿ ನಿಂತು ಖಾದಿ ಪ್ರಚಾರ ಆರಂಭಿಸಿದೆ. ಸುತ್ತಲ ಹಳ್ಳಿಗಳಿಗೂ ಹೋಗುತ್ತಿದ್ದೆ.

೧೯೩೦ರಲ್ಲಿ ಅಂಕೋಲೆಯು ಇಡೀ ಕರ್ನಾಟಕಕ್ಕೆ ಉಪ್ಪಿನ ಸತ್ಯಾಗ್ರಹದ ಕೇಂದ್ರವೆಂದು ಆರಿಸಲ್ಪಟ್ಟಿತು. ಈ ಸಂದರ್ಭದಲ್ಲಿ ಹಣಮಂತರಾವ್ ಕೌಜಲಗಿಯವರೂ ಕಾಕಾ ಕಾರ್ಖಾನೀಸ್‌ರವರೂ ಅಲ್ಲಿ ಪ್ರಚಾರಕ್ಕಾಗಿ ಬಂದರು. ಆ ಕಾಲದಲ್ಲಿ ಗುಲವಾಡಿಯವರೂ ಇತರ ಸ್ಥಾನಿಕ ಮುಂದಾಳುಗಳೂ ನಾನೂ ಸಹ ಹಳ್ಳಿಹಳ್ಳಿಗಳಲ್ಲಿ ಪ್ರಚಾರ ಆರಂಭಿಸಿದ್ದೆವು. ಅಂಕೋಲ ಪಟ್ಟಣದ ಮಧ್ಯದಲ್ಲಿ ಒಂದು ಪ್ರಶಸ್ತ ಇಮಾರತಿನಲ್ಲಿ ಸ್ವಯಂಸೇವಕರ ಶಿಬಿರ ತೆರೆಯಲಾಯಿತು. ಏಪ್ರಿಲ್ ೧೩ಕ್ಕೆ ಸತ್ಯಾಗ್ರಹಿಗಳ ಪ್ರಥಮ ಪಥಕವು ಉಪ್ಪಿನ ಸತ್ಯಾಗ್ರಹ ಮಾಡಿತು. ಒಂದೆರಡು ದಿನಗಳಲ್ಲಿ ಆ ಇಮಾರತನ್ನು ಸರಕಾರದ ವಶಕ್ಕೆ ತಕ್ಕೊಂಡಿದೆಯೆಂದು ನೋಟೀಸ್ ಜಾರಿ ಮಾಡಿದರು. ಆ ಕಾಲಕ್ಕೆ ಅಲ್ಲಿದ್ದ ೧೪ ಜನಕ್ಕೆ ಶಿಬಿರ ಖಾಲಿ ಮಾಡಲು ಹೇಳಿದರು. ಅವರಲ್ಲಿ ಕೌಜಲಗಿಯವರೂ ಕಾರ್ಖಾನೀಸರೂ ನಾನೂ ಇದ್ದೆವು. ನಾವು ೧೪ ಜನ ಶಿಬಿರ ಬಿಡುವುದಿಲ್ಲವೆಂದು ಕುಳಿತುಬಿಟ್ಟೆವು. ಎಲ್ಲರ ಬಂಧನ ವಾಯಿತು. ಮೇಲೆ ಹೇಳಿದ ನಮಗೆ ಮೂವರಿಗೂ ೩ ತಿಂಗಳ ಸಾದಾ ಶಿಕ್ಷೆ ಆಯಿತು. ಉಳಿದವರಿಗೆ ಕೋರ್ಟು ಏಳುವವರೆಗೆ ಶಿಕ್ಷೆ ಆಯಿತು. ಮುಂದೆ

ಉಪ್ಪಿನ ಸತ್ಯಾಗ್ರಹದ ನಂತರ ನಮ್ಮ ಬಿಡುಗಡೆ ಆದಾಗ ಜಂಗಲ್ ಸತ್ಯಾಗ್ರಹ ಚಾಲೂ ಇತ್ತು (೧೯೩೦). ಆಗ ಕೆ. ಎ. ವೆಂಕಟರಾಮಯ್ಯ ನಮ್ಮ ನಾಯಕರಿದ್ದರು. ನಾನೂ ಮತ್ತು ಹೊದಿಕೆ ಸಿದ್ಧತೆ ನಿರೀಕ್ಷಿಸಲು ಸಿರಸಿ ಬಳಿ ಕಾನಗೋಡಿಗೆ ಹೋದೆವು. ಆದರೆ ಅಲ್ಲಿ ಜನ ಆಗಲೇ ಸತ್ಯಾಗ್ರಹಕ್ಕೆ ಸಿದ್ಧರಾಗಿದ್ದು ನಾವು ಮಾಡಬೇಕಾದದ್ದು ಏನೂ ಇರಲಿಲ್ಲ. ಅಲ್ಲಿ ಸತ್ಯಾಗ್ರಹ ಯಶಸ್ವಿ ಆಯಿತು.

ಮುಂದಿನ ವಾರ ಬನವಾಸಿಯಲ್ಲಿ ಸತ್ಯಾಗ್ರಹ ಸಿದ್ಧತೆ ನಿರೀಕ್ಷಿಸಲು ನಾನು ಹೋದೆ. ಅಲ್ಲಿ ಸತ್ಯಾಗ್ರಹದ ಬಗ್ಗೆ ಸಹಾನುಭೂತಿ ಇತ್ತೇ ವಿನಾ ಊರವರು ಯಾರೂ ಸತ್ಯಾಗ್ರಹ ಮಾಡಲು ಮುಂದಾಗಲಿಲ್ಲ. ಸಂಜೆ ೫ಕ್ಕೆ ಸತ್ಯಾಗ್ರಹ ಎಂದು ಪ್ರಕಟಿಸಿದರೂ ಸತ್ಯಾಗ್ರಹ ಮಾಡುವವರು ಯಾರೆಂದು ಆ ಕ್ಷಣದವರೆಗೆ ಖಾತ್ರಿ ಇರಲಿಲ್ಲ. ಕಡೆಗೆ ಒಬ್ಬ ವಿವಾಹಿತ ತರುಣಿ ಹೆಗಲ ಮೇಲೆ ಕೊಡಲಿ ತೆಗೆದುಕೊಂಡು ಸತ್ಯಾಗ್ರಹಕ್ಕೆ ಬಂದಳು. (ಅವಳ ಹೆಸರು ನನಗೆ ನೆನಪಿಲ್ಲ, ಅವಳ ತವರು ಮನೆ ಕಲ್ಗುಂಡಿ ಕೊಪ್ಪದಲ್ಲಿತ್ತು.) ಅವಳ ಹಿಂದೆಯೇ ಸಾಯಂಕಾಲ ಶಾಸ್ತ್ರಿ ಎಂಬ ೬೦ ವರ್ಷದ ಮುದುಕರು ಕೊಡಲಿ ಹಿಡಿದುಕೊಂಡು ಸತ್ಯಾಗ್ರಹಕ್ಕೆ ಬಂದರು. ಹೀಗೆ ಸತ್ಯಾಗ್ರಹ ಯಶಸ್ವಿ ಆಯಿತು. ಅವರಿಬ್ಬರ ಬಂಧನವಾಯಿತು. ಪೋಲೀಸರು ಶಾಸ್ತ್ರಿಯವರಿಗೆ "ನಿನಗೆ ಎರೆಸ್ಟ್ ಮಾಡಿದೆ" ಎಂದು ಹೇಳಲು ಶಾಸ್ತ್ರಿಯವರು, "ನನಗೆ ಎಂಥ ಅರಿಷ್ಟ ಬರುತ್ತದೆ? ನಿಮ್ಮ ಪಾಪಿ ಸರಕಾರಕ್ಕೆ ಅರಿಷ್ಟ ಬಂದಿದೆ!" ಎಂದರು.

ಇದೇ ಕಾಲಕ್ಕೆ ನಾನು ಶಿರಸಿಯಲ್ಲಿ ಸತ್ಯಾಗ್ರಹ ಕರಪತ್ರ ನಡೆಸುತ್ತಿದ್ದೆ. ಇದೇ ಸಮಯದಲ್ಲಿ ಅಸಹಕಾರದ ಅಂಗವಾಗಿ ತಾಲೂಕಿನ ಬಹುತೇಕ ಗ್ರಾಮಾಧಿಕಾರಿಗಳು ತಮ್ಮ ನೌಕರಿಗೆ ರಾಜೀನಾಮೆಕೊಟ್ಟರು. ತಮ್ಮ ಕಡೆಗಿದ್ದ ದಫ್ತರುಗಳನ್ನು ಮೆರವಣಿಗೆಯಿಂದ ಹೋಗಿ ಮಾಮಲೇದಾರರಿಗೆ ಒಪ್ಪಿಸಿದರು. ಚಳುವಳಿಯ ಮುಂದಾಳು ಎಂದು ಕೆ. ಎ. ವೆಂಕಟರಾಮಯ್ಯನವರ ಬಂಧನವಾಯಿತು. ಆಗ ಅವರ ಸ್ಥಾನದಲ್ಲಿ ಧಾರವಾಡದ ಡಾ॥ ಕಬ್ಬೂರರು ಬಂದರು. ಆಗಾಗ ಧಾರವಾಡದಿಂದ ಬರುತ್ತಿದ್ದ ಅವರು ತಾಲೂಕಿನಲ್ಲಿ ತಿರುಗಿ ಕಾರ್ಯಕರ್ತರಿಗೆ ಧೈರ್ಯ, ಮಾರ್ಗದರ್ಶನ ನೀಡುತ್ತಿದ್ದರು. ೧೯೩೦ರಲ್ಲಿ ಮುಂದೆ ಹುಲ್ಲುಬನ್ನಿ ಸತ್ಯಾಗ್ರಹ ಆರಂಭಿಸಿದೆವು. ಶಿರಸಿ, ಸಿದ್ದಾಪುರಗಳಲ್ಲಿ ಅನೇಕರ ಬಂಧನವಾಯಿತು. ಅದೇ ವರ್ಷ ಕರನಿರಾಕರಣ ಚಳುವಳಿ ಶುರುಮಾಡಿದೆವು. ಸಿರಸಿಯಲ್ಲಿ ಶ್ರೀಧರ ಕಿಣಿ, ಗೋಪಾಳ ಮಡಗಾಂವಕರ, ವಾಮನ ಹೊದಿಕೆ ಹಾಗು ನಾನು ಸಂಘಟನಾ ಕಾರ್ಯ ಮಾಡಿದೆವು. ಆ ವರ್ಷ ಸಿರಸಿ, ಸಿದ್ದಾಪುರ ತಾಲ್ಲೂಕುಗಳಲ್ಲಿ ಅಡಿಕೆ ತೋಟಗಳಿಗೆ ಕೊಳೆರೋಗ ಬಂದಿದ್ದರಿಂದಲೂ ಕೂಲಿಯ ದರ ವಿಪರೀತ ಏರಿದ್ದರಿಂದಲೂ ಅಡಿಕೆಯ ದರ ಬಹಳ ಇಳಿದಿದ್ದರಿಂದಲೂ ತೋಟಗಾರರ ಸ್ಥಿತಿ ಬಹಳ ಕೆಟ್ಟಿತ್ತು.

ಈ ಬಗ್ಗೆ ವ್ಯಕ್ತಿಶಃ ಸರಕಾರಕ್ಕೆ ಅರ್ಜಿಮಾಡಿದರೂ ದಾದ್ ಪತ್ತಲಿಲ್ಲ. ಆದ್ದರಿಂದ ಈ ಎರಡು ತಾಲೂಕುಗಳಲ್ಲಿ ಆರ್ಥಿಕ ಕಾರಣದಿಂದಾಗ ಕರನಿರಾಕರಣ ಚಳುವಳಿ ಹೂಡಲಾಯಿತು. ಇದೇ ಕಾಲಕ್ಕ ಜೇಲಿನಿಂದ ಬಿಡುಗಡೆಯಾದ ರಂಗರಾವ್ ದಿವಾಕರರು ಶಿರಸಿಗೆ ಬಂದರು. ಹಳ್ಳಿಹಳ್ಳಿಗಳಲ್ಲೂ ಚಳುವಳಿ ನಡೆದು ಜಪ್ತಿ, ಬಂದನ ನಡೆಯಿತು. ಆದರೆ ರೈತರು ಹಿಂಜರಿಯಲಿಲ್ಲ. ಮುಂದೆ ಗಾಂಧೀಜಿ ಯವರ ಬಿಡುಗಡೆ ಆಗಿ ಮಾರ್ಚ್ ೧೯೩೧ರಲ್ಲಿ ಗಾಂಧೀ–ಇರ್ವಿನ್ ಒಪ್ಪಂದ ಆಯಿತು. ಒಪ್ಪಂದದವರೆಗೂ ಚಳುವಳಿ ನಡೆಯಿತು. ಒಪ್ಪಂದದ ಕರಾರುಗಳ ಪ್ರಕಾರ ಇದೇ ಕಾಲದಲ್ಲಿ ಅಂಕೋಲೆಯಲ್ಲಿ ರಾಜಕೀಯ ಕಾರಣದಿಂದ ಕೈಗೊಂಡ ಕರನಿರಾಕರಣ ಚಳುವಳಿ ನಿಲ್ಲಿಸಲಾಯಿತು. ಶಿರಸಿ, ಸಿದ್ದಾಪುರಗಳಲ್ಲಿ ಆರ್ಥಿಕ ಕಾರಣಗಳಿಗಾಗಿ ಚಳುವಳಿ ಮುಂದುವರಿಸಿದೆವು. ಆ ಬಗ್ಗೆ ಕೆ. ಪಿ. ಸಿ. ಸಿ.ಯಲ್ಲಿ ಚರ್ಚೆ ಆಯಿತು. ಯಾವ ಆರ್ಥಿಕ ಕಾರಣಗಳಿಂದಾಗಿ ಚಳುವಳಿಯನ್ನು ಆರಂಭಿಸಿದ್ದೆವೋ ಆ ಕಾರಣಗಳು ಹಾಗೆಯೇ ಮುಂದುವರೆದಿದ್ದವು. ಶಿರಸಿ, ಸಿದ್ದಾಪುರ ತಾಲ್ಲೂಕು ರೈತ ಮಹಾಮಂಡಲಗಳ ವತಿಯಿಂದ ತೆರಿಗೆ ಸೂಟು ಬಗ್ಗೆ ಸಾಮೂಹಿಕವಾಗಿ ಸನದ್‌ಶೀರ್ ಮಾರ್ಗದಿಂದ ಪ್ರಯತ್ನಿಸುವುದಕ್ಕೆ ನಿರ್ಧಾರ ವಾಯಿತು. ಹೀಗೆ ಶಿರಸಿ, ಸಿದ್ದಾಪುರಗಳಲ್ಲಿ ರೈತರು ತೀರ್ವೆಕೊಡಲಿಲ್ಲ. ಎರಡು–ಮೂರು ತಿಂಗಳು ಜಪ್ತಿ, ಬಂಧನ ಸಾಗಿತು. ದನಕರುಗಳನ್ನು ಜಪ್ತಿಮಾಡಿದರು. ಆಗ ರೈತರು ಇನ್ನಷ್ಟು ಕ್ರುದ್ಧರಾದರು. ಮುಂದೆ ದಿವಾಕರ್–ಸ್ಮಾರ್ಟ್ ಒಪ್ಪಂದ ಆಗಿ ಚಳುವಳಿ ನಿಂತಿತು. ಈ ಕಾಲದಲ್ಲಿ ನಮ್ಮ ಸಂಘಟನೆ ವ್ಯವಸ್ಥಿತವಾಗಿ ಇತ್ತು. ಸಮಾಚಾರಗಳನ್ನು ಸಾಗಿಸಲು ಸ್ವಯಂಸೇವಕರ ಒಂದು ಪರ್ಯಾಯ "ಅಂಚೆ ಇಲಾಖೆ"ಯನ್ನೇ ಸಂಘಟಿಸಿದ್ದೆವು. ಶಿರಸಿ, ಸಿದ್ದಾಪುರ, ಅಂಕೋಲೆಗಳಿಂದ ಸತ್ಯಾಗ್ರಹ ಕರಪತ್ರ ಹೊರಡಿಸುತ್ತಿದ್ದೆವು. ಚಳುವಳಿ ನಿಲ್ಲುವ ನಿರ್ಧಾರವಾದಾಗ ಕರತೆರಲು ಸೂಚನೆ ನೀಡಿ ಒಂದು ಬುಲೆಟಿನ್ ಹೊರಡಿಸಲು ಮಾಮಲೇದಾರರು ನನ್ನನ್ನು ಕೇಳಿಕೊಂಡರು. ಪ್ರಾಂತೀಯ ಕಾಂಗ್ರೆಸ್‌ವರಿಷ್ಠರಿಂದ ಸೂಚನೆ ಬರಬೇಕೆಂದು ನಾನು ಹೇಳಿದೆ.

ಕೊನೆಗೆ ದಿವಾಕರರು ಬಂದು ಪರಿಸ್ಥಿತಿ ವಿವರಿಸಿ ಸೂಚನೆ ನೀಡಿದಾಗಲೇ ಚಳುವಳಿ ಹಿಂದೆಗೆದರೂ ರೈತರ ಮೇಲೆ ಸರಕಾರದ ದಬ್ಬಾಳಿಕೆ ಮುಂದುವರಿಯಿತು.

ಎಲ್ಲಿಡೆ ನಮ್ಮ ಸ್ವಯಂಸೇವಕರು ಇದ್ದೇ ಇದ್ದರು. ಸಂಪರ್ಕ, ಪ್ರಚಾರ, ಮುಂದುವರಿಸಿದ್ದೆವು. ರೈತ ಮಹಾಮಂಡಲವು ರಚನಾತ್ಮಕ ಕಾರ್ಯಕೈಗೊಂಡಿತು. ಒಂದು ಆರ್ಥಿಕ ಸಮೀಕ್ಷಣೆ ನಡೆಸಲು ಕೆ. ಪಿ. ಸಿ. ಸಿ. ಮೂವರ ಒಂದು ಸಮಿತಿ

ನೇಮಿಸಿತು. ಇದರಲ್ಲಿ ದ. ಪ. ಕರಮರಕರ್, ಬೆಳಗಾವಿಯ ವಕೀಲರಾದ ನಾರಾಯಣ ಜೋಷಿ ಮತ್ತು ನಾನು ಇದ್ದೆವು. ಜಿಲ್ಲೆಯ ರೈತರ ಸ್ಥಿತಿಗತಿ ಬಗ್ಗೆ ನಾವು ವರದಿ ಸಲ್ಲಿಸಿದೆವು.

ಲಂಡನ್‌ನಿಂದ ಗಾಂಧೀಜಿ ಮರಳಿದಾಗ ಸಂಧಾನದ ಆಶಾಕಿರಣ ಕಾಣದಾಗಲು ಮತ್ತೆ ಚಳುವಳಿಗೆ ಕರೆಕೊಟ್ಟರು. ೧೯೩೨ರ ಕರನಿರಾಕರಣ ಶುರುವಾಗುವುದಕ್ಕೆ ಮೊದಲು ದಿವಾಕರರೂ, ನಾನೂ ಶಿರಸಿ ಸಿದ್ದಾಪುರದ ಎಲ್ಲ ಹಳ್ಳಿಗಳಿಗೆ ಹೋಗಿ ಬಂದೆವು. ಜನರು ಸಿದ್ಧರಾಗಿಯೇ ಇದ್ದರು. ಇದೇ ಕಾಲಕ್ಕೆ ನಾನು ಮುಂಡ-ಗೇಸರದಲ್ಲಿ ಸುಮಾರು 15 ಸ್ವಯಂಸೇವಕರ ಒಂದು ಶಿಬಿರ ನಡೆಸಿದ್ದೆ. ಅದಕ್ಕೆ ಕರಿಯಪ್ಪ ಎರೆಸೀಮೆ (ಸಂಗೂರ) ನಾಯಕರಾಗಿದ್ದರು. ಈ ಕಾಲದಲ್ಲಿ ಶೀಘ್ರವೇ ಕಾಂಗ್ರೆಸ್ ನಾಯಕರ ಬಂಧನವಾಗುವುದೆಂಬ ವಾರ್ತೆ "ಫ್ರೀಪ್ರೆಸ್ ಜರ್ನಲ್"ದಲ್ಲಿ ಬಂತು. ಶಿಬಿರಾರ್ಥಿಗಳಿಗೆ ಮುಂದಿನ ಕಾರ್ಯದ ಸೂಚನೆ ನೀಡಿ ಶಿಬಿರವನ್ನು ಬರಖಾಸ್ತು ಮಾಡಿದೆ. ಹೇರೂರು ಭಾಗದಲ್ಲಿ ಚಳುವಳಿ ನಡೆಸಲು ಕರಿಯಪ್ಪ ತೆರಳಿದರು. ೧೯೩೩ರ ವರೆಗೂ ಆ ಭಾಗದಲ್ಲಿ ಅವರು ಚಳುವಳಿ ಮುಂದುವರಿಸಿದರು. ಗುಜರಾತಿನಲ್ಲಿ ಚಳುವಳಿಯನ್ನು ದಬ್ಬಿ ಹಾಕಿದರೂ ಸಿದ್ದಾಪುರದಲ್ಲಿ ಇನ್ನೂ ಚಳುವಳಿ ನಡೆದ ಬಗ್ಗೆ ಕಾರವಾರಕ್ಕೆ ಬಂದ ಗವರ್ನರರು ಅಚ್ಚರಿಯನ್ನು ಬಹಿರಂಗವಾಗಿ ವ್ಯಕ್ತಮಾಡಿದರು. ಇದು ಕರಿಯಪ್ಪನವರ ಕೌಶಲ್ಯಕ್ಕೆ ಸಾಕ್ಷಿ; ಮುಂದೆ ಅವರ ಬಂಧನ ಆಯಿತು,

೧೯೩೨ರಲ್ಲಿ ಶಿರಸಿ ತಾಲ್ಲೂಕಿನಲ್ಲಿ ಕೆಲವು ವ್ಯಕ್ತಿಗಳು ಮಾತ್ರ ಕರನಿರಾಕರಣದಲ್ಲಿ ಭಾಗವಹಿಸಿದರು. ಆದರೆ ಸಿದ್ದಾಪುರದ ಮಟ್ಟಿಗೆ ಅದು ಸಾಮೂಹಿಕ ಕರನಿರಾಕರಣೆಯಾಗಿತ್ತು. ನಾನು ಮುಂದೆ ಶಿರಸಿ ತಾಲೂಕಿನಲ್ಲಿ ಜಂಗಲ್ ಸತ್ಯಾಗ್ರಹ ಮಾಡಿ ಬಂಧಿತನಾದೆ. ೧೯೩೨ರ ಆರಂಭದಲ್ಲಿಯೇ ನನಗೆ ೧೫ ತಿಂಗಳ ಶಿಕ್ಷೆಯಾಗಿ ಕಾರವಾರ, ವಿಸಾಪುರಗಳಲ್ಲಿ ಶಿಕ್ಷೆ ಅನುಭವಿಸಿದೆ. ಬಿಡುಗಡೆ ಆದ ನಂತರ ಸುಪಾದಲ್ಲಿದ್ದು ಪೆರೋಲ್ ಕೊಡಲು ನನಗೆ ಹುಕುಂ ಆಯಿತು. ನಾನು ಈ ಹುಕುಮನ್ನು ಭಂಗಿಸಿದೆ. ಇದರಿಂದ ನನಗೆ ೧೫ ತಿಂಗಳ ಶಿಕ್ಷೆಯಾಗಿ ಕಾರವಾರ ಜೇಲಿನಲ್ಲಿ ಇದ್ದೆ (೧೯೩೪-೩೫).

೧೯೩೨-೩೩ರಲ್ಲಿ ಸಿದ್ದಾಪುರದಲ್ಲಿ ಕರನಿರಾಕರಣ ನಡೆದಾಗ ಅಂಕೋಲ ತಾಲ್ಲೂಕಿನಲ್ಲೂ ಕರನಿರಾಕರಣ ನಡೆದಿದ್ದು ಅಲ್ಲಿನ ರೈತರು ಕೊನೆಯವರೆಗೂ ದೃಢತೆಯಿಂದ ಚಳುವಳಿಯನ್ನು ಮುಂದುವರೆಸಿದರು. ೧೯೩೪ರಲ್ಲಿ ಗಾಂಧೀಜಿ ಸಾಮುದಾಯಿಕ ಸತ್ಯಾಗ್ರಹ ನಿಲ್ಲಿಸಿದ್ದರಿಂದ, ಜೇಲಿನಿಂದ ಬಿಡುಗಡೆಯಾದ ನಾನು, ವಾಮನ ಹೊದಿಕೆ ಸ್ವಾವಲಂಬನದ ಜೀವನ ನಡೆಸುವ ಉದ್ದೇಶದಿಂದ ಫಾರ್ಮ್ ಒಂದನ್ನು ಮಾಡಿಕೊಂಡು ದುಡಿಯ ಹತ್ತಿದೆವು. ನಮ್ಮ ಜತೆ ಶ್ರೀಧರ ಕಿಣಿ,

ಗೋಪಾಳ ಕಿಣಿ, ನಾರಾಯಣ ಭಟ್ ಮುಸ್ಕಿ, ಸುಬ್ರಾಯ ಹೆಗ್ಡೆ ಮುಸ್ಕಿ, ರಾಮಚಂದ್ರ ಹೆಗ್ಡೆ ಹುಲಿಮನಿ ಇವರುಗಳಿದ್ದರು. ಎರಡು ವರ್ಷ ಈ ಪ್ರಯೋಗ ನಡೆಯಿತು. ೧೯೩೭ರ ಚುನಾವಣೆಯಲ್ಲಿ ನಾನು ಪ್ರಚಾರಕ್ಕೆ ಹೋಗಲಿಲ್ಲ. ಭಾಗವಹಿಸುವ ಬಗ್ಗೆ ಗಾಂಧೀಜಿಯವರ ದೃಷ್ಟಿ ಖಚಿತವಾಗಿರದ್ದೇ ಇದಕ್ಕೆ ಕಾರಣ. ಮುಂದೆ ಕಾಂಗ್ರೆಸ್ ಸರಕಾರ ಬಂದಾಗ ಸರಕಾರದ ಯೋಜನೆಗಳು ಜನರಿಗೆ ಲಾಭಕರವಾಗುವಂತೆ ಮಾಡ್ಲು ಶ್ರಮಿಸಿದೆವು. ಹೊದಿಕೆಯವರು ಶಿಕ್ಷಣ ಸಮಿತಿ ಸ್ಥಾಪಿಸಿ ಹಳ್ಳಿಗಳಲ್ಲಿ ಅನೇಕ ಪ್ರಾಥಮಿಕ ಶಾಲೆಗಳನ್ನು ತೆರೆದರು. ನಾನು ಜಂಗಲಕ್ಕೆ ಸಂಬಂಧಿಸಿದ ರೈತರ ತೊಂದರೆಗಳ ನಿವಾರಣೆಗೆ ಶ್ರಮಿಸಿದೆ. ಪಾನ ನಿರೋಧದ ಬಗ್ಗೆ ಪ್ರಚಾರ, ಅದರ ಕಾರ್ಯಾಚರಣೆಗೆ ಆಗಿನ ಕಾಂಗ್ರೆಸ್ ಸರಕಾರಕ್ಕೆ ನೆರವು ನೀಡುವುದು ಮುಂದುವರಿಸಿದೆ.

ಸಿದ್ದಾಪುರ, ಬೀಳಗಿಗಳಲ್ಲಿ ಖಾದಿ ವಸ್ತ್ರ ಸ್ವಾವಲಂಬನ ಕಾರ್ಯಕ್ರಮಗಳನ್ನು ಆರಂಭಿಸಲಾಯಿತು. ಆರಂಭದಲ್ಲಿ ನೂಲುವುದು ಮಾತ್ರ ಇತ್ತು. ಸಾವಿರದ ಒಂಭೈನೂರ ನಲವತ್ತ ಮೂರರಲ್ಲಿ ಅಲ್ಲಿ ಮಗ್ಗಗಳನ್ನು ಹಾಕಿಸಿದೆವು. ಹರಿಜನರಿಗೆ ದೇವಾಲಯಗಳನ್ನು ತೆರವು ಮಾಡುವ ಯತ್ನ ಇದೇ ಕಾಲದಲ್ಲಿ ಆಯಿತು. ಶಿರಸಿಯ ಶ್ರೀಧರ ಕಿಣಿ ಇದರಲ್ಲಿ ಮುಂದಾಳುತ್ವ ವಹಿಸಿದರು.

೧೯೪೧ರಲ್ಲಿ ಜಿಲ್ಲೆಯಿಂದ ವೈಯಕ್ತಿಕ ಸತ್ಯಾಗ್ರಹ ಮಾಡುವವರ ಯಾದಿ ಯನ್ನೂ ಗಾಂಧೀಜಿಯವರ ಸೂಚನೆಯಂತೆ ತಯಾರು ಮಾಡಿ ಅವರ ಕಡೆ ಕಳುಹಿಸಿದೆ. ಯಾದಿಯಂತೆ ಕ್ರಮಕ್ರಮವಾಗಿ ಎಲ್ಲಾ ಸತ್ಯಾಗ್ರಹಿಗಳ ಬಂಧನ ವಾದ ನಂತರ ನಾನು ಕುಮಟೆಯಲ್ಲಿ ಸತ್ಯಾಗ್ರಹ ಮಾಡಿದೆ. ಅಲ್ಲಿ ನನ್ನ ಬಂಧನ ವಾಗಲಿಲ್ಲ. ವೈಯಕ್ತಿಕ ಸತ್ಯಾಗ್ರಹದ ನಿಯಮದಂತೆ ನಾನು ಪಾದಚಾರಿಯಾಗಿ ಊರಿಂದ ಊರಿಗೆ ಯುದ್ಧ ವಿರೋಧಿ ಘೋಷಣೆಯನ್ನು ಮಾಡುತ್ತ ಎರಡು–ಮೂರು ದಿನ ಮುಂದೆ ಸಾಗಿದೆ. ಅಷ್ಟರಲ್ಲಿ ಪರಿಸ್ಥಿತಿ ಬದಲಾಗಿತ್ತು. ಗಾಂಧೀಜಿ ಯವರು ನನ್ನ ಪತ್ರಕ್ಕೆ ಉತ್ತರವಾಗಿ ಈ ಬದಲಾದ ಪರಿಸ್ಥಿತಿಯಲ್ಲಿ ಸತ್ಯಾಗ್ರಹ ನಿಲ್ಲಿಸಿ ವಿಧಾಯಕ ಕಾರ್ಯ ಕೈಗೊಳ್ಳಲು ಸೂಚನೆ ಕಳುಹಿಸಿದರು. ಆದ್ದರಿಂದ ನಾನು ಹಿಂತಿರುಗಿದೆ. ೧೯೪೨ರಲ್ಲಿ ಗಾಂಧೀಜಿಯವರ ಬಂಧನವಾದಾಗ ನಾನು ಕುಮಟೆಯಲ್ಲಿ ಇದ್ದೆ. ಈಗ ನಮ್ಮ ಬಂಧನವಾಗುವುದೆಂದು ಗೊತ್ತಾಗಿ ಕುಮಟೆ ಯಲ್ಲಿ ಖಾದಿ ಮಗ್ಗದವರಿಗೆ ಯೋಗ್ಯ ಸೂಚನೆ ನೀಡಿ ಆಗಸ್ಟ್ ೯ರ ಸಂಜೆ ಸಾರ್ವಜನಿಕ ಸಭೆ ಕರೆದೆವು. "ಇದು ಕಾನೂನು ವಿರೋಧಿ ಸಭೆ, ಇದರಲ್ಲಿ ಭಾಗವಹಿಸಿದ ನಿಮ್ಮ ಮೇಲೆ ಲಾಠಿಚಾರ್ಜ್ ಆಗಬಹುದು, ಅಥವಾ ಬೇರೆ ಶಿಕ್ಷೆ ಯಾಗಬಹುದು. ಯಾರಿಗೆ ಎದ್ದು ಹೋಗಲು ಅನಿಸುತ್ತದೆಯೋ ಅವರು

ಹೋಗಲು ಅಡ್ಡಿಯಿಲ್ಲ", ಎಂದು ನೆರೆದ ಜನರಿಗೆ ಸೂಚನೆಕೊಟ್ಟೆ. ಜನ ಚದುರುವ ಬದಲು ಧೃಢವಾಗಿ ನಿಂತರು. ಕುಮಟೆಯಲ್ಲಿ ಸ್ವಯಂಸೇವಕರ • ಸಂಘಟನೆ ಬಲು ಚೆನ್ನಾಗಿತ್ತು. ವ್ಯಾಪಾರಿಗಳು ಸದಾ ನಮಗೆ ಸಹಕಾರ ನೀಡಿದ್ದರು. ಸಭೆಯ ನಂತರ ನನ್ನೊಬ್ಬನದೇ ಬಂಧನ ಆಯಿತು. ಮುಂದೆ ಇಪ್ಪತ್ತು ತಿಂಗಳು ಸ್ಥಾನಬದ್ಧತೆಯಲ್ಲಿ ಹಿಂಡಲಗಿ ಜೇಲಿನಲ್ಲಿ ಇದ್ದು ೧೯೪೪ರಲ್ಲಿ ನನ್ನ ಬಿಡುಗಡೆ ಆಯಿತು. ಆಗಲೇ ನಾನು ಅಂಕೋಲೆಗೆ ಬಂದು ಗ್ರಾಮಸೇವಾ ಸಮಿತಿ ಸ್ಥಾಪಿಸಲು ನೆರವಾಗಿ ಖಾದಿ ಮತ್ತು ಗ್ರಾಮೋದ್ಯೋಗಗಳಿಗೆ ಪ್ರೋತ್ಸಾಹ ನೀಡಲು ತೊಡಗಿ ವಿಧಾಯಕ ಕಾರ್ಯಗಳಲ್ಲಿ ನನ್ನ ಶಕ್ತಿಯನ್ನು ಕೇಂದ್ರೀಕರಿಸಿದೆ.

## ಭಾಗ ೩

ನಾನು ೧೯೨೪ ನವೆಂಬರದಿಂದ ೧೯೨೬ ಫೆಬ್ರುವರಿ ತನಕ ಸಾಬರಮತಿ ಸತ್ಯಾಗ್ರಹಾಶ್ರಮದಲ್ಲಿದ್ದೆ. ಆ ಸಮಯದಲ್ಲಿ ಗಾಂಧೀಜಿಯವರು ಖಾದಿ ಕಾರ್ಯದ ಸಂಘಟನೆಗಾಗಿ ಭಾರತ ತುಂಬ ಸಂಚಾರ ಕೈಗೊಂಡಿದ್ದರು. ನಡುನಡುವೆ ತಿಂಗಳಿಗೆ ಎರಡು ತಿಂಗಳಿಗೊಮ್ಮೆ ಆಶ್ರಮಕ್ಕೆ ಬರುತ್ತಿದ್ದರು. ನಾಲ್ಕು ಹತ್ತು ದಿನ ಇದ್ದು ಪುನಃ ಸಂಚಾರಕ್ಕೆ ಹೋಗುತ್ತಿದ್ದರು. ಗಾಂಧೀಜಿಯವರು ಬರುತ್ತಾರೆಂದು ತಿಳಿದ ಕೂಡಲೇ ಇಡೀ ಆಶ್ರಮದಲ್ಲಿ ಒಂದು ವಿದ್ಯುತ್ ಸಂಚಾರವೇ ಆಗುತ್ತಿತ್ತು. ವಿಶೇಷತಃ ಮಕ್ಕಳಿಗೆ ತುಂಬ ಉಲ್ಲಾಸ, ಸಂತೋಷ. ಒಂದು ದಿನ ಸಾಯಂಕಾಲ ಪ್ರಾರ್ಥನೆಯ ಸಮಯದಲ್ಲಿ ನಡೆದ ಘಟನೆ. ಗಾಂಧೀಜಿಯವರು ಪ್ರಾರ್ಥನೆಗೆ ಹೊರಟೊಡನೆ ಮಕ್ಕಳೂ ಅವರನ್ನು ಸುತ್ತುವರಿದು ಅವರೊಡನೆ ಬಾಲಚೇಷ್ಟೆ ಮಾಡುತ್ತ ಬರುತ್ತಿದ್ದರು. ಬಾಪೂಜಿಯವರೂ ಅವರೊಡನೆ ಹಾಸ್ಯ–ವಿನೋದ ಮಾಡುತ್ತಿದ್ದರು. ಬಾಪೂಜಿಯವರು ಪ್ರಾರ್ಥನಾ ಸ್ಥಳಕ್ಕೆ ಬಂದು ಆಸನಸ್ಥರಾದ ಮೇಲೆ ಸಹ, ಮಕ್ಕಳು ಬಾಪೂಜಿಯವರೊಡನೆ ತಮ್ಮ ವಿನೋದ ನಡೆಸುತ್ತಿದ್ದರು. ಆದರೆ ಪ್ರಾರ್ಥನೆಯ ಸೂಚನೆಯಾದೊಡನೆ ಮಕ್ಕಳಿಗೆ "ಹಮೇ ತೋ ಮೌನ ರಾಖ ವಾನು ಛೆ" 'ಈಗ ಮೌನ ಪಾಲಿಸತಕ್ಕದ್ದಿದೆ' ಎಂದು ಹೇಳಿದ ಕೂಡಲೇ ಎಲ್ಲ ಮಕ್ಕಳೂ ಬಾಪೂಜಿಯವರಂತೆ, ಒಮ್ಮೆಲೆ ಧ್ಯಾನಸ್ಥರಾಗಿ ಕುಳಿತುಬಿಡುತ್ತಿದ್ದರು. ಹೀಗಿತ್ತು ಬಾಪೂಜಿಯವರ ಪ್ರೇಮ ಸಾಮ್ರಾಜ್ಯ. ಆ ದಿವಸ ಪ್ರಾರ್ಥನೆಯ ಕೊನೆಗೆ ಶ್ರೀ ಬಾಳಕೋಬಾ ಭಾವೆಯವರು (ವಿನೋಬಾಜಿಯವರ ತಮ್ಮನವರು) ಕೇನೋಪನಿಷತ್ತಿನ ಕೊನೆಯ ಶ್ಲೋಕವನ್ನು ತಮ್ಮ ಇಂಪಾದ ಸ್ವರದಲ್ಲಿ ಹಾಡಿ ವಿವರಿಸಿ ಹೇಳುತ್ತಿದ್ದರು—

"ತಸ್ಸೈ ತಪೋ ಧರ್ಮಃ ಕರ್ಮೇತಿ ಪ್ರತಿಷ್ಠಾ...."

ಬಾಳಕೋಬಾಜಿಯವರ ಪ್ರವಚನ ಮುಗಿದೊಡನೆ, ಬಾಪೂಜಿಯವರು ಆದಿನ ತನ್ನೊಡನೆ ಹಾಸ್ಯ-ವಿನೋದ ಮಾಡುತ್ತ ಬಂದಿದ್ದ ಓರ್ವ ಹುಡುಗಿಗೆ ಪ್ರಶ್ನೆ ಮಾಡಿದರು—ಆ ಹುಡುಗಿಯ ವಯಸ್ಸು ಅಜಮಾಸು ಒಂಭತ್ತು.

"ಬಾಳಕೋಬಾಜಿಯವರು ಹೇಳಿದ್ದನ್ನು ಲಕ್ಷ್ಯಕೊಟ್ಟು ಕೇಳಿದೆಯಾ? ಅವರು ಏನು ಹೇಳಿದರು?"

"ದೇವರನ್ನು ಕಾಣುವ ದಾರಿಯನ್ನು ಅವರು ಹೇಳಿದರು" ಎಂದು ಆ ಬಾಲಿಕೆ ಕೊಂಚವೂ ಹಿಂದೆಗೆಯದೆ ಉತ್ತರ ಕೊಟ್ಟಳು.

"ಆ ದಾರಿ ಯಾವುದು ?"

"ಅದಕ್ಕಾಗಿ ತಪವನ್ನಾಚರಿಸಬೇಕು" ಎಂದು ಆಕೆ ಅಷ್ಟೇ ತತ್ಪರತೆಯಿಂದ ಉತ್ತರಕೊಟ್ಟಳು.

"ತಪವನ್ನಾಚರಿಸಬೇಕೆಂದರೆ ಏನು ಮಾಡಬೇಕು?"

"ಬ್ರಹ್ಮಚರ್ಯದಿಂದಿರಬೇಕು" ಎಂದೂ ಉತ್ತರಬಂದಿತು.

"ಹಾಗೆಂದರೇನು?"

"ನ ಥೀ ಪರಣವಂ" (ಮದುವೆ ಮಾಡಿಕೊಳ್ಳತಕ್ಕದ್ದಲ್ಲ) ಎಂದು ಆ ಹುಡುಗಿ ದಿಟ್ಟತನದಿಂದ ನುಡಿದಳು.

ಬಾಪೂಜಿಯವರು ಆಕೆಯ ಬೆನ್ನು ಚಪ್ಪರಿಸಿದರು.

ನಾವೆಲ್ಲರೂ ಆ ಬಾಲಿಕೆಯ ಸಮರ್ಪಕ ಉತ್ತರಗಳನ್ನು ಕೇಳಿ ಚಕಿತರಾದೆವು.

ಹೀಗಿತ್ತು ಬಾಪೂಜಿಯವರ ಶಿಕ್ಷಣ ಕಲೆ. ಚಿಕ್ಕ ಮಕ್ಕಳಿಗೂ ಆಧ್ಯಾತ್ಮ ಜ್ಞಾನವನ್ನು ಕೊಡುವುದು ಸಂಭವವಿದೆಯೆಂದು ಅವರು ಯಾವಾಗಲೂ ಪ್ರತಿಪಾದಿಸುತ್ತಿದ್ದರು. ಚಾರಿತ್ರ್ಯದ ತೇಜದಿಂದಲೇ ಜ್ಞಾನದ ಕಿರಣಗಳು ಹೊರಹೊಮ್ಮುವವು, ಎಲ್ಲರನ್ನೂ ಪಾವನಗೊಳಿಸುವವು.

ಗಾಂಧೀಜಿಯವರ ನಡೆಯಲ್ಲಿ, ನುಡಿಯಲ್ಲಿ, ಹಾಸ್ಯದಲ್ಲಿಯೂ, ನಿದ್ರೆಯಲ್ಲಿಯೂ ಸಹ ಸ್ಥಿತಪ್ರಜ್ಞ ಯೋಗವು, ಆಧ್ಯಾತ್ಮ ಯೋಗವೂ ಸಹಜವಾಗಿ ಮಿನುಗುತ್ತಿತ್ತು. ಆದುದರಿಂದ ಸರಳ ಅಂತಃಕರಣದ ಬಾಲಕ-ಬಾಲಿಕೆಯರು ಸಹ ಆ ಮಹಾತ್ಮ ರೊಡನೆ ಆಟವಾಡುತ್ತ, ವಿನೋದ ಮಾಡುತ್ತ, ಆಧ್ಯಾತ್ಮದ ಅಮೃತವನ್ನು ಸವಿಯುತ್ತಿದ್ದರು.

ಅದೇ ಸಮಯದಲ್ಲಿ ನಡೆದ ಇನ್ನೊಂದು ಘಟನೆ. ಗಾಂಧೀಜಿಯವರ ಮೊಮ್ಮಗಳು–ಅವರ ಹಿರಿಯ ಮಗ ಶ್ರೀ ಹಿರಾಲಾಲ ಗಾಂಧೀ ಅವರ ಹಿರೇ ಮಗಳ ವಿವಾಹ ಸಮಾರಂಭಕ್ಕೆ ಸಂಬಂಧಿಸಿದ್ದು. ಹಿರಾಲಾಲ ಗಾಂಧೀಯವರು ಕಲಕತ್ತಾ ಕಡೆ ಇರುತ್ತಿದ್ದರು. ಅವರು ಅಡ್ಡಹಾದಿ ಹಿಡಿದಿದ್ದರು. ಆದುದರಿಂದ ಗಾಂಧೀಜಿಯವರು ಅವರ ಇಬ್ಬರು ಹೆಣ್ಣು ಮಕ್ಕಳನ್ನು ಹಾಗೂ ಇಬ್ಬರು ಗಂಡು ಮಕ್ಕಳನ್ನು ತಮ್ಮ ಆಶ್ರಮದಲ್ಲಿಯೇ ತಂದಿರಿಸಿಕೊಂಡಿದ್ದರು. ಗುಜರಾಥಿ ಪದ್ಧತಿಯಂತೆ ಹಿರೇ ಹುಡುಗಿಯ ವಿವಾಹದ ಕುರಿತು ವಾಂಗ್ನಿಶ್ಚಯ ಎಷ್ಟೋ ವರುಷಗಳ ಹಿಂದೆಯೇ ಆಗಿರಬೇಕು. ಪ್ರತ್ಯಕ್ಷ ವಿವಾಹವು ಜರಗುವದಿತ್ತು. ಒಂದು ದಿನ ಸಾಯಂಕಾಲ ಪ್ರಾರ್ಥನೆ ಮುಗಿದೊಡನೆ ಗಾಂಧೀಜಿಯವರು ಎಲ್ಲರನ್ನುದ್ದೇಶಿಸಿ ಹೇಳಿದರು—"ನಾಳೆ ಪ್ರಾತಃಕಾಲದ ಪ್ರಾರ್ಥನೆಯಾದ ನಂತರ ಕೆಲ ಮಹತ್ವದ ಮಾತುಗಳನ್ನು ಹೇಳುವವನಿದ್ದೇನೆ. ಆದುದರಿಂದ ನಾಳೆಯ ಪ್ರಾತಃ ಪ್ರಾರ್ಥನೆಯ ಸಮಯದಲ್ಲಿ ಎಲ್ಲರೂ ಉಪಸ್ಥಿತರಿರಬೇಕು. ಯಾರು ಕೆಲವರು ಪ್ರಾತಃ ಕಾಲದ ಪ್ರಾರ್ಥನೆಗೆ ಸಾಮಾನ್ಯವಾಗಿ ಹಾಜರಿರುವುದಿಲ್ಲವೋ ಅವರಿಗೂ ಸಹ ತಪ್ಪದೆ ಬರಲು ತಿಳಿಸಬೇಕು" ಎಂದು ಹೇಳಿದರು.

ಮರುದಿನ ಪ್ರಾತಃಕಾಲದ ಪ್ರಾರ್ಥನೆಯು, ಅಂದಿನ ಹವೆಯ ಅನುಕೂಲತೆಯಿಂದ, ಅವರ ವಸತಿಯ ಪಡಶಾಲೆಯಲ್ಲಿಯೇ ಜರುಗಿತು. ಆಶ್ರಮ ನಿವಾಸಿ ಸ್ತ್ರೀ ಪುರುಷರೆಲ್ಲರೂ ಉಪಸ್ಥಿತರಿದ್ದರು. ಪ್ರಾರ್ಥನೆ ಮುಗಿಯಿತು. ನಾವೆಲ್ಲರೂ ಇಂದು ಗಾಂಧೀಜಿಯವರು ಯಾವ ಮಹತ್ವದ ವಿಷಯದ ಕುರಿತು ಮಾತನಾಡುವರೆಂದು ಕುತೂಹಲದಿಂದ ಇದ್ದೆವು.

ಗಾಂಧೀಜಿಯವರು ಸಾವಕಾಶವಾಗಿ ಗಂಭೀರ ದನಿಯಲ್ಲಿ ಮಾತು ಪ್ರಾರಂಭಿಸಿದರು. "ಈ ವಾರದಲ್ಲಿ ರಾಮೀಬಹನಳ ವಿವಾಹವು ಇಲ್ಲಿ ಜರುಗಲಿದೆ. ನಾವು ಆಶ್ರಮವಾಸಿಗಳು ದರಿದ್ರನಾರಾಯಣನ ಸೇವಕರು. ನಮ್ಮ ಜೀವನವು ಅದಕ್ಕನುರೂಪವಾಗಿ ನಡೆದರೇ ನಾವು ಆ ದರಿದ್ರ ನಾರಾಯಣನ ಸೇವಕರೆನಿಸಿಕೊಳ್ಳಲು ಪಾತ್ರತೆ ತಂದುಕೊಳ್ಳಬಹುದು. ಈ ದೃಷ್ಟಿಯಿಂದ ಇಲ್ಲಿ ನಡೆಯುವ ವಿವಾಹವಾದರೋ ತೀರ ಸಾದಾತನದಲ್ಲಿ ನಡೆಯಬೇಕು. ಬರುವ ಬೀಗರಿಗೆ ಕೊಡುವ ಊಟ ಸಹ ಸಿತ್ಯದ ರೊಟ್ಟಿ, ಬೇಳೆ, ಪಲ್ಲೆ ಹೀಗೆ ಸಾದಾ ಊಟ ಇರುವುದು; ಉಡುಗೊರೆ ಬಗ್ಗೆ ಶ್ರೀ ಬಜಾಜರಂಥವರು ಬೇಕಾದ ವಸ್ತು ತಂದು ಕೊಡುವೆ ಎಂದೂ 'ಬಾ'ಳಿಗೆ (ಕಸ್ತೂರ ಬಾ ಅವರಿಗೆ) ಹೇಳಬಹುದು. ಅಂಥ ಯಾವದನ್ನೂ ಸ್ವೀಕರಿಸತಕ್ಕದ್ದಲ್ಲ. ಸಾದಾತನದಲ್ಲಿ ಸತ್ಯನಿದೆ, ಗಾಂಭೀರ್ಯವಿದೆ" ಎಂದು ಹೇಳಿದರು. ಹೆಜ್ಜೆ ಹೆಜ್ಜೆಗೆ ಅವರು ಸತ್ಯದ ದಾರಿಯಿಂದ ಸ್ವಲ್ಪವೂ ವಿಚಲಿತರಾಗದಂತೆ ಜಾಗ್ರತೆವಹಿಸುತ್ತ, ಪರಮಾತ್ಮನೊಡನೆ ತನ್ನ ಅನುಸಂಧಾನವನ್ನು ಹೇಗೆ ಸ್ಥಿರವಾಗಿರಿಸಿಕೊಳ್ಳುತ್ತಿದ್ದರೆಂಬುದು ನಮಗೆಲ್ಲರಿಗೂ ಸ್ಪಷ್ಟವಾಯಿತು.

ಸತ್ಯದ ಅನನ್ಯ ಉಪಾಸಕರಾಗಿದ್ದ ಗಾಂಧೀಜಿಯುವರು ತಮ್ಮ ಸ್ವಭಾವದಲ್ಲಿ ಪಾರದರ್ಶಕತೆಯನ್ನು (Transparency) ಸಂಪೂರ್ಣ ಅಳವಡಿಸಿಕೊಂಡಿದ್ದರು. ತನ್ನ ದೋಷಗಳನ್ನು, ಇಷ್ಟೇ ಅಲ್ಲ, ತನ್ನ ಸಂಸ್ಥೆಯಲ್ಲಿರಬಹುದಾದ ನ್ಯೂನತೆಗಳನ್ನು ಅವರು ಸಾರ್ವಜನಿಕರಲ್ಲಿ ಪ್ರಕಟಗೊಳಿಸಲು ಸ್ವಲ್ಪವೂ ಹಿಂಜರಿಯುತ್ತಿದ್ದಿಲ್ಲ. ಸಾಬರಮತಿ ಆಶ್ರಮದಲ್ಲಿ ಎರಡು ವಿಭಾಗಗಳಿದ್ದವು. ಒಂದು ಆಶ್ರಮ, ಮತ್ತೊಂದು ರಾಷ್ಟ್ರೀಯ ಶಾಲೆ. ಈ ಎರಡೂ ವಿಭಾಗಗಳ ಸಂಚಾಲಕರಲ್ಲಿ ವಿಚಾರಭೇದ ದೃಷ್ಟಿಭೇದದ ಮೂಲಕ, ಮತಭೇದಗಳುಂಟಾಗುತ್ತಿದ್ದವು. ಒಮ್ಮೆ ಇವಕ್ಕೆ ಕೆಲಮಟ್ಟಿಗೆ ತೀವ್ರ ಸ್ವರೂಪ ಬಂದಿತು. ಗಾಂಧೀಜಿಯುವರು ಇದರ ನಿವಾರಣೆಗಾಗಿ, ಎರಡೂ ವಿಭಾಗಗಳಲ್ಲಿ ಕೆಲಸಮಾಡುವವರ ಹಾಗೂ ಸಂಚಾಲಕರ ಸಮ್ಮಿಲಿತ ಸಭೆಯನ್ನು ಕರೆದರು. ಆಕಾಲಕ್ಕೆ ಆಶ್ರಮದಲ್ಲಿ ದೇಶದ ಬೇರೆ ಬೇರೆ ಭಾಗಗಳಿಂದ, ವಿವಿಧ ವಿಧಾಯಕ ಕಾರ್ಯಗಳಲ್ಲಿ ತರಬೇತಿ ಪಡೆಯುಲು ಬಂದ ಅನೇಕ ಜನರಿದ್ದರು. ಗಾಂಧೀಜಿ ಹೇಳಿದರು—

"ಇಂಥವರಲ್ಲಿ ಸಹ ಯಾರಿಗೆ ಆಸ್ಥೆಯಿದೆಯೋ ಅವರು ಸಹ ಈ ಸಭೆಗೆ ಬರಲು ಯಾವದೇ ಆತಂಕವಿಲ್ಲ" ಎಂದು. ನಿಜವಾಗಿ ನೋಡಿದರೆ, ಇದು ಆಶ್ರಮದ ಒಳ ಆಡಳಿತಕ್ಕೆ, ಆಶ್ರಮದ ಅಂತರ್ಗತ ವ್ಯವಸ್ಥೆಗೆ ಸಂಬಂಧಪಟ್ಟ ವಿಷಯ. ಆಶ್ರಮದಲ್ಲಿ ಉಂಟಾದ ಮತಭೇದಗಳ ಚರ್ಚೆ ಸಕಲರ ಮುಂದೆ ಮಾಡುವ ಅವಶ್ಯಕತೆಯಾದರೂ ಏನು ? ಔಚಿತ್ಯವೇನು ? ಹೀಗೆಂದು ನಮ್ಮ ಪ್ರಾಕೃತ ಮನಸ್ಸಿಗೆ ಅನಿಸಿತು. ಆದರೆ ಗಾಂಧೀಜಿಯುವರ ದೃಷ್ಟಿಯಲ್ಲಿ, ಅಂತರಂಗ, ಬಹಿರಂಗವೆಂಬ ಭೇದವೇ ಇಲ್ಲ. ತನ್ನ ಆಶ್ರಮದ ನಿಜವಾದ ಚಿತ್ರ ಜನರ ಮುಂದೆ ಇರಬೇಕು. ಯತಾರ್ಥ ದರ್ಶನ ಅವರಿಗಾಗಬೇಕು. ಇವರಲ್ಲಿಯೇ ಆಶ್ರಮದ ಧ್ಯೇಯದ ರಕ್ಷಣೆಯಿದೆ. ಹೀಗಿತ್ತು ಅವರು ವಿಚಾರಮಾಡುವ ರೀತಿ. ಆ ಸಭೆಯಲ್ಲಿ ನಾನು ಉಪಸ್ಥಿತನಿದ್ದೆ. ಸಭೆ ನಡೆಯುವಾಗೂ, ಒಂದು ಸಂದರ್ಭದಲ್ಲಿ, ಅವರು ನಿಷ್ಕಾರಣವಾಗಿ, ಪರಸ್ಪರ ತಪ್ಪು-ತಿಳುವಳಿಕೆಗಳು ಹೀಗೆ ಉಂಟಾಗುತ್ತವೆಂಬುದನ್ನು ವಿವರಿಸಲೋಸುಗ, ತನ್ನ ಮತ್ತು ಕಸ್ತೂರ ಬಾ ಅವರ ನಡುವೆ ಒಮ್ಮೆ ಉಂಟಾದ ಗಂಭೀರ ತಪ್ಪು ತಿಳುವಳಿಕೆಯ ಪ್ರಸಂಗವನ್ನು ಸಹ ಸಹಜ ಶೈಲಿಯಲ್ಲಿ ಉದಹರಿಸಿದರು. (ಆ ಸಭೆಯಲ್ಲಿ ಕೂಡ ಕಸ್ತೂರ ಬಾ ಸಹ ಉಪಸ್ಥಿತರಿದ್ದರು.) ಹೀಗಿತ್ತು ಅವರ ಲೋಕೋತ್ತರ ಪಾರದರ್ಶಕತೆ. ಗುಪ್ತವೆಂಬುವುದು ಅವರ ಸ್ವಭಾವದಲ್ಲಿಯೇ ಇರಲಿಲ್ಲ. ಹೀಗಿರುವುದರಿಂದಲೇ ಅವರ ಮುಂದೆ ಅಸತ್ಯವನ್ನು ನುಡಿಯುವುದು ಅಶಕ್ಯವೇ ಆಗುತ್ತಿತ್ತು. ಆ ಉಜ್ವಲ ಸತ್ಯದ ಪ್ರಭೆಯು ಮುಂದೆ ಅಸತ್ಯವು ನಿಲ್ಲುವುದೇ ಶಕ್ಯವಿದ್ದಿಲ್ಲ.

“ಯೋಗಃ ಕರ್ಮಸು ಕೌಶಲಮ್” ಚಿತ್ತಸಮತೆಯನ್ನು ಸಾಧಿಸಿದ ಗಾಂಧೀಜಿಯವರಿಗೆ ಸಕಲ ಕರ್ಮಗಳಲ್ಲಿ ಕೌಶಲ್ಯವು ಸಹಜ ಸಿದ್ಧ ವಸ್ತುವಾಗಿತ್ತು. ಕೆಲಸಾರೆ, ಈ ಸಭೆಯಲ್ಲಿ ತಪ್ತ ವಾತಾವರಣವೂ ಉದ್ಭೂತವಾಗದಿರಲಿಲ್ಲ. ಅಂಥ ಸಮಯದಲ್ಲಿ ಗಾಂಧೀಜಿಯವರು ತಮ್ಮದೇ ಆದ, ವಿನೋದ – ಚಾತುರ್ಯದಿಂದ, ಒಮ್ಮೆಲೆ ಸಭಿಕರನ್ನು ನಡೆಗಡಲಿನಲ್ಲಿ ತೇಲಿಸಿಬಿಡುತ್ತಿದ್ದರು. ಪುನಃ ಶಾಂತ ಮನಸ್ಥಿತಿಯಲ್ಲಿ ಚರ್ಚೆ ಮುಂದೆ ಸಾಗಿತು.

ಇಂಥ ಅನೇಕ ಪ್ರಸಂಗಗಳನ್ನು ಸ್ಮರಿಸಿ ಚಿತ್ತವು ಒಂದು ಉಚ್ಚ ಪವಿತ್ರ ಭೂಮಿಕೆಯಲ್ಲಿ ಕೆಲ ನಿಮಿಷಗಳ ಮಟ್ಟಿಗಾದರೂ ವಿಹರಿಸಿ ದಿವ್ಯ ಪ್ರಸನ್ನತೆಯನ್ನನುಭವಿಸುವುದು.

“ತಚ್ಚ ಸಂಸ್ಮೃತ್ಯ ಸಂಸ್ಮೃತ್ಯ ಹೃಷ್ಟಾಮಿ ಚ ಮುಹುರ್ಮುಹುಃ”

# ಒಬ್ಬ ಕೆಲಸಗಾರನ ಹೋರಾಟ

**ಮೋ. ಕ. ಗಾಂಧೀ**

ಕಿಶೋರಲಾಲ ಮಶ್ರೂವಾಲಾ ಬರೆದ ಪತ್ರದಿಂದ ಇದನ್ನು ತೆಗೆದುಕೊಂಡಿದ್ದೇನೆ. ಈ ಪತ್ರ ಬರೆದವರು ಉನ್ನತ ವಿದ್ಯೆ ಪಡೆದ, ಸ್ವಾರ್ಥತ್ಯಾಗಿ ಕೆಲಸಗಾರರು ಒಬ್ಬರು. [ಶ್ರೀ ತಿಮ್ಮಪ್ಪ ನಾಯಕರ ಬಗ್ಗೆ ಈ ಉಲ್ಲೇಖ]. ಒಬ್ಬ ಪ್ರಾಮಾಣಿಕ ಕೆಲಸಗಾರನ ಹೋರಾಟದ ಚಿತ್ರವನ್ನು ಇದಿರಿಗೆ ಇಟ್ಟು, ಇಂಥ ಸೇವಾಮಯ ಜೀವನ ನಡೆಸುವ ಎಲ್ಲರಿಗೂ ಇದರ ಉಪಯೋಗವಾದೀತೆಂದು ಬಯಸಿದ್ದೇನೆ.

ಈ ಪ್ರಯತ್ನ ಸ್ತುತ್ಯ. ಪತ್ರಲೇಖಕನೂ ಆತನ ಸಹ ಕಾರ್ಯಕರ್ತರೂ ತಾವು ತಪ್ಪು ಮಾಡಿದೆವು, ಎಂದು ತಿಳಿದಾಗ ಅದನ್ನು ತಿದ್ದಿಕೊಳ್ಳಲು ಹಿಂಜರಿಯುವುದಿಲ್ಲ.

ಈ ಪತ್ರದಿಂದ ಉದ್ಭವಿಸಿದ ಪ್ರಶ್ನೆಗಳಿಗೆ ಕಿಶೋರಲಾಲಭಾಯಿ ಏನು ಉತ್ತರ ಕೊಟ್ಟಿದ್ದಾರೋ ಗೊತ್ತಿಲ್ಲ. ನನ್ನ ಮಟ್ಟಿಗೆ ನಾನು ಕೆಲವು ಮಾತನ್ನು ಹೇಳಿದರೆ ಇದರಿಂದ ಪ್ರಯೋಜನವಾದೀತು ಎಂದು ನಂಬಿದ್ದೇನೆ.

ಬ್ರೆಡ್ ಲೇಬರ್ (ಕಾಯಕದಿಂದ ಊಟ) ತತ್ವದ ಬಗ್ಗೆ ಸ್ವಲ್ಪ ಗೊಂದಲ ಇದೆ ಈ ಪತ್ರದಲ್ಲಿ. ಸಮಾಜ ಸೇವೆಗೂ ಅದಕ್ಕೂ ವಿರೋಧವಿಲ್ಲ. ಬುದ್ಧಿವಂತ ತನದ ಬ್ರೆಡ್ ಲೇಬರ್ ಎಂದಿದ್ದರೂ ಉತ್ತಮ ಸಮಾಜ ಸೇವೆ. ದೇಶದ ಸಂಪತ್ತಿಗೆ ತಾನು ಕೈಯಾರೆ ದುಡಿದು ಅದನ್ನು ಹೆಚ್ಚಿಸುವುದಕ್ಕಿಂತ ಬೇರೆ ಏನಿದೆ ಮನುಷ್ಯ ಮಾಡಬಹುದಾದುದು ? ಹಾಗೆ ಮಾಡುವುದರಿಂದಲೇ ಮನುಷ್ಯ.

ಶ್ರಮ ಎಂಬುದಕ್ಕೆ 'ಬುದ್ಧಿವಂತ' ಎಂಬ ವಿಶೇಷಣ ಜೋಡಿಸಿ ಸಮಾಜ ಸೇವೆ ಆಗಬೇಕಾದರೆ, ಶ್ರಮಕ್ಕೆ ಒಂದು ಸ್ಪಷ್ಟ ಉದ್ದೇಶ ಇರಬೇಕೆಂದು ಹೇಳಲಾಗಿದೆ. ಇಲ್ಲದೇ ಇದ್ದರೆ ಪ್ರತಿಯೊಬ್ಬ ಕೆಲಸಗಾರನೂ ತಾನು ಸಮಾಜ ಸೇವೆ ಮಾಡಿದೆ ಎನ್ನಬಹುದು. ಅವನದೂ ಒಂದು ಬಗೆಯಲ್ಲಿ ಸಮಾಜ ಸೇವೆಯೇ. ಆದರೆ ಇಲ್ಲಿ ಅದಕ್ಕಿಂತ ಹೆಚ್ಚಿನ ಅರ್ಥ. ಸರ್ವರ ಹಿತಕ್ಕಾಗಿ ದುಡಿಯುವವನು ಸಮಾಜಸೇವೆ ಮಾಡುತ್ತಾನೆ. ಅವನ ದುಡಿತಕ್ಕೆ ಬೆಲೆ ಉಂಟು. ಆದ್ದರಿಂದ ಹಾಗೆ ಅನ್ನಕ್ಕಾಗಿ

ದುಡಿಯುವದು ಸಮಾಜ ಸೇವೆಯೇ ವಿನಾ ಬೇರೆ ಅಲ್ಲ. ತನ್ನ ಉದರಂಭರಣಕ್ಕಾಗಿ ಅಥವಾ ಕುಟುಂಬಕ್ಕಾಗಿ ಜನಕೋಟಿ ಮಾಡುವ ಕೆಲಸವನ್ನು ಸಮಾಜ ಸೇವಕ ಸರ್ವಜನಹಿತಕ್ಕಾಗಿ ಮಾಡುತ್ತಾನೆ. ಆಶ್ರಮದಲ್ಲಿರುವ ಏಳು ಜನಕ್ಕೆ ತಮ್ಮ ದಿನದ ಹಿಟ್ಟನ್ನು ಗಳಿಸಲು ಮಾಡಿದ ದುಡಿತದ ತರುವಾಯ ಸಮಾಜ ಸೇವೆಗೆ ವೇಳೆ ಉಳಿಯುವುದೇ ಇಲ್ಲ. ತಮ್ಮ ಕೆಲಸದಲ್ಲಿ ಅವರು ನಿಷ್ಣಾತರಾಗಿದ್ದರೆ ಹೀಗೆ ಆಗುತ್ತಿರಲಿಲ್ಲ. ಅವರು ನಿಷ್ಣಾತರಲ್ಲ. ಸಾಧಾರಣ ಕೆಲಸಗಾರರಿಗೆ ಇವರು ಸಮ ಅಲ್ಲ. ಕೈಗಾರಿಕೆಯಲ್ಲಿ ಇವರು ಹೊಸಬರು. ಉಪಕರಣಗಳನ್ನು ಜಾಣತನದಿಂದ ಉಪಯೋಗಿಸಿದರೆ ಒಂದಕ್ಕೆ ಎರಡು ಪಟ್ಟು ನೂಲಬಹುದು ಎಂದು ಈಚೆಗೆ ಎಲ್ಲರಿಗೂ ಗೊತ್ತಾಗಿದೆ. ಎಂದರೆ ರಾಟೆಯಿಂದ ಇಮ್ಮಡಿ ಗಳಿಕೆ. ಎಲ್ಲ ವಿಷಯ ಗಳಲ್ಲೂ ಇಷ್ಟೇ. ವ್ಯವಸಾಯದಲ್ಲಿಯೂ ಅಭಿವೃದ್ಧಿಗೆ ಅವಕಾಶ ಇದೆ. ಪ್ರಕೃತಿಯ ವಿಕೋಪಕ್ಕೆ ಗುರಿಯಾಗದಿದ್ದರೆ ರೈತ ತನ್ನ ಜಾಣತನದಿಂದ ಇರುವ ಮಟ್ಟವನ್ನೇ ಉಪಯೋಗಿಸಿ, ಅಷ್ಟೇ ಹೊತ್ತು ಕೆಲಸಮಾಡಿ, ಒಂದಕ್ಕೆ ನಾಲ್ಕರಷ್ಟು ಗಳಿಸ ಬಹುದು. ಎಂದರೆ ಅವನ ಈಗಿನ ಸಂಪಾದನೆಗೆ ಎಷ್ಟು ಕಷ್ಟಪಡುತ್ತಿದ್ದಾನೋ ಅಷ್ಟು ಪಡಬೇಕಾಗಿಲ್ಲ. ಈ ಕೆಲಸಗಾರರಿಗೆ ಕೈ ಪಳಗಿದಮೇಲೆ, ಸ್ವಲ್ಪ ಕುಶಲತೆ ಬಂದ ಮೇಲೆ, ಈಗಿನದಕ್ಕಿಂತ ಕಡಿಮೆ ಹೊತ್ತಿನಲ್ಲಿ ತಮ್ಮ ಹಿಟ್ಟನ್ನು ಗಳಿಸಿಕೊಳ್ಳ ಬಹುದು. ಹರಿಜನ ಸೇವೆಗೆ ಅಥವಾ ಇತರ ಸೇವೆಗೆ ಅವರ ಶಕ್ತಿ ಉಳಿಯುತ್ತದೆ. ಗೃಹಸ್ಥರಿಗೆ ವೆಚ್ಚ ಹೆಚ್ಚು. ಅವರ ಸಮಸ್ಯೆ ಸ್ವಲ್ಪ ತೊಡಕು. ಆದರೆ ತ್ಯಾಗ ಜೀವನ ನಡೆಸುವ ಕೆಲಸಗಾರನಿಗೆ ತಿಂಗಳಿಗೆ ನಾಲ್ಕು ರೂಪಾಯಿ ಸಾಕು. ಇದರಿಂದ ಆತನು ತನ್ನ ಹೊಟ್ಟೆಗಾಗಿ ದುಡಿದ ಮೇಲೆ ಕೂಡ ಹೆಚ್ಚಿನ ಕೆಲಸಕ್ಕೆ ವೇಳೆ ಉಳಿಯುತ್ತದೆ.

ಆದರೆ ತಿಂಗಳಿಗೆ ಮೂರು ರೂಪಾಯಿ ಸಾಕೇ ಅನ್ನಕ್ಕೆ ಒಬ್ಬನಿಗೆ? ಡಾ॥ ತಿಲಕ್ ಬೊಂಬಾಯಿಯಲ್ಲಿ ಐದು ರೂಪಾಯಿ ಸಾಕು ಎನ್ನುತ್ತಾರ. ಹಾಗಿದ್ದರೆ ಗ್ರಾಮ ಜೀವನಕ್ಕೆ ಮೂರು ರೂಪಾಯಿ ಸಾಕು. ತಿಲಕರು ಹೇಳಿದ್ದಕ್ಕೆ ನನ್ನ ಅನುಭವವನ್ನು ಜೊತೆಗೂಡಿಸಿದರೆ ಏನೂ ಕಷ್ಟವಿಲ್ಲ. ತಿಲಕರು ಹೇಳುವಂತೆ ಹಾಲನ್ನು ಬಿಡಲು ಸಾಧ್ಯವಿಲ್ಲ ಆಹಾರದಿಂದ ಹಾಲನ್ನು ವರ್ಜ್ಯಮಾಡಿ ಆಶ್ರಮ ವಾಸಿಗಳು ತಪ್ಪುಮಾಡಿದರು. ನಮ್ಮಲ್ಲಿ ಕೋಟ್ಯಂತರ ಜನಕ್ಕೆ ಒಂದು ತೊಟ್ಟೂ ಹಾಲು ಸಿಕ್ಕುವುದಿಲ್ಲ. ನಿಜ. ಆದರೆ ಇನ್ನೂ ಎಷ್ಟೋ ಪದಾರ್ಥ ಅವರಿಗೆ ಸಿಗುವು ದಿಲ್ಲ ನಮಗೆ ಬೇಕಾದ್ದು. ನಮ್ಮದು ಸೇವಾಮಯ ಜೀವನ. ಶರೀರ ಪೋಷಣೆಗೆ ಎಷ್ಟು ಅಗತ್ಯವೋ ಅಷ್ಟನ್ನು ನಾವೇ ಉತ್ಪನ್ನ ಮಾಡಿ ತೆಗೆದುಕೊಳ್ಳಬೇಕು. ಗೋಧಿ, ಅಕ್ಕಿ, ಸಜ್ಜೆ, ಜೋಳ ಇಂಥ ಧಾನ್ಯ ಪಕ್ವಮಾಡಿದ ರುಚಿಯಾದ ಸೊಪ್ಪು, ಹಾಲು, ಹಳ್ಳಿಯಲ್ಲಿ ಸಿಗುವ ಹಣ್ಣು, ಮಾವು, ಸೇರಲೆ, ಸೀಬೆ, ಬೋರೆ ಮುಂತಾದವು

ಆಯಾ ಕಾಲದಲ್ಲಿ ಸಿಗುತ್ತವೆ. ಇವು ಆರೋಗ್ಯ ಜೀವನಕ್ಕೆ ತುಂಬ ಒಳ್ಳೆಯವು. ತಿನ್ನಬಹುದಾದ ಎಲೆಸೊಪ್ಪುಗಳಲ್ಲಿ ಬೇವಿನಸೋಪ್ಪು ರಾಜ. ಭಾರತದಲ್ಲಿ ಎಲ್ಲಿ ಬೇಕಾದರೂ ಇದನ್ನು ಗಿಡಗಳಿಂದ ಹರಿದುಕೊಳ್ಳಬಹುದು. ಇನ್ನೂ ಮನುಷ್ಯ ತಿನ್ನಬಹುದಾದ ಎಷ್ಟೋ ಹುಲ್ಲು ಇವೆ. ನಮಗೆ ಅದು ಗೊತ್ತಿಲ್ಲ. ಹುಣಿಸೆ ಹಣ್ಣು ಎಲ್ಲೆಲ್ಲೂ ಸಿಗುತ್ತದೆ. ಕೆಲವರಿಗೆ ಹುಣಿಸೆ ಹಣ್ಣಿನ ಬಗ್ಗೆ ಏನೋ ಒಂದು ಪೂರ್ವಗ್ರಹ ಇದೆ. ಏತಕ್ಕೋ ನನಗೆ ಅರ್ಥವಾಗುತ್ತಿಲ್ಲ. ನಿಂಬೆ ಹಣ್ಣು ಬಹಳ ತುಟ್ಟಿ ಎಂದು ನಾನು ಹುಣಿಸೆ ಹಣ್ಣುಗಳನ್ನು ಧಾರಾಳವಾಗಿ ಉಪಯೋಗಿಸುತ್ತಿದ್ದೇನೆ. ಆದರಿಂದ ನನಗೆ ಬಹಳ ಲಾಭ ಆಗಿದೆ. ಆಹಾರ ಸುಧಾರಣೆಯ ಸಂಶೋಧನೆ ಅನಂತವಾಗಿದೆ. ಜಗತ್ತಿಗೆ ಅದರ ಪರಿಣಾಮ ಬಹಳ ಆಗಬೇಕಾಗಿದೆ. ಅದರಲ್ಲೂ ಉಪವಾಸ ಸಾಯುತ್ತಿರುವ ಭಾರತದ ಬಡಬಗ್ಗರಿಗೆ ಅದು ಆರೋಗ್ಯಕರ. ರಸ್ಕಿನ್ನರ ಭಾಷೆಯಲ್ಲೆ ಎರಡೂ ಒಂದೇ — ಆರೋಗ್ಯವೇ ಭಾಗ್ಯ. ಸರಿಯಾಗಿ, ನಿಯಮಬದ್ಧವಾಗಿ ಬದುಕುವುದುದೇ ಒಂದು ಸೇವೆ—ಎಂಬ ವಿಚಾರ ಆಶ್ರಮದವರ ತಲೆಯಲ್ಲಿ ಸುಳಿದದ್ದು ಸರಿ. ಅದರ ಪ್ರಭಾವ ಅನಂತವಾಗಿ ತಮ್ಮ ಸುತ್ತ ಮುತ್ತ, ಮೊದಲು ಭಾರತಕ್ಕೆ ಆಮೇಲೆ ವಿಶ್ವಕ್ಕೆ ಹರಡೀತು. ಈ ಸೇವೆಯಲ್ಲಿ ವ್ಯಷ್ಟಿಯ ಕ್ಷೇಮವೇ ಸಮಷ್ಟಿಯ ಸೇವೆ; ಒಬ್ಬರ ಕ್ಷೇಮವೇ ಎಲ್ಲರ ಕ್ಷೇಮ.

(“ಹರಿಜನ”ದಲ್ಲಿ—೧-೬-೧೯೩೫—ಬಂದ ಲೇಖನ; “ಗಾಂಧೀ ಮತ್ತು ಕರ್ನಾಟಕ” ದಿಂದಲುದ್ಧೃತ. ಈ ಬರಹ ಕೊರಕೋಡಿ ಆಶ್ರಮದಲ್ಲಿ ಶ್ರೀ ಮಾಸ್ತರರು ನಡೆಸಿದ್ದ ಪ್ರಯೋಗದ ಬಗ್ಗೆ).

# ಗಾಂಧೀಮಾರ್ಗದ ರಾಷ್ಟ್ರಸೇವಕ

**ಕಾಕಾ ಕಾಲೇಲ್ಕರ್**

ಗಾಂಧೀಜಿಯಿಂದ ತಮ್ಮ ಜೊತೆಗಾರರೆಂದು ಕರೆಯಲ್ಪಡುತ್ತಿದ್ದ ಮತ್ತು ನಮ್ಮಿಂದ ಗಾಂಧೀ ಭಕ್ತರೆಂದು ಕರೆಯಲ್ಪಡುವ ಜನರಲ್ಲಿ ಎರಡು ವರ್ಗಗಳನ್ನು ಮಾಡಬಹುದು. (1) ಗಾಂಧೀಜಿಯವರ ರಾಜನೈತಿಕವಾದ ಕಾಂಗ್ರೆಸ್ಸಿನ ಕೆಲಸ ಮಾಡುವವರು; (2) ಗಾಂಧೀಜಿಯವರ ರಚನಾತ್ಮಕ ಕಾರ್ಯಗಳಲ್ಲಿ ತಮ್ಮ ಸರ್ವಸ್ವವನ್ನೂ ಪಣವಾಗಿಟ್ಟಿರುವವರು.

ರಚನಾತ್ಮಕ ಕಾರ್ಯವನ್ನೇ ಮೆಚ್ಚಿಕೊಂಡವರಲ್ಲಿ ಅನೇಕರು ಜೈಲಿಗೂ ಹೋಗಿದ್ದಾರೆ. ಜೈಲಿಗೆ ಹೋಗುವ ಕೆಲಸ ಕೇವಲ ರಾಜನೈತಿಕವಷ್ಟೇ ಅಲ್ಲವೆಂಬುದು ಇದರಿಂದ ತಿಳಿಯುತ್ತದೆ. ವಿನೋಬಾಜಿಯವರನ್ನು ಕೇವಲ ರಚನಾತ್ಮಕ ಕಾರ್ಯಗಳ ನಾಯಕರೆಂದು ತಿಳಿಯುವ ರೂಢಿ ಇತ್ತು. ಆದರೆ ಗಾಂಧೀಜಿಯವರು ತಮ್ಮ ಅತ್ಯಂತ ಮಹತ್ವದ ಪ್ರಸಂಗದಲ್ಲಿ ತಮ್ಮ ಪ್ರತಿನಿಧಿಯೆಂದು ಸ್ಥಾನನೀಡಿ ಅವರನ್ನು ವೈಯಕ್ತಿಕ ಸತ್ಯಾಗ್ರಹದ ಕಾಲಕ್ಕೆ ಜೈಲುವಾಸಕ್ಕೆ ಕಳುಹಿಸಿದ್ದರು.

ಗಾಂಧೀಜಿಯವರ ಕಾಂಗ್ರೆಸ್ ಮತ್ತು ರಾಜನೈತಿಕ ಕೆಲಸಗಳನ್ನು ನಾನು ಪ್ರಸಂಗವಶಾತ್ ಮಾಡಿದ್ದೇನೆ. ಅನೇಕ ಬಾರಿ ಜೈಲಿಗೂ ಹೋಗಿ ಬಂದಿದ್ದೇನೆ. ಆದರೆ ಸ್ವರಾಜ್ಯ ಅಥವಾ ಕಾಂಗ್ರೆಸ್‌ನ ಸರಕಾರದಲ್ಲಿ ಇರುವ ಇಚ್ಛೆಯನ್ನು ಎಳ್ಳಷ್ಟೂ ಇಟ್ಟುಕೊಳ್ಳದೆ ನಾನು ರಚನಾತ್ಮಕ ಕಾರ್ಯವನ್ನು ನನ್ನದನ್ನಾಗಿ ಮಾಡಿಕೊಂಡಿದ್ದೇನೆ. ಮತ್ತು ಇದಕ್ಕಾಗಿ ನಾನು ಎರಡನೆಯ ವರ್ಗಕ್ಕೆ ಸೇರಿದವನೆಂದು ಭಾವಿಸುತ್ತೇನೆ.

ರಾಜನೈತಿಕ ಹಾಗೂ ರಚನಾತ್ಮಕ ಕಾರ್ಯಗಳೆರಡನ್ನೂ ಒಂದೇ ರೀತಿ ಮಹತ್ವ ನೀಡಿ ನಡೆಸಿಕೊಂಡು ಬಂದ ಕಾರ್ಯಕರ್ತರು ಯಾರಿರುವರೋ ಅವರನ್ನು ನಾವು ಗಾಂಧೀಜಿಯವರ ಉಭಯರಂಗಗಳ ಕಾರ್ಯಕರ್ತರೆಂದು ಕರೆಯುವುದಾದರೆ ಅಂಥವರಲ್ಲಿ ರಾಜೇಂದ್ರಬಾಬು ಮುಂತಾದ ಅನೇಕರನ್ನು ನೆನೆಯಬೇಕಾಗುತ್ತದೆ.

ಇಂಥ ಉಭಯರಂಗಗಳಲ್ಲಿ ಕೆಲಸ ಮಾಡಿದವರಲ್ಲಿ ಈಗ ನನಗೆ ಒಟ್ಟೊಟ್ಟಾಗಿ ನೆನಪಿಗೆ ಬರುವವರೆಂದರೆ, (೧) ಮಹಾರಾಷ್ಟ್ರದ ಶ್ರೀಶಂಕರರಾವ್‌ದೇವ್ ಮತ್ತು (೨) ಕರ್ನಾಟಕದ ಶ್ರೀ ತಿಮ್ಮಪ್ಪಾ ನಾಯಕ್.

ಇದರಲ್ಲಿ ಶಂಕರರಾವ್ ದೇವ್ ಅವರು ಆರಂಭದಲ್ಲಿ ಕಾಂಗ್ರೆಸ್‌ನ ಕೆಲಸಕ್ಕೆ ಹೆಚ್ಚು ಲಕ್ಷ್ಯಕೊಡುತ್ತಿದ್ದರು. ಈ ಕಾರಣದಿಂದ ದೇಶದಲ್ಲಿ ಬಹಳ ಜನ ಅವರನ್ನು ನೆನೆಯುತ್ತಾರೆ. ಆದರೆ ದೇವ್ ಅವರಿಂದ ಎಳ್ಳಷ್ಟೂ ಕಡಿಮೆ ಎನ್ನಲಾಗದ ಒಬ್ಬ ರಾಷ್ಟ್ರ ಸೇವಕರದು ಇತ್ತೀಚೆಗೆ ದೇಹಾಂತವಾಯಿತು. ಅವರ ಬಗ್ಗೆಯೇ ನನಗೆ ಇಂದು ಸ್ವಲ್ಪ ಬರೆಯಬೇಕಾಗಿದೆ. ಆಗಲೇ ನಾನು ಅವರ ಒಂದು ಸಾಹಿತ್ಯ ಕೃತಿಯ ಬಗ್ಗೆ ಬರೆದೇ ಇದ್ದೇನೆ. ಗಾಂಧೀದರ್ಶನ ಅಥವಾ ಗಾಂಧೀಜಿಯವರ ಜೀವನ ಯೋಗದ ಬಗ್ಗೆ ತಿಮ್ಮಪ್ಪ ನಾಯಕರು ಒಂದು ಒಳ್ಳೆಯ ವ್ಯವಸ್ಥಿತ ಪುಸ್ತಕವನ್ನು ಕನ್ನಡದಲ್ಲಿ ಬರೆದಿದ್ದಾರೆ. ನಾನು ಬೆಳಗಾವಿಯ ವಾಸಿಯಾಗಿದ್ದ ಮರಾಠಿಗ. ಬೆಳಗಾವಿ, ಧಾರವಾಡ, ಸವಣೂರು ಮತ್ತು ಕಾರವಾರಗಳಂಥ ಸ್ಥಳಗಳಲ್ಲಿ ಇದ್ದುದರಿಂದ ಕನ್ನಡವನ್ನು ಚೆನ್ನಾಗಿ ತಿಳಿದಿದ್ದೆ. ಆದರೆ ಕನ್ನಡ ಲಿಪಿಯ ಪರಿಚಯ ಅಷ್ಟೊಂದು ಇರದ್ದರಿಂದ ಕನ್ನಡದಲ್ಲಿನ ಗಾಂಧೀ ಸಾಹಿತ್ಯವನ್ನು ನಾನು ಓದಿಲ್ಲ. ತಿಮ್ಮಪ್ಪ ನಾಯಕರ ಗಾಂಧೀ ದರ್ಶನದ ಬಗೆಗಿನ ಪುಸ್ತಕವನ್ನು ನಮ್ಮಿಬ್ಬರಿಗೂ ಮಿತ್ರರಾಗಿರುವ ಒಬ್ಬರ ಮೂಲಕ ಓದಿಸಿ ನಾನು ಕೇಳಿದೆ, ಮತ್ತು ಅದಕ್ಕೆ ಪ್ರಸ್ತಾವನೆಯನ್ನೂ ನಾನು ಬರೆದೆ. ಇದೇ ಸುಂದರವಾದ ಮಹತ್ವದ ಹಾಗೂ ವ್ಯವಸ್ಥಿತವಾಗಿ ಬರೆಯಲಾದ ಕೃತಿಯ ಮರಾಠಿ ಅನುವಾದವನ್ನು ನನ್ನ ಸ್ನೇಹಿತ ಶ್ರೀ ಪುಂಡಲೀಕ ಕಾತ್‌ಗಡೆ ಅವರು ಮಾಡಿದಾಗ ಅದಕ್ಕಾಗಿಯೇ ಒಂದು ಪ್ರತ್ಯೇಕ ಪ್ರಸ್ತಾವನೆಬೇಕೆಂದು ಅವರು ಕೇಳಿದರು. ಈ ಎರಡೂ ಪ್ರಸ್ತಾವನೆಗಳು ಒಟ್ಟೊಟ್ಟಿಗೆ ಅಲ್ಲಿ ಮುದ್ರಿತವಾಗಿವೆ.

ಕನ್ನಡ ಪುಸ್ತಕಕ್ಕಾಗಿ ನಾನು ನೀಡಿದ ಪ್ರಸ್ತಾವನೆ ಹಿಂದಿಯಲ್ಲಿದೆ, ಮತ್ತು ಮರಾಠಿ ಪುಸ್ತಕಕ್ಕೆ ನನ್ನ ಮಾತೃಭಾಷೆ ಮರಾಠಿಯಲ್ಲಿದೆ. ಇದೇ ಪುಸ್ತಕದ ಹಿಂದೀ ಅನುವಾದವನ್ನೂ ಪುಂಡಲೀಕಜಿಯವರು ಮಾಡಿದ್ದು ಅದು ಪ್ರಕಾಶನದ ಹಾದಿ ನೋಡುತ್ತಿದೆ. ಅದು ಪ್ರಕಟವಾಗದೇ ಇದ್ದಲ್ಲಿ ಅದು ಗಾಂಧೀ ಸಾಹಿತ್ಯದ ಹಿಂದೀ ಪ್ರಕಾಶಕರ ಒಂದು ಲೋಪವೆಂದೇ ಅನಿಸಲ್ಪಡುವುದು.

ಶ್ರೀ ತಿಮ್ಮಪ್ಪ ನಾಯಕರು ಕಾರವಾರ ಜಿಲ್ಲಾ ವಾಸಿಗಳು. ಅವರ ಜನ್ಮ ೧೮೯೭ರಲ್ಲಿ ಆಯಿತು. ಇಂಥ ಉಭಯ ರಂಗಗಳಲ್ಲಿದ್ದ ರಾಷ್ಟ್ರಸೇವಕರ ಪರಿಚಯ ಆಗದೇ ಹೇಗೆ ಇದ್ದೀತು? ತಿಮ್ಮಪ್ಪ ನಾಯಕರ ಮತ್ತು ನನ್ನ ಪರಿಚಯ ೧೯೩೪ರಲ್ಲಿ ಆಯಿತು. ಪ್ರಾಯಶಃ ಶಂಕರರಾವ್ ಗುಲವಾಡಿ ಅವರ ಮೂಲಕ ಆಗಿದ್ದಿರಬೇಕು. ಅವರ ಯೋಗ್ಯತೆ ನನ್ನ ಗಮನಕ್ಕೆ ಬಂತು; ಮತ್ತು ಅವರ ಬಗ್ಗೆ ನನ್ನ ಆದರ ಹೆಚ್ಚಿತು. ಅವರ ಮನಸ್ಸಿನಲ್ಲೂ ನನ್ನ ಬಗ್ಗೆ ಆತ್ಮೀಯತೆ ಹೆಚ್ಚಿತು, ಮತ್ತು ನಾವಿಬ್ಬರೂ ಹತ್ತಿರಕ್ಕೆ ಬಂದೆವು.

ತಿಮ್ಮಪ್ಪ ನಾಯಕರು ಕಾಂಗ್ರೆಸ್ಸಿನ ಕೆಲಸವನ್ನೂ ಮಾಡಿದರು. ಅವರು ಅನೇಕ ಸಲ ಜೈಲಿಗೂ ಹೋದರು. ತಮ್ಮ ಜೊತೆ ಕೆಲಸ ಮಾಡುವ ನವಯುವಕರನ್ನೂ ಒಳ್ಳೆಯ ರೀತಿಯಲ್ಲಿ ಸಿದ್ಧಪಡಿಸಿದ್ದಾರೆ. ಇತ್ತೀಚೆಗೆ ಅವರ ದೇಹಾಂತವಾಯಿತು.

ಹಿಂದಿಯ ಸೇವಕ ಹಾಗೂ ಪ್ರಚಾರಕರಾದ ನಾವು ಉತ್ತರ ಭಾರತದ ಕಡೆ ಹೆಚ್ಚು ಗಮನ ನೀಡುತ್ತೇವೆ. ಮತ್ತು ಇದರಿಂದಾಗಿ ಬಂಗಾಲ, ಮಹಾರಾಷ್ಟ್ರ ಮತ್ತು ಗುಜರಾತ್‌ನ ಗಾಂಧೀ ಸೇವಕರ ಪರಿಚಯು ಹಿಂದೀ ಜಗತ್ತಿಗೆ ಹೆಚ್ಚಾಗಿ ಇದೆ. ರಾಜಗೋಪಾಲಾಚಾರಿಯವರಂಥ ಇಂಗ್ಲಿಷ್‌ನಲ್ಲಿ ಬರೆಯಬಲ್ಲ ಕಾಂಗ್ರೆಸ್ ನಾಯಕರ ಪರಿಚಯು ಮಾಡಿಕೊಡುವ ಭಾರ ಹಿಂದೀ ಭಾಷಿಕರ ಮೇಲೆ ಇಲ್ಲವೇ ಇಲ್ಲ. ಆದರೆ, ಗಾಂಧೀಜಿಯವರ ಸಲಹೆಯುನ್ನು ಶಿರಸಾವಹಿಸಿ ಯಾರು ಇಂಗ್ಲಿಷ್‌ನಲ್ಲಿ ಬರೆಯುವ–ಮಾತನಾಡುವ ಉತ್ಸಾಹವನ್ನು ಬಿಟ್ಟುಬಿಟ್ಟಿದ್ದರೋ, ಆದರೆ ಇಂಗ್ಲಿಷ್ ಲೇಖಕರಿಗಿಂತ ಸ್ವರಾಜ್ಯ ಸೇವೆ ಮಾಡುವ ಇಂಥವರ ಯೋಗ್ಯತೆ ಯಾವ ರೀತಿಯಲ್ಲೂ ಕಡಿಮೆ ಇರಲಿಲ್ಲವೋ ಅವರ ಪರಿಚಯುವನ್ನು ದೇಶಕ್ಕೆ ಮಾಡಿಕೊಡುವುದು ಹಿಂದೀ ಭಾಷಿಕರಾದ ನಮ್ಮ ಕರ್ತವ್ಯವೇ ಆಗಿದೆ.

ನನ್ನ ಆಯುಷ್ಯ ಮುಗಿಯುತ್ತ ಬಂತು. ಹೀಗಿದ್ದರೂ ಸ್ವರ್ಗೀಯ ತಿಮ್ಮಪ್ಪ ನಾಯಕರ ಜೀವನ ಚರಿತ್ರೆ, ಅವರ ಸೇವೆಯ ವೈಶಾಲ್ಯ ಹಾಗೂ ಅವರ ಸಾಹಿತ್ಯದ ಪರಿಚಯು ನನ್ನ ಜೀವನಕಾಲದಲ್ಲೇ ನನಗೆ ನೋಡಲು ಸಿಕ್ಕೀತೆಂದು ನಾನು ಆಶೆಹೊಂದಿದ್ದೇನೆ.

(‘ಮಂಗಲ ಪ್ರಭಾತ’ ೧೫–೧–೭೫ರ ಅಂಕದಿಂದ ಭಾಷಾಂತರ)

# ನನ್ನ ಪೂಜ್ಯ ಅಣ್ಣ

ಹರಿ ಅನಂತ ಪೈ

ದಿ॥ ನಾಯಕ ಮಾಸ್ತರರು ನನ್ನ ಪಾಲಿಗೆ ಒಬ್ಬ ಪೂಜ್ಯರಾದ ಅಣ್ಣನಿದ್ದಂತೆ ಇದ್ದರು. ಈ ಭಾವನೆ ನನಗಷ್ಟೇ ಅಲ್ಲ, ನನ್ನ ಮನೆಮಂದಿಗೆಲ್ಲ ಇತ್ತು. ಅವರು ತೀರಿಕೊಂಡಾಗಲಾದರೂ ನಾನೇ ಮುಂದಾಗಿ ಅವರ ಉತ್ತರಕ್ರಿಯಾದಿಗಳನ್ನು ಹಿಂದೂ ವಿಧಿಗಳಂತೆ, ಅವರ ಸಂಬಂಧಿ ಶ್ರೀ ರಮಾನಂದ ರಂಗ್ಯೆನರಿಂದ ಮಾಡಿಸಿದೆ. ಅವರ ಕೊನೆಯ ಆಸೆಗಳನ್ನೆಲ್ಲ ಪೂರೈಸಲು ನಾನು ಶಕ್ತಿ ಮೀರಿ ಶ್ರಮಿಸಿದ್ದೇನೆ. ಅವರ ಆ ಆಸೆಗಳೆಲ್ಲ ವೈಯಕ್ತಿಕವಾಗಿರದೆ, ಸಾರ್ವಜನಿಕ ಸಮಸ್ಯೆಗಳಿಗೆ ಸಂಬಂಧಿಸಿದ್ದುವೆಂದೂ ಮೊದಲೇ ಹೇಳುವೆ.

೧೯೨೩ರಲ್ಲಿ ಜೈಲಿನಿಂದ ಅವರು ಬಿಡುಗಡೆಯಾದನಂತರ ಗೋಕರ್ಣದಲ್ಲಿ ರಾಜಕೀಯ ಸಮ್ಮೇಳನ ಆದಾಗ ಅವರು ಒಮ್ಮೆ ಅಂಕೋಲಾಕ್ಕೆ ಬಂದಂತೆ ನೆನಪು. ೧೯೨೭ರಲ್ಲಿ ಅವರು ಅಂಕೋಲಾದಲ್ಲಿಯೇ ನಿಲ್ಲುವ ವಿಚಾರ ಮಾಡಿಬಂದಾಗ, ನಮ್ಮ ಅಂಗಡಿಯಿಂದ ಅವರಿಗೆ ತಾಮ್ರದ ಕೊಡಪಾನ ಮತ್ತು ಇತರ ಪರಿಕರಗಳನ್ನು ತೆಗೆದುಕೊಟ್ಟಿದ್ದೆ. ಮುಂದೆ ಉಪ್ಪಿನ ಸತ್ಯಾಗ್ರಹದ ಕಾಲಕ್ಕೂ ಅದರ ತಯಾರಿಗಾಗಿ ಅವರು ಇಲ್ಲಿನ ಹಳ್ಳಿಹಳ್ಳಿ ಸಂಚರಿಸಿದ್ದರು. ಉಪ್ಪಿನ ಸತ್ಯಾಗ್ರಹದ ಕಾಲಕ್ಕೆ ಶಿಬಿರವಿದ್ದ ಈಗಿನ ಲೇಬರ್ ಸೊಸೈಟಿ ಕಟ್ಟಡವನ್ನು ಖಾಲಿ ಮಾಡಬೇಕೆಂದು ಪೋಲೀಸರು ನೋಟೀಸು ಕೊಡಲು ಅದನ್ನು ಪ್ರತಿಭಟಿಸಿ ಅವರೂ ಕಾಕಾ ಕಾರಖಾನೀಸರೂ ಕೌಜಲಗಿ ಹಣಮಂತರಾಯರೂ ಇತರ ಹಲವರ ಜೊತೆ ಬಂಧಿತರಾದರು. ಮಾಸ್ತರರಿಗೆ ಆಗ ಮೂರು ತಿಂಗಳು ಶಿಕ್ಷೆ ಆಗಿತ್ತು.

ಅವರ ಬಿಡುಗಡೆಯ ನಂತರ ಅಂಕೋಲಾದ ದೇವಕೀ ದೇವಸ್ಥಾನದಲ್ಲಿ ಅವರ ಭಾಷಣ ಆದುದು ನನಗೆ ನೆನಪಿದೆ. ಮುಂದೆ ಜಂಗಲ ಸತ್ಯಾಗ್ರಹ, ನಂತರ ಕರನಿರಾಕರಣಗಳ ಸಂಘಟನೆಗೆ ಸಿರಸಿ, ತಾ॥ನಲ್ಲಿ ಅವರು ಕೆಲಸ ಮಾಡಿದರು. ೧೯೩೦ರ ಕರನಿರಾಕರಣವನ್ನು ಸಿರಸಿ–ಸಿದ್ದಾಪುರಗಳಲ್ಲಿ ಗಾಂಧಿ–ಇರ್ವಿನ್ ಒಪ್ಪಂದದ ನಂತರವೂ ಮುಂದುವರಿಸಲಾಯಿತು. ಇದು ಆರ್ಥಿಕ ಕಾರಣಕ್ಕಾಗಿ ಸಂಘಟಿಸಿದ ಕರನಿರಾಕರಣ. ಆಗ ಜಾಗತಿಕ ಮಟ್ಟದಲ್ಲಿ ಕಾಣಿಸಿದ್ದ ಆರ್ಥಿಕ ಹಿಂಜರಿತದಿಂದಾಗಿ ಅಡಿಕೆಯು ಬೆಲೆ ತೀರ ಇಳಿದು, ಹಂಡ್ರೆಟ್‌ವೇಟ್‌ಗೆ ೮–೧೦ರೂ. ಕೂಡ ಬೆಲೆ ಬರದಂತೆ ಆಗಿತ್ತು. ತೋಟಗಾರರಿಗೆ ಅಡಿಕೆ ಮರಗಳಿಂದ ಅಡಿಕೆ ತೆಗೆಸುವ ಕೂಲಿ

ನೀಡಲೂ ಕೂಡ ಹಣ ಇಲ್ಲದಂಥ ಪರಿಸ್ಥಿತಿ. ಊಟಕ್ಕೆ ಅಕ್ಕಿ ಕೊಳ್ಳುವ ಶಕ್ತಿಯೂ ಇಲ್ಲ. ಆರ್ಥಿಕ ಕಾರಣದ ಕರಬಂಧಿಯನ್ನು ಆ ಭಾಗದಲ್ಲಿ ಸಂಘಟಿಸಲು ಡಾ॥ ದಿವಾಕರರ ಜೊತೆ ಶ್ರೀ ಮಾಸ್ತರರೂ ದುಡಿದಿದ್ದರು. ಈ ಅವಧಿಯಲ್ಲಿ (೧೯೩೨-೩೪) ಎರಡು ಬಾರಿ ಅವರು ದೀರ್ಘಕಾಲದ ಜೈಲು ಅನುಭವಿಸಿದ್ದರು. ೧೯೩೨ರಲ್ಲಿ ಸಿರಸಿಯಲ್ಲಿ ಅವರ ಬಂಧನವಾಗಿ, ಬೇಡಿ ಹಾಕಿ ಅವರನ್ನು ನಡೆಸಿ ಪೋಲೀಸರು ಕಾರವಾರಕ್ಕೆ ಒಯ್ಯುತ್ತಿರಲು ನಮ್ಮ ಊರ ಗಡಿ ದಾಟುವ ತನಕ ಜಯಜಯಕಾರ ಹಾಕಿ ಬೀಳ್ಕೊಟ್ಟೆವು.

೧೯೩೭ರ ಡಿ. ಎಲ್. ಬಿ. ಚುನಾವಣೆಯಲ್ಲಿ ಕಾಂಗ್ರೆಸ್ ಬಹುಮತದಿಂದ ಗೆದ್ದು ಬಂದಾಗ ನಾನು ಡಿ. ಎಲ್. ಬಿ. ಅಧ್ಯಕ್ಷನಾದೆ. ಆಗ ಶ್ರೀಮಾಸ್ತರರು ಡಿ. ಸಿ. ಸಿ. ಅಧ್ಯಕ್ಷರಾಗಿದ್ದರು. ಶ್ರೀಧರ ಕಿಣಿ ಮತ್ತು ಗೋಪಾಳ ಮಡಗಾಂವಕರ ಕಾರ್ಯದರ್ಶಿಗಳು. ಡಿ. ಎಲ್. ಬಿ. ಅಧ್ಯಕ್ಷನಾದ ನಾನೂ ಡಿ. ಸಿ. ಸಿ. ಅಧ್ಯಕ್ಷರಾದ ಅವರೂ ಜಿಲ್ಲೆಯ ಎಲ್ಲ ಹಳ್ಳಿಗಳಿಗೆ ಹೋಗಿ ಸಾರ್ವಜನಿಕ ಸಭೆ ನಡೆಸಿ ಜನರ ಕಷ್ಟ ಸುಖ ವಿಚಾರಿಸುತ್ತಿದ್ದೆವು. ಮುಂಬೈ ಪ್ರಾಂತ್ಯದಲ್ಲಿ ಸ್ಥಾಪಿತವಾದ ಕಾಂಗ್ರೆಸ್ ಸರಕಾರದ ನೀತಿಗಳ ಯಶಸ್ಸಿಗಾಗಿ ಯತ್ನಿಸುತ್ತಿದ್ದೆವು. ಎಲ್ಲ ಹಳ್ಳಿಗಳ ಜೊತೆಗೆ ನಮ್ಮದು ನಿಕಟ ಸಂಪರ್ಕವಿತ್ತು.

ಕಾಂಗ್ರೆಸ್ ಸಂಸ್ಥೆಯ ಜಿಲ್ಲಾ ಪದಾಧಿಕಾರಿಯಾಗಿದ್ದಾಗ ಶ್ರೀ ಮಾಸ್ತರರು ಹಗಲಿರುಳೂ ಅದರ ಕೆಲಸಕ್ಕಾಗಿ ಶ್ರದ್ಧೆಯಿಂದ ದುಡಿಯುತ್ತಿದ್ದರು. ಎಲ್ಲ ವರ್ಗದ ಜನರ ಸಂಪರ್ಕ ಹೊಂದಿದ್ದರು. ಕೆಲಕಾಲ ನಾನು ಜಿಲ್ಲಾ ಕಾರ್ಯದರ್ಶಿ ಆಗಿಯೂ ಇದ್ದೆ. ಆದರೆ ಹೆಚ್ಚಿನ ಕೆಲಸವನ್ನೆಲ್ಲ ಶ್ರೀ ಮಾಸ್ತರರೇ ಮಾಡುತ್ತಿದ್ದರು.

೧೯೪೭ರ ಸುಮಾರಿಗೆ ಡಿ. ಸಿ. ಸಿ. ಗೆ ನಡೆದ ಚುನಾವಣೆಯಲ್ಲಿ ಅವರು ಅಧ್ಯಕ್ಷರಾಗಿ ಆರಿಸಿ ಬಂದರೂ ನಾನು ಕಾರ್ಯದರ್ಶಿ ಸ್ಥಾನಕ್ಕೆ ಆಯ್ಕೆ ಆಗಲಿಲ್ಲ. ಇದಾಗಿ ಮೂರು ತಿಂಗಳಲ್ಲಿಯೇ ಶ್ರೀ ಮಾಸ್ತರರು ಅಧ್ಯಕ್ಷ ಸ್ಥಾನಕ್ಕೆ ರಾಜೀನಾಮೆ ನೀಡಿದರು. ಅಂದಿನಿಂದ ಅವರು ಕಾಂಗ್ರೆಸ್‌ನ ಸದಸ್ಯತ್ವವನ್ನೂ ಮುಂದುವರಿಸಲಿಲ್ಲ.

೧೯೪೪ರಲ್ಲಿ ಜೈಲಿನಿಂದ ಬಿಡುಗಡೆ ಆಗಿ ಬಂದ ನಂತರ ಅವರು ರಾಜಕೀಯ ಚಟುವಟಿಕೆಗಳನ್ನು ಸ್ವಲ್ಪ ಬದಿಗಿರಿಸಿ ವಿಧಾಯಕ ಕಾರ್ಯಗಳ ಕಡೆ ಗಮನ ನೀಡಲು ನಿರ್ಧರಿಸಿದರು. ಏಕೆಂದರೆ ಕ್ರಿಪ್ಸ್ ಮಿಶನ್‌ನ ಆಗಮನದ ನಂತರ ದೇಶದ ರಾಜಕೀಯ ದಿಗಂತದಲ್ಲಿ ಸ್ವರಾಜ್ಯ ಸೂರ್ಯನ ಉದಯದ ಲಕ್ಷಣ ಕಾಣಿಸಹತ್ತಿತ್ತು. ಉ. ಕ. ಜಿಲ್ಲಾ ಗ್ರಾಮ ಸೇವಾ ಸಮಿತಿಯನ್ನು ಸ್ಥಾಪಿಸಲು ನಿರ್ಧರಿಸಿ ನಾನು, ಶ್ರೀಮಾಸ್ತರರು, ಶ್ರೀಗೋಪಾಳ ಕಿಣಿ ಇವರುಗಳು ಬಂಡವಾಳ ಸಂಗ್ರಹಣೆಗಾಗಿ ಮುಂಬೈಗೆ ಹೋದೆವು. ಪಡುಬಿದ್ರಿ ರಾಮರಾವ್, ಸೀತಾಬಾಯಿ ಪಡುಬಿದ್ರಿ,

ಕೊಪ್ಪಿಕರ ಗಣೇಶ ಹಾಗೂ ಅವರ ಪತ್ನಿ, ಕೆ. ಎನ್. ಗಾಯ್ತೊಂಡೆ, ಗೋವಿಂದ ಗುಡಾಳ, ಕರ್ನಾಟಕ ಪ್ರೆಸ್‌ನ ಎಂ. ಎನ್. ಕುಲಕರ್ಣಿ, ಎಂ. ಎಂ. ಪ್ರಭು, ರಾಯ ಮಂಜುನಾಥ ಶೆಟ್ಟಿ, ಎ. ಎಸ್. ಪಡುಕೋಣೆ ಮುಂತಾದ ನಮ್ಮ ಜಿಲ್ಲೆಯ ಜನರೇ ಒಟ್ಟು ೨೪,೦೦೦ ರೂ. ದೇಣಿಗೆ ನೀಡಿದರು. ಜಿಲ್ಲೆಯ ಹೊರಗಿನ ಜನರಿಂದ ದೇಣಿಗೆ ಪಡೆಯಲಿಲ್ಲ. ಬೇರೆಯವರಿಂದ ದೇಣಿಗೆ ಪಡೆಯುವುದು ನಮ್ಮ ಆತ್ಮ ಗೌರವಕ್ಕೆ ಕುಂದೆಂದು ಶ್ರೀಮಾಸ್ತರರು ಭಾವಿಸಿದ್ದರು. ಇದು ನಮ್ಮ ಜಿಲ್ಲೆಯ ಜನರ ಮನೋವೃತ್ತಿಗೆ ಅನುಗುಣವಾಗಿಯೇ ಇತ್ತು. ಮುಂಬೈಯಲ್ಲಿ ನಾವು ಶ್ರೀಠಕ್ಕರ ಬಾಪಾ ಅವರನ್ನು ಕಂಡು ನಮ್ಮ ವಿಚಾರಗಳನ್ನು ಅವರಿಗೆ ತಿಳಿಸಿದಾಗ, ಅವರು ಸಂತುಷ್ಟರಾಗಿ "ಇದರಲ್ಲಿ ನಾನು ಮಾಡಬೇಕಾದದ್ದೇನು, ತಿಳಿಸಿ" ಎಂದರು. "ನಮಗೆ ತಮ್ಮ ಆಶೀರ್ವಾದವಷ್ಟೇ ಸಾಕು", ಎಂದು ನಾನು ಹೇಳಿದೆ. "ಬಂದವರು ನಾಯಕ ಮಾಸ್ತರರು ಮತ್ತು ನೀವು. ನಿಮಗೆ ನನ್ನ ಪೂರ್ಣ ಆಶೀರ್ವಾದ ಇದ್ದೇ ಇದೆ", ಎಂದು ನಮ್ಮ ಕೆಲಸದ ಬಗ್ಗೆ ಯಶಸ್ಸುಕೋರಿದರು. ನಂತರ ನಾವು ಶ್ರೀ ವೈಕುಂಠಲಾಲ ಮೆಹತಾರನ್ನೂ ಕಂಡಿದ್ದೆವು. ಅವರೂ ಕೂಡಾ ತಮ್ಮಿಂದ ಯಾವುದಾದರೂ ಸಹಾಯಬೇಕೇ, ಎಂದರು. ನಾವು ಬೇಡವೆಂದಾಗ "ಅಂಥ ಪ್ರಸಂಗ ಬಂದಾಗ ದಾಕ್ಷಿಣ್ಯ ಮಾಡದೇ ತಿಳಿಸಿ", ಎಂದು ಶ್ರೀಮಾಸ್ತರರಿಗೆ ಹೇಳಿದ್ದರು. ಶ್ರೀ ಮೆಹತಾ ಅವರು ಶ್ರೀ ಎಸ್. ಕೆ. ಪಾಟೀಲರಿಗೆ ತಿಳಿಸಿ ಬಿ. ಪಿ. ಸಿ. ಸಿ. ಯಿಂದ ನಮಗೆಲ್ಲ ಒಂದು ಸತ್ಕಾರ ಕಾರ್ಯಕ್ರಮ ಏರ್ಪಡಿಸಿದ್ದರು. ಶ್ರೀ ಮಾಸ್ತರರ ಬಗ್ಗೆ ಮುಂಬೈಯಲ್ಲಿ ಆಗ ಅಷ್ಟು ಗೌರವ ಇತ್ತು. ನಮ್ಮ ಜಿಲ್ಲೆಯ ಬಗೆಗೂ ಅಷ್ಟೇ.

ಈ ರೀತಿ ಸಂಗ್ರಹಿಸಿದ ಬಂಡವಾಳದಿಂದ ಖಾದಿ ಗ್ರಾಮೋದ್ಯೋಗಗಳ ಉತ್ತೇಜನಕ್ಕಾಗಿ ಲಾಭನಷ್ಟಗಳೆರಡಕ್ಕೂ ಅವಕಾಶ ನೀಡದ ಕಲ್ಪನೆಯಿಂದ ಗ್ರಾಮ ಸೇವಾ ಸಮಿತಿ ಸ್ಥಾಪಿಸಿದೆವು. ಬಡತನವೇ ತುಂಬಿರುವ ನಮ್ಮ ಜಿಲ್ಲೆಯಲ್ಲಿ ಇಂಥ ಒಂದು ವಿಧಾಯಕ ಕಾರ್ಯನಡೆಸಬೇಕೆಂಬ ಕಲ್ಪನೆ ಶ್ರೀ ಮಾಸ್ತರರದೇ. ಆರಂಭದ ಕೆಲವು ವರ್ಷಗಳ ಅವಧಿಯಲ್ಲಿ ಸಮಿತಿಗೆ ೧೦,೦೦೦ ರೂ. ನಷ್ಟವೇ ಆಯಿತು. ಆದರೂ ನಾವು ಧೃತಿಗೆಡಲಿಲ್ಲ. ಆರಂಭದಲ್ಲಿ ಶ್ರೀ ಗೋಪಾಳ ಕಿಣಿ, ಮುಂದೆ ಶ್ರೀ ವಾ. ಅ. ಹೊದಿಕೆ, ನಂತರ ಶ್ರೀ ಶ್ರೀಧರ ಕಿಣಿ ಅದರ ಕಾರ್ಯದರ್ಶಿ ಆಗಿ ಕಾರ್ಯ ನಿರ್ವಹಿಸಿದರು. ಶ್ರೀ ಮಾಸ್ತರರು ಅದರ ಮಾರ್ಗದರ್ಶಕರಾಗಿ ಇದ್ದರು. ಅವರು ಆಗ ಇಲ್ಲಿಯೇ ಬೊಬ್ರುವಾಡೆಯಲ್ಲಿ ವಾಸಮಾಡುತ್ತ ಇದ್ದರು. ೧೯೫೮ರಲ್ಲಿ ಅಂಬರ ಚರಖಾವನ್ನು ಜನಪ್ರಿಯಗೊಳಿಸಲು ಶಿರಸಿಗೆ ಬಂದ ಶ್ರೀ ವಿ. ಎಲ್. ಮೆಹತಾ ನಮಗೆ ಹೇಳಿದರು. ನಾವು ಆ ಕಾರ್ಯಕ್ರಮ ಸ್ವೀಕರಿಸಿದೆವು. ಇಂದು ಈ ಸಮಿತಿಯು ೧೦ ಲಕ್ಷ ರೂ ಬೆಲೆಯ ಆಸ್ತಿಪಾಸ್ತಿಯನ್ನು ಹೊಂದಿದೆಯಲ್ಲದೇ

ಸುಮಾರು ಒಂದು ಸಾವಿರ ಜನಕ್ಕೆ ಪ್ರತ್ಯಕ್ಷ-ಪರೋಕ್ಷ ಉದ್ಯೋಗ ಒದಗಿಸುತ್ತಿದೆ. ಜಿಲ್ಲೆಯ ಕಚ್ಚಾಮಾಲಿನಿಂದ ಜಿಲ್ಲೆಯಲ್ಲೇ ಸಿದ್ಧವಸ್ತು ತಯಾರಾಗುವಂತೆ ಮಾಡಿ ಗಾಂಧೀಜಿಯವರ ಕನಸನ್ನು ಕಾರ್ಯಾಚರಣೆಗೆ ತರುವಲ್ಲಿ ಕಿರುಹೆಜ್ಜೆಗಳನ್ನು ಇಡುತ್ತಿದೆ. ಇಲ್ಲಿ ತಯಾರಾದ ಖಾದಿಗೆ ವಿಶೇಷವಾದ ಬೇಡಿಕೆಯು ಕೆಲಕ್ಷೇತ್ರಗಳಲ್ಲಿ ಇದ್ದು, ಅಲ್ಲಿಂದ ನಮಗೆ ಮುಂಗಡ ಬೇಡಿಕೆಗಳು ಬರುತ್ತಿವೆ. ಒಬ್ಬ ನೇಕಾರನಿಗೆ 6–7 ರೂ. ಮತ್ತು ನೂಲುವವರಿಗೆ ಸರಾಸರಿ 3ರೂ. ಕೂಲಿಕೊಡಲು ಸಮಿತಿ ಸಮರ್ಥವಾಗಿದೆ. ಗ್ರಾಮೀಣ ಬಡ ಮಹಿಳೆಯರು ಹಳ್ಳಿಯಲ್ಲೇ ಈ ರೀತಿ ಸಂಪಾದಿಸಲು ಸಾಧ್ಯವಾದುದು ಸಣ್ಣ ಮಾತೇನಲ್ಲ.

ಶ್ರೀ ಮಾಸ್ತರರ ಮಾರ್ಗದರ್ಶನದಂತೆ ನಾನು ಎರಡು ಕಾರ್ಮಿಕರ ಸಹಕಾರ ಸಂಘಗಳನ್ನೂ ಅರಂಭಿಸಿದೆ. ೧೯೪೮ರಲ್ಲಿ ಇಲ್ಲಿನ ಸರ್ವೋದಯ ಕೇಂದ್ರದಿಂದ ೫೦೦೦ ರೂ. ಸಾಲ ಪಡೆದು ಹಿಚ್ಕಡ ಗ್ರೂಪ್ ಸೊಸೈಟಿ ಆರಂಭ ಆಯಿತು. ಮೊದಲ ವರ್ಷದಲ್ಲೆ ೬೦,೦೦೦ ರೂ. ನಿವ್ವಳ ಲಾಭ ಬಂತು. ಈಗ ಸರಾಸರಿ ೫೦ ರಿಂದ ೬೦,೦೦೦ ರೂ. ಲಾಭ ಗಳಿಸುತ್ತಿದೆ. ಅಂಕೋಲಾದಲ್ಲಿರುವ ಮಾವಿನ ಪಲ್ಪ್ ತಯಾರಿಸುವ (ಓರಿಯಂಟಲ್) ಕಾರ್ಖಾನೆಯನ್ನೂ ಅದು ನಡೆಸುತ್ತಿದೆ. ಎರಡನೆಯದು ಅಂಕೋಲಾ ಗ್ರೂಪ್ ಸೊಸೈಟಿ. ಇದರಿಂದ ಒಂದು ಗೋಡಂಬಿ ಸಂಸ್ಕರಣ ಕೇಂದ್ರ ಕೂಡ ನಡೆಯುತ್ತಿದೆ. ಈ ಎರಡೂ ಸಂಸ್ಥೆಗಳಿಂದ ಒಂದು ಸಾವಿರ ಕಾರ್ಮಿಕರಿಗೆ ಲಾಭ ಆಗಿದೆ. ಈ ಎಲ್ಲ ಸಂಸ್ಥೆಗಳಲ್ಲಿ ಶೋಷಣೆ, ವರ್ಗ ಕಲಹದ ಪ್ರಶ್ನೆ ಇಲ್ಲ. ಇದರೆಲ್ಲದರ ಪ್ರೇರಕರು ಶ್ರೀ ಮಾಸ್ತರರು ಎಂದು ಇನ್ನೊಮ್ಮೆ ಹೇಳಬೇಕು. ಈ ಸಂಸ್ಥೆಗಳಿಂದ ಅನೇಕ ಸಾರ್ವಜನಿಕ ಸಂಸ್ಥೆಗಳಿಗೆ ದಾನ ನೀಡಲಾಗಿದೆ. ಕಾರ್ಮಿಕರಿಗೆ ವೈದ್ಯಕೀಯ ಸೌಲಭ್ಯ ಒದಗಿಸಲಾಗಿದೆ. ಹಿಂದುಳಿದ ಈ ಮಲೆನಾಡಿನ ಜಿಲ್ಲೆಯಲ್ಲಿ ಗಾಂಧೀಜಿಯವರ ಕಲ್ಪನೆಗನುಗುಣವಾಗಿ, ಸ್ವಾವಲಂಬನೆಯ ಕ್ರಮಗಳಾಗಿ ಈ ಕೆಲಸ ನಡೆಸಿದ್ದೇವೆ. ಬಡ ಕಾರ್ಮಿಕರ ಕಲ್ಯಾಣಕ್ಕೆ ಯತ್ನಿಸುತ್ತಿದ್ದೇವೆ.

ಶ್ರೀ ಮಾಸ್ತರರ ಇನ್ನೊಂದು ಆಶೆಯೆಂದರೆ ಕುಸೂರಲ್ಲಿ ಸ್ಥಾಪಿಸಿದ ಆಶ್ರಮ ಗೋವಿಂದಧಾಮ. ಶ್ರೀ ರಮಾನಂದ ರಂಗೈನರು ಅಲ್ಲಿ ಹಗಲು ರಾತ್ರಿ ದುಡಿದು ಅಡವಿಯನ್ನು ನಂದನವಾಗಿ ಮಾಡಿದ್ದಾರೆ. ಅವರ ಬೆವರು ಬಿದ್ದು ಆ ನೆಲ ಸಾರವತ್ತಾಗಿದೆ. ಈ ವರ್ಷ ೧೪,೦೦೦ ರೂ. ಬೆಲೆಯ ಟೊಮೆಟೊ ಬೆಳೆಯನ್ನೇ ಅವರು ತೆಗೆದಿದ್ದಾರೆ.

ಈ ಆಶ್ರಮಕ್ಕಾಗಿ ಶ್ರೀ ಮಾಸ್ತರರು ಜೀವಂತವಾಗಿದ್ದಾಗ ನಾಲ್ಕು ಸಾವಿರ ರೂ ಸಂಗ್ರಹಿಸಿ ಇಟ್ಟಿದ್ದರು. ಸ್ವಾಮಿ ಸೇವಾನಂದರಂಥ ಗಣ್ಯ ಆಧ್ಯಾತ್ಮಿಕ ಸಾಧಕರೂ ಶ್ರೀಮತಿ ಮೀರಾ ಕೊಪ್ಪೀಕರರಂಥ ಸುಶೀಲ ಕಾರ್ಯಕರ್ತೆಯೂ ಅಲ್ಲಿ ನೆಲೆಸುವುದಾಗಿ

ತಿಳಿದಾಗ ನನಗೆ ಆ ಆಶ್ರಮದ ಬಗ್ಗೆ ತೀರ ಉತ್ಸಾಹವೆನಿಸಿತು. ಹೀಗಾಗಿ ಶ್ರೀ ಮಾಸ್ತರರು ತೀರಿಕೊಂಡನಂತರ ನಾನೇ ಮುಂದಾಗಿ ಒಟ್ಟು ೧೦,೦೦೦ ರೂ. ವೆಚ್ಚದಿಂದ ಆಶ್ರಮದ ಕಟ್ಟಡದ ಕೆಲಸ ಮಾಡಿಸಿದೆ. ಶ್ರೀ ಮಾಸ್ತರರು ಕೊಡಿಟ್ಟ ಹಣಕ್ಕೂ ಮೇಲೆ ೬೦೦೦ ರೂ. ಖರ್ಚಾಗಿದೆ. ಅದರದೆಲ್ಲ ವ್ಯವಸ್ಥೆ ಇನ್ನೂ ಆಗಬೇಕು. ಆದರೆ ಶ್ರೀ ಮಾಸ್ತರರ ಇಚ್ಛೆಯನ್ನು ಪೂರ್ತಿಮಾಡಿದ ಸಮಾಧಾನ ನನಗಿದೆ.

ಅವರು ಮಾಡುತ್ತಿದ್ದ ಎಲ್ಲ ಕೆಲಸಗಳನ್ನೂ ಈ ದೇಹವಿರುವವರೆಗೆ ಮುಂದುವರಿಸಲು ಶ್ರೀ ಮಾಸ್ತರರ ನೆನಪು ನನಗೆ ಸ್ಫೂರ್ತಿನೀಡುತ್ತಿದೆ.

ಮಾಸ್ತರರ ಅಪರಿಗ್ರಹವ್ರತದ ವಿಚಾರಮಾತ್ರ ಇಲ್ಲಿ ವಿಶೇಷವಾಗಿ ಹೇಳಬೇಕು. ತಮಗೆ ಎಷ್ಟೇ ಕಷ್ಟವಿದ್ದರೂ ಯಾರಿಂದಲೂ ಅವರು ಸಹಾಯ ಅಪೇಕ್ಷಿಸಿದವರಲ್ಲ. ಅವರ ಸಹಪಾಠಿಗಳೂ ಶಿಷ್ಯರೂ ಸಾಕಷ್ಟು ಅನುಕೂಲವಂತರಾಗಿ ಇದ್ದು ಅವರಿಗೆ ಹಣ ನೀಡಲು ಸದಾ ಸಿದ್ಧರಾಗಿದ್ದರೂ ಅವರು ಅದನ್ನು ಸ್ವೀಕರಿಸುತ್ತಿರಲಿಲ್ಲ. ಅವರ ಅಸಂಗ್ರಹವೃತ್ತಿಯ ವಿಚಾರ ಎಷ್ಟೋ ಜನಕ್ಕೆ ಅರ್ಥವಾಗಿಲ್ಲ. ಅವರೇ ಕಟ್ಟಿ ನಿಲ್ಲಿಸಿದ ಗ್ರಾಮ ಸೇವಾ ಸಮಿತಿಯಿಂದಲೂ ಅವರು ಹಣ ಪಡೆಯಲು ಬಯಸಲಿಲ್ಲ. ಇದಕ್ಕೆ ಅವರ ಅಸಂಗ್ರಹವೃತ್ತಿ, ಸ್ವಾಭಿಮಾನಗಳೇ ಕಾರಣ. ಇತರರು ನೀಡುವ ನೆರವಿನ ಬಗ್ಗೆಯೂ ಅವರದು ಇದೇ ನಿಲುವು. ಮಾದನಗೇರಿಯಲ್ಲಿ ನೆಲೆನಿಂತ ಅವರನ್ನು (ಅಲ್ಲಿ ಅವರ ಯೋಗಕ್ಷೇಮ ನೋಡಿಕೊಳ್ಳುತ್ತಿದ್ದ ಶ್ರೀಮತಿ ಅಮರಾವತಿ ಪೈ ಅವರು ತೀರಿಕೊಂಡಾಗ) ಅಂಕೋಲೆಗೆ ಕರೆತಂದು ಇಲ್ಲಿಯೇ ನೋಡಿಕೊಳ್ಳಬೇಕೆಂದು ಗ್ರಾಮಸೇವಾ ಸಮಿತಿ ಠರಾವನ್ನು ಮಂಜೂರು ಮಾಡಿ, ಅವರ ಯೋಗಕ್ಷೇಮದ ಜವಾಬ್ದಾರಿ ಹೊತ್ತಿತು. ಅವರು ಅಂಕೋಲೆಗೆ ಬಂದರೂ ಸಮಿತಿಯ ನೆರವು ಪಡೆಯಲು ಒಪ್ಪಲಿಲ್ಲ. ಅವರ ಅವಶ್ಯಕತೆಗಳು ಅತ್ಯಲ್ಪವೇ. ಅವುಗಳೇನಿದ್ದರೂ ಪೂರೈಸಲು ನಾನಾಗಲೀ ಸಮಿತಿಯಾಗಲೀ ಎಂದೂ ಹಿಂಜರಿಯಲಿಲ್ಲ. ಮಾದನಗೇರಿಯಲ್ಲಿ ಅವರು ಇದ್ದಾಗಲೂ ಅಲ್ಲಿನ ಅವರ ಅನುಕೂಲತೆಗಾಗಿ ಕಟ್ಟಡದ ಕೆಲಸ ಪೂರ್ತಿಮಾಡಿಸಿದ್ದೆವು. ಅವರ ಅಡಚಣೆಗಳನ್ನು ದೂರ ಮಾಡಲು ಶ್ರಮಿಸಿದ್ದೆವು. ಆದರೆ ಅಪವ್ಯಯ, ದಾನಸ್ವೀಕಾರ, ಪರಾವಲಂಬನ ಅವರಿಗೆ ಸರಿಬರುತ್ತಿರಲಿಲ್ಲವೆಂಬ ಸಂಗತಿ ಮರೆಯಲಾಗದ್ದು. ಅವರ ಜೊತೆಗಾರರಲ್ಲೂ ಇದೇ ರೀತಿಯ ಮನೋವೃತ್ತಿ ಬೆಳೆದಿದೆ ಎಂಬುದು ಹೆಮ್ಮೆಯ ವಿಷಯ.

# ತಪಸ್ವಿ - ಸಾಧಕ

## ಜೋಗಿ ಬೀರಣ್ಣ ನಾಯಕ ಶೆಟಗೇರಿ

ಮಹಾತ್ಮಾ ಗಾಂಧೀಜಿಯವರು ಅಹಿಂಸಾಮಯ ಸತ್ಯಾಗ್ರಹ ಆಂದೋಲನಕ್ಕೆ ಕರೆಕೊಟ್ಟರು. ಸತ್ಯಾಗ್ರಹದ ತತ್ತ್ವಗಳನ್ನು ತಿಳಿಹೇಳಿದರು. ಅಹಿಂಸೆ, ಸತ್ಯ, ಅಸ್ತೇಯ, ಅಸ್ವಾದ, ಬ್ರಹ್ಮಚರ್ಯ, ಅಸಂಗ್ರಹ, ಶರೀರಶ್ರಮ, ಸರ್ವತ್ರಭಯ ವರ್ಜನ, ಸರ್ವಧರ್ಮಸಮಾನತ್ವ, ಸ್ವದೇಶಿ, ಸ್ಪರ್ಶಭಾವನಾ ಎಂಬ ಹನ್ನೊಂದು ಆಶ್ರಮವ್ರತಗಳ ಪಾಲನೆಯನ್ನು ಮುಂದಿಟ್ಟರು. ಮಾತೃಭೂಮಿಯ ದಾಸ್ಯ ಶೃಂಖಲೆಯನ್ನು ಕಿತ್ತೊಗೆಯಲು ಲಕ್ಷೋಪಲಕ್ಷ ಜನರು ತಮ್ಮ ತಮ್ಮ ಉದ್ಯೋಗ ವ್ಯವಸಾಯಗಳನ್ನೆಲ್ಲ ತೊರೆದು ತ್ಯಾಗಕ್ಕೆ ಸಿದ್ಧರಾಗಿ ಗಾಂಧೀಜಿಯವರ ಅನುಯಾಯಿ ಗಳಾದರು. ಅದೊಂದು ಹೊಸಯುಗವೇ ಆರಂಭವಾಯಿತು. ಸತ್ಯಾಗ್ರಹ ನಡೆಯಿತು! ಸ್ವಾತಂತ್ರ್ಯ ಲಭಿಸಿತು! ಪ್ರಜಾಪ್ರಭುತ್ವ ನೆಲೆಗೊಂಡಿತು. ಕಾಲಕ್ರಮೇಣ ಪರಿಸ್ಥಿತಿ ಬದಲಾಗಹತ್ತಿತು, ಸ್ವಾರ್ಥ ಹೆಚ್ಚಿತು, ಗಾಂಧೀಜಿಯವರ ಕನಸಿನ ರಾಮ ರಾಜ್ಯಕ್ಕೆ ಮೋಡ ಮುಸುಕ ಹತ್ತಿತು, ಗಾಂಧಿ ತತ್ತ್ವಗಳು ಕರಗ ಹತ್ತಿದವು.

ಆದರೂ ದೇಶದ ತುಂಬ ಅಲ್ಲೊಬ್ಬರು ಇಲ್ಲೊಬ್ಬರೆಂದು ಸಾವಿರಾರು ಗಾಂಧೀ ತತ್ತ್ವಾನುಯಾಯಿಗಳು ಗಾಂಧೀ/ತತ್ತ್ವಗಳನ್ನೇ ತಮ್ಮ ಜೀವನದ ಧ್ಯೇಯವನ್ನಾಗಿ ಇಟ್ಟುಕೊಂಡು ಕರ್ಮಯೋಗಿಗಳಾಗಿ ಬಾಳಿದರು. ಅಂಥ ಸಾಧಕರಲ್ಲಿ ದಿ॥ ನಾಯಕ ಮಾಸ್ತರರು ಮೇಲ್ಪಂಕ್ತಿಗೆ ಸೇರಿದವರಾಗಿದ್ದರು. ಅಂತಲೇ ಅವರು ಕರ್ನಾಟಕದ ಗಾಂಧೀ ಎಂದು ಹೆಸರು ಪಡೆದರು.

ನನಗೆ ದಿ॥ ನಾಯಕ ಮಾಸ್ತರರ ಪ್ರತ್ಯಕ್ಷ ಪರಿಚಯವಾದದ್ದು ೧೯೩೦ನೇ ಇಸವಿಯಲ್ಲಿ ಅಂಕೋಲೆಯಲ್ಲಿ ನಡೆದ ಉಪ್ಪಿನ ಸತ್ಯಾಗ್ರಹದ ಕಾಲಕ್ಕೆ. ಅದಕ್ಕೂ ಮೊದಲು ಖಾದಿ, ಸ್ವದೇಶೀ ಪ್ರಚಾರಕ್ಕಾಗಿ ಒಂದೆರಡು ಸಲ ನಮ್ಮ ಊರಿಗೆ ಅವರು ಬಂದು ಹೋದ ನೆನಪು ಅಷ್ಟೆ.

ದಿ॥ ಮಾಸ್ತರರು ಸಿದ್ದಾಪುರ ತಾಲೂಕಿನಲ್ಲಿ ಹುಟ್ಟಿದವರೆಂದೂ, ಬಿ. ಎ. ಪದವೀಧರರೂ, ಹೈಸ್ಕೂಲು ಶಿಕ್ಷಕರೂ ಆಗಿ, ಗಾಂಧೀಜಿಯವರ ಕರೆಗೆ ಓಗೊಟ್ಟು ನೌಕರಿಗೆ ರಾಜೀನಾಮೆ ಇತ್ತು ದೇಶ ಸೇವೆಗೆ ತಮ್ಮನ್ನು ಸಂಪೂರ್ಣವಾಗಿ ಅರ್ಪಿಸಿ ಕೊಂಡು ಗಾಂಧೀತತ್ತ್ವ ದೀಕ್ಷೆಯನ್ನು ಕೈಕೊಂಡ ತ್ಯಾಗಿಗಳು ಎಂದು ನಮಗೆ

ಆರಂಭದಲ್ಲಿ ಆದ ಪರಿಚಯ. ಅವರನ್ನು ಕಾಣುವಾಗಲೂ ಅದೇ ಭಾವನೆ ಮೂಡು ತ್ತಿತ್ತು. ಮೊಣಕಾಲುದ್ದದ ಖಾದಿ ಪಂಚೆ ಉಟ್ಟುಕೊಂಡು, ಹೆಗಲಿಗೊಂದು ಖಾದಿ ಚೀಲ, ಕೈಲೊಂದು ನೂಲುವ ತಕಲಿ, ಇವುಗಳನ್ನು ಹೊಂದಿದ ತೇಜಸ್ವಿ ಮುಖದ ಆ ವ್ಯಕ್ತಿಯನ್ನು ಕಾಣುವಾಗ ಯಾರಿಗಾದರೂ ಅವರ ಬಗ್ಗೆ ಗೌರವಾದರ ಹುಟ್ಟುವಂತಿತ್ತು.

೧೯೩೦ರ ಉಪ್ಪಿನ ಸತ್ಯಾಗ್ರಹಕ್ಕೆ ಅಂಕೋಲೆಯು ಕರ್ನಾಟಕದ ರಣಕ್ಷೇತ್ರ ವಾಗಿತ್ತು. ಆ ಕಾಲಕ್ಕೆ ಕರ್ನಾಟಕದ ಪ್ರಮುಖ ಕಾರ್ಯಕರ್ತರನೇಕರು ಅಂಕೋಲೆ ಯಲ್ಲಿ ಸೇರಿದ್ದರು. ದಿ॥ ನಾಯಕ ಮಾಸ್ತರರು, ಗುಲವಾಡಿ ಶಂಕರರಾಯರು ಕೌಜಲಗಿ ಹಣಮಂತರಾಯರು ಮುಂತಾದವರು ಸತ್ಯಾಗ್ರಹದ ಪ್ರಚಾರಕ್ಕಾಗಿ ಅಂಕೋಲೆಗೆ ಬಂದರು. ಅವರು ಉಳಿದುಕೊಂಡಿದ್ದ ಕಾಂಗ್ರೆಸ್ ಭವನವು ಅಕ್ರಮ ವೆಂದು ಸಾರಿ, ಆಫೀಸನ್ನು ತೆರೆವುಮಾಡಬೇಕೆಂದು ಸರಕಾರವು ಆಜ್ಞೆಮಾಡಿತು. ಈ ಅನ್ಯಾಯದ ಅಜ್ಞೆಯನ್ನು ಪಾಲಿಸುವುದಿಲ್ಲವೆಂದು ಸತ್ಯಾಗ್ರಹ ಹೂಡಿ ಕುಳಿತ ಕಾರಣ ನಾಯಕ ಮಾಸ್ತರರನ್ನು ಸರಕಾರವು ಕೈದುಮಾಡಿ ಮೂರು ತಿಂಗಳು ಶಿಕ್ಷೆಕೊಟ್ಟು ಕಾರವಾರ ಜೈಲಿಗೆ ಕಳಿಸಿತು.

ಅದೇ ಕಾಲಕ್ಕೆ ನಾನು ಸಭೆಯಲ್ಲಿ ಸರಕಾರದ ವಿರುದ್ಧ ಭಾಷಣ ಮಾಡಿದ್ದಕ್ಕಾಗಿ ಎಂಟು ತಿಂಗಳು ಶಿಕ್ಷೆಹೊಂದಿ ಕಾರವಾರ ಜೈಲು ಸೇರಿದೆ. ಈ ರೀತಿ ನಾಯಕ ಮಾಸ್ತರರ ಸಾನಿಧ್ಯ ನನಗೆ ಲಭಿಸಿತು.

ಇಲ್ಲಿಯ ರಾಜಕೀಯ ಕೈದಿಗಳಿಗೆ ಆ ಕಾಲಕ್ಕೆ ಜೈಲುವಾಸ ಹೊಸ ಅನುಭವ. ಜೈಲಿನ ನಿಬಂಧನೆಗಳು ಸಹ ಬಿಗಿಯಾಗಿದ್ದವು. ಕೊಟ್ಟ ಬಟ್ಟೆಯನ್ನು ತೊಟ್ಟು ಕೊಳ್ಳಬೇಕು; ಕೊಟ್ಟ ಆಹಾರ ಉಣ್ಣಬೇಕು; ಕೊಟ್ಟಷ್ಟು ಕೆಲಸವನ್ನು ಮಾಡಿ ಮುಗಿಸಬೇಕು; ಕೊಟ್ಟಷ್ಟು ನೀರಿನಲ್ಲಿ ಜಳಕ ಮುಗಿಸಬೇಕು; ಕೊಟ್ಟವೇಳೆಯಲ್ಲಿ ಶೌಚವಿಧಿ ಕೂಡ ಮುಗಿಸಬೇಕು. ಎಲ್ಲವೂ ಪೋಲೀಸರ ಆರ್ಡರ್ ಪ್ರಕಾರ ನೆಡೆಯಬೇಕು—ಹೀಗಿತ್ತು.

ನಾಯಕ ಮಾಸ್ತರರು ಜೈಲು ನಿಬಂಧನೆಗಳನ್ನು ಚಾಚೂ ತಪ್ಪದೆ ಪಾಲಿಸ ಬೇಕೆಂಬ ನಿರ್ಧಾರ ಹೊಂದಿದವರು. ಆದರೆ ಅವರ ದೇಹ ಪ್ರಕೃತಿಯು ಅದಕ್ಕೆ ಅನುಕೂಲ ಇದ್ದಿಲ್ಲ. ಆರಂಭದಲ್ಲಿ ನಮಗೆ ಪ್ರತಿ ಒಬ್ಬರಿಗೆ ಅರವತ್ತು ತೆಂಗಿನಕಾಯಿ ಗಳ ಸಿಪ್ಪೆಯನ್ನು ಭಾರವಾದ ಕೈ ಬಡಿಗೆಯಿಂದ ಕುಟ್ಟಿ ಕುಟ್ಟಿ ಹುರಿಮಾಡುವುದಕ್ಕೆ ಹದಗೊಳಿಸಿಕೊಡುವ ಕೆಲಸ ಕೊಟ್ಟಿದ್ದರು. ರೂಢಿಯಿಲ್ಲದ ಈಕೆಲಸದಿಂದ ಕೈರಟ್ಟೆ ಸೋಲುತ್ತಿತ್ತು. ಹೀಗಿರುವಾಗ ಸೂಕ್ಷ್ಮ ಪ್ರಕೃತಿಯವರಾದ ನಾಯಕ ಮಾಸ್ತರರಿಗೆ ಇದು ನೀಗದ ಕೆಲಸವಾಗಿತ್ತು. ಅವರು ಪಡುವ ಕಷ್ಟ ಸ್ಪಷ್ಟವಾಗಿ ಕಾಣುತ್ತಿತ್ತು. ಆದರೆ ನಾಯಕ ಮಾಸ್ತರರು ಸತ್ಯಾಗ್ರಹಿಯು ಕಷ್ಟಕ್ಕೆ ಹೆದರಿ ನಿಯಮವನ್ನು

ಉಲ್ಲಂಘಿಸಬಾರದೆಂಬ ದೃಢನಿರ್ಧಾರವನ್ನು ತಂದುಕೊಂಡು ಕಷ್ಟವನ್ನು ಸಹಿಸಿಯೂ ಹಸನ್ಮುಖಿಗಳಾಗಿಯೇ ಕೆಲಸಮಾಡಿ ಮುಗಿಸುತ್ತಿದ್ದರು. ಅವರ ಪ್ರತ್ಯಕ್ಷ ಆಚರಣೆಯ ಪರಿಣಾಮವು ಇತರ ಸತ್ಯಾಗ್ರಹಿಗಳ ಮನೋಬಲವನ್ನು ಹೆಚ್ಚಿಸುತ್ತಿತ್ತು. ಜೈಲಿನ ಕೆಲಸಗಳಲ್ಲಿ ಚಕ್ಕೀ (ಬೀಸು ಕಲ್ಲು) ಬೀಸುವ ಕೆಲಸ ಕಠಿಣವಾದದ್ದು. ಒಬ್ಬೊಬ್ಬ ಕೈದಿ ಇಂತಿಷ್ಟು ಗೋಧಿ ಬೀಸಿಕೊಡಬೇಕೆಂಬ ನಿರ್ಬಂಧ ಇತ್ತು. ಈ ಕೆಲಸವನ್ನು ಕ್ರಿಮಿನಲ್ ಕೈದಿಗಳಿಗೆ ಮಾತ್ರ ಕೊಡುತ್ತಿದ್ದರು. ಆದರೆ, ಒಂದೇ ಜೈಲಿನಲ್ಲಿರುವ ನಮ್ಮೊಳಗೆ ಆ ಭೇದವೇಕೆ? ನಾವೂ ಅವರೊಟ್ಟಿಗೇ ಆ ಕೆಲಸ ಮಾಡುತ್ತೇವೆ, ಎಂದು ದಿ|| ನಾಯಕ ಮಾಸ್ತರರೂ ಹೊದಿಕೆ ಮಾಸ್ತರರೂ ಅಧಿಕಾರಿಗಳಿಗೆ ಹೇಳಿ ಆ ಕೆಲಸ ಕೈಗೊಂಡರು. ಮುಂದೆ ನಾವೂ ಅವರನ್ನು ಹಿಂಬಾಲಿಸಿದೆವು.

ನಾಯಕ ಮಾಸ್ತರರು ಮತ್ತು ಹೊದಿಕೆ ಮಾಸ್ತರರು ಒಂದೇ ನಾಣ್ಯದ ಎರಡು ಮುಖವಿದ್ದಹಾಗೆ ಇದ್ದವರು. ಇಬ್ಬರೂ ಗಾಂಧೀಜಿಯವರ ಕರೆಗೆ ಓಗೊಟ್ಟು ನೌಕರಿ ತ್ಯಜಿಸಿ ದೇಶ ಸೇವೆಗೆ ತಮ್ಮನ್ನು ಅರ್ಪಿಸಿಕೊಂಡವರು. ಒಬ್ಬ ರಿಂದೊಬ್ಬರು ಆಕರ್ಷಿತರಾದವರು, ಒಬ್ಬರಿಂದೊಬ್ಬರು ಪ್ರಭಾವಿತರಾದವರು. ಇಬ್ಬರೂ ಬಹ್ಮಚಾರಿಗಳು. ಇಬ್ಬರೂ ಗಾಂಧೀ ತತ್ತ್ವಗಳನ್ನು ತಮ್ಮ ಆಚರಣೆಯಲ್ಲಿ ತರಲು ಅಹೋರಾತ್ರಿ ಪರಿಶ್ರಮಿಸಿದವರು. ಇಬ್ಬರೂ ಸರ್ವೋದಯ, ಭೂದಾನ ಕಾರ್ಯಗಳಲ್ಲಿ ಒಟ್ಟಾಗಿ ದುಡಿದವರು. ಆದರೆ, ಅವರಿಬ್ಬರಲ್ಲಿ ಸ್ವಲ್ಪ ಮಟ್ಟಿನ ವ್ಯತ್ಯಾಸ ಉಂಟು.

ಹೊದಿಕೆ ಮಾಸ್ತರರ ದೇಹ ಸದೃಢ ಮತ್ತು ನಿರೋಗಿ. ಅವರು ಯಾವ ಕೆಲಸ ಮಾಡಿದರೂ ಅವರ ದೇಹ ಸೋಲದು. ಯಾವ ಆಹಾರ ತಿಂದರೂ ಅವರ ದೇಹ ಜೀರ್ಣಿಸಿಕೊಳ್ಳಬಲ್ಲದು. ಉಪವಾಸವಿದ್ದರೂ ತಡಕೊಳ್ಳಬಲ್ಲದು. ಅವರಿಬ್ಬರ ವಿಚಾರ ಧಾರೆಯಲ್ಲಿಯೂ ಸ್ವಲ್ಪ ವ್ಯತ್ಯಾಸ. ಹೊದಿಕೆ ಮಾಸ್ತರರದು ವ್ಯಾವಹಾರಿಕ ದೃಷ್ಟಿ; ಬಾಹ್ಯ ದೃಷ್ಟಿ; ಸಮಾಜ ಸುಧಾರಣಾ ದೃಷ್ಟಿ; ಪ್ರಾಯೋಗಿಕ ದೃಷ್ಟಿ.

ನಾಯಕ ಮಾಸ್ತರರ ದೇಹ ಪ್ರಕೃತಿ ಅಷ್ಟು ಚೆನ್ನಾಗಿದ್ದುದಲ್ಲ. ಶರೀರದಲ್ಲಿ ಹೆಚ್ಚು ಬಲ ಇಲ್ಲ. ಮೇಲಿಂದ ಮೇಲೆ ಅವರ ಆರೋಗ್ಯ ಕೆಡುತ್ತಿತ್ತು. ಹೀಗಾಗಿ ಅವರಲ್ಲಿ ಅಶಕ್ತತೆ ತುಂಬಾ ಇತ್ತು. ಚಕ್ಕಿ ಬೀಸುವ ಕೆಲಸವು ಬಿಗಿಯಾದ ಕೆಲಸ. ಆ ಕೆಲಸಕ್ಕೆ ಶಕ್ತಿ ಬೇಕು;ಬೀಸಿ ಬೀಸಿ ಕೈಗಳಿಗೆ ಗುಳ್ಳೆ ಏಳುತ್ತಿದ್ದವು. ಗುಳ್ಳೆ ಒಡೆದು ನೀರು ಸೋರುತ್ತಿತ್ತು. ಆ ನೋವಿನಲ್ಲಿಯೇ ಮತ್ತೆ ಬೀಸಬೇಕಾಗಿತ್ತು. ನಾಯಕ ಮಾಸ್ತರರದು ಆಧ್ಯಾತ್ಮಿಕ ದೃಷ್ಟಿ; ಅಂತರ್ದೃಷ್ಟಿ; ತಾದಾತ್ಮ್ಯಭಾವ ದೃಷ್ಟಿ; ಚಿಂತನ ದೃಷ್ಟಿ. ಅವರ ಆತ್ಮ ಬಲವು, ಆ ನೋವಿನಲ್ಲಿಯೂ, ಕರ್ತವ್ಯ ಪಾಲನೆಯ

ಸಂತೃಪ್ತಿಯನ್ನು ಹೊಂದಿರುತ್ತಿತ್ತು. ಅವರು ತಮ್ಮ ಕೆಲಸವನ್ನು ಮಾಡಿ ಮುಗಿಸು ತ್ತಿದ್ದರು. ಇತರ ಸತ್ಯಾಗ್ರಹಿಗಳು ತಮ್ಮ ಕೆಲಸ ಕಡಿಮೆ ಮಾಡಬೇಕೆಂದು ಗೊಂದಲ ಹಾಕಿದಾಗ ನಾಯಕ ಮಾಸ್ತರರು ಸಂಕಟಪಟ್ಟು ಕೊಳ್ಳುತ್ತಿದ್ದರು. ಮತ್ತು ಸತ್ಯಾಗ್ರಹಿಗಳ ಕರ್ತವ್ಯವನ್ನು ತಿಳಿಸಿ ಹೇಳಿ ಅವರ ಮನಒಲಿಸುತ್ತಿದ್ದರು.

ಜೈಲಿನಲ್ಲಿ ಚಿಕ್ಕಿಯ ಕೆಲಸವು ಹೆಚ್ಚು ಕಠಿಣ ಕೆಲಸವಿದ್ದಂತೆ ಕಕ್ಕಸದ ಕೆಲಸವು ಬಹಳ ಕೀಳು ಕೆಲಸವೆಂದು ಭಾವಿಸಲಾಗುತ್ತಿತ್ತು. ಮಲದಕುಂಡವನ್ನು ಕೈಯಿಂದ ಎತ್ತಿ ಡಬ್ಬಿಯೊಳಗೆ ಸುರುವಿ ಹೆಗಲ ಮೇಲೆ ಹೊತ್ತು ಹೊರಗೆ ಒಯ್ದು ಕಂದಕಗಳಲ್ಲಿ ಸುರುವಿ ಬರಬೇಕಾಗುತ್ತಿತ್ತು. ಈ ಕೆಲಸವನ್ನು ಭಂಗಿ ಜನರಿಂದ ಹಾಗು ಕೀಳು ಸಮಾಜದವರೆಂದು ಪರಿಗಣಿಸಲ್ಪಟ್ಟವರಿಂದ ಮಾಡಿಸುತ್ತಿದ್ದರು. ಆ ಕೆಲಸವನ್ನು ನಾಯಕ ಮಾಸ್ತರ ಮತ್ತು ಹೊದಿಕೆ ಮಾಸ್ತರರು ಕೇಳಿ ಪಡಕೊಂಡರು ಮತ್ತು ಅದು ಪವಿತ್ರವಾದ ಕೆಲಸವೆಂದೂ ಭಂಗಿ ಕೆಲಸಮಾಡುವವರು ಕೀಳುಜನರೆಂದು ತಿಳಿಯು ವುದು ಪಾಪವೆಂದೂ ಇತರ ಸತ್ಯಾಗ್ರಹಿಗಳಿಗೆ ಬೋಧಿಸುತ್ತಿದ್ದರು. ಈ ರೀತಿಯಾಗಿ ನಾಯಕ ಮಾಸ್ತರರು ಗಾಂಧೀ ಮಾರ್ಗದಲ್ಲೂ ಮುನ್ನಡೆದಿದ್ದರು.

ನಾಯಕ ಮಾಸ್ತರರು ಜೈಲಿನವರು ಕೊಡುವ ಕೆಲಸದ ಅವಧಿಗಳಲ್ಲಿ ಹಾಗೂ ರಾತ್ರಿ ಸಮಯದಲ್ಲಿ ಪೂರ್ತಿ ಸಮಯವನ್ನು ಅಧ್ಯಯನ ಮತ್ತು ಅಧ್ಯಾಪನಗಳಲ್ಲಿ ಕಳೆಯುತ್ತಿದ್ದರು. ಅವರು ಇಂಗ್ಲಿಷ್, ಕನ್ನಡ, ಮರಾಠಿ, ಗುಜರಾಥಿ ಭಾಷೆಗಳನ್ನು ಬಲ್ಲವರಾಗಿದ್ದು ಹಿಂದಿ ಅಭ್ಯಾಸವನ್ನೂ ಮಾಡಿದ್ದರು. ಆ ಎಲ್ಲ ಭಾಷೆಗಳಲ್ಲಿನ ಗಾಂಧೀ ಸಾಹಿತ್ಯ, ಆಧ್ಯಾತ್ಮಿಕ ಗ್ರಂಥಗಳು, ಧಾರ್ಮಿಕ ಗ್ರಂಥಗಳು, ಯೋಗಾಸನ ಗಳು, ಬ್ರಹ್ಮಚರ್ಯ, ನಿಸರ್ಗ ಚಿಕಿತ್ಸೆ ಮುಂತಾದವುಗಳ ಬಗ್ಗೆ ಬರೆದ ಪುಸ್ತಕ ಗಳು, ಇವುಗಳನ್ನು ಹೆಚ್ಚಾಗಿ ಓದುತ್ತಿದ್ದರಲ್ಲದೆ ಸತ್ಯಾಗ್ರಹಿಗಳಿಗೆ ಗಾಂಧೀ ವಿಚಾರ ದೋಹನ, ಸತ್ಯಾಗ್ರಹಿಗಳ ಕರ್ತವ್ಯ, ಹರಿಜನೋದ್ಧಾರ, ಮದ್ಯಪಾನ ಪ್ರತಿಬಂಧ ಮುಂತಾದವುಗಳನ್ನು ಓದಿ ವಿವರಣೆ ಹೇಳುತ್ತಿದ್ದರು. ಪ್ರಾರ್ಥನೆಯ ಅರ್ಥ ವಿವರಣೆ ಯನ್ನು ಹೇಳುತ್ತಿದ್ದರು.

ಜೈಲಿನ ಆಹಾರ, ಕಟ್ಟುನಿಟ್ಟಾದ ನಿಯಮ ಪಾಲನೆ, ಶಕ್ತಿಗಿಂತ ಹೆಚ್ಚಿನ ಶ್ರಮ ಇವುಗಳಿಂದಾಗಿ ನಾಯಕ ಮಾಸ್ತರರ ಆರೋಗ್ಯ ಕೆಟ್ಟಿತು. ಆಮಾಂಸ ಹೊರಕಡೆ ಆಗ ಹತ್ತಿತು. ಅವರು ಖಾರ, ಉಪ್ಪು ತಿನ್ನುವುದನ್ನು ಬಿಟ್ಟು ಬಿಟ್ಟರು. ನಿಸರ್ಗ ಚಿಕಿತ್ಸೆ ನಡೆಸಿದರು. ಇಂಥ ಶಾರೀರಿಕ ವೇದನೆಯನ್ನು ಅನುಭವಿಸಿದರೂ ತಮ್ಮ ನಿಯಮ ನಿಷ್ಠ, ಕಾಯಕಗಳನ್ನು ಆತ್ಮಸಾತ್ ನಡೆಸುತ್ತಿದ್ದರು.

ನಾಯಕ ಮಾಸ್ತರರು ಉಪ್ಪಿನ ಸತ್ಯಾಗ್ರಹದಲ್ಲಿ ಶಿಕ್ಷೆಹೊಂದಿ ಬಿಡುಗಡೆ ಯಾದ ಮೇಲೆ ಅವರ ಸತ್ಯಾಗ್ರಹದ ಕ್ಷೇತ್ರ ಶಿರಸಿ ಸಿದ್ದಾಪುರ ತಾಲೂಕುಗಳಾದವು.

ಅಲ್ಲಿ ಅವರು ಜಂಗಲ್ ಸತ್ಯಾಗ್ರಹ, ಕರನಿರಾಕರಣೆಯ ಸಂಘಟನೆ ಮುಂತಾದ ಕಾರ್ಯಗಳನ್ನು ಮಾಡುತ್ತ ಮತ್ತೆ ಶಿಕ್ಷೆಹೊಂದಿ ೧೯೩೨ರಲ್ಲಿ ವಿಸಾಪುರ ಜೈಲು ಸೇರಿದರು. ಆ ಮೊದಲೇ ನಾನು ಹದಿನೈದು ತಿಂಗಳು ಶಿಕ್ಷೆಹೊಂದಿ ವಿಸಾಪುರ ಜೈಲು ಸೇರಿದ್ದೆ. ಹೀಗಾಗಿ ಅಲ್ಲಿಯೂ ನನಗೆ ನಾಯಕ ಮಾಸ್ತರರ ಜೊತೆಗೆ ಒಂದೇ ಬರಾಕಿನಲ್ಲಿ ಉಳಿಯುವ ಸುಯೋಗ ಒದಗಿತ್ತು.

ವಿಸಾಪುರ ಜೈಲು ಭದ್ರವಾದುದಲ್ಲ. ಹಂಗಾಮಿಯಾಗಿ ತಂತಿಬೇಲಿ ಹಾಕಿದ್ದಿತು. ಒಳಗಡೆ ಅನೇಕ ಬಿರುಕುಗಳಿದ್ದವು. ನಾವು ಸುಮಾರು ಎರಡೂವರೆ ಸಾವಿರಕ್ಕಿಂತ ಹೆಚ್ಚು ಜನ ಸತ್ಯಾಗ್ರಹಿಗಳು ಅಲ್ಲಿ ಇಡಲ್ಪಟ್ಟಿದ್ದೆವು. ಕೈದಿಗಳಿಗೆ ಕೊಡಲಿಕ್ಕೆ ಕೆಲಸ ಇದ್ದಿಲ್ಲ. ಹೀಗಾಗಿ ಅದೊಂದು ವ್ಯಾಸಂಗದ ಆಶ್ರಮವಾಗಿ ಪರಿಣಮಿಸಲ್ಪಟ್ಟಿತ್ತು. ನಾಯಕ ಮಾಸ್ತರರು ಅಲ್ಲಿ ತಮ್ಮ ಸಂಪೂರ್ಣ ಅವಧಿಯನ್ನು ಅಧ್ಯಯನ ಹಾಗೂ ಪ್ರವಚನಗಳಿಗಾಗಿ ಉಪಯೋಗಿಸಿಕೊಂಡರು. ಅವರು ಅಲ್ಲಿಂದ ಬಿಡುಗಡೆ ಹೊಂದಿ ಬಂದಮೇಲೆ, ಸರಕಾರವು ಅವರಿಗೆ ಪೆರೋಲ್ ಹೇರಿತು. ಅದನ್ನು ಮುರಿದು ಮತ್ತೆ ಪುನಃ ಶಿಕ್ಷೆಹೊಂದಿ ಜೈಲು ಸೇರಿದರು.

ಮುಂದೆ ಚಳುವಳಿ ಸ್ಥಗಿತಗೊಂಡಾಗ ಸಿರ್ಸಿ ತಾಲೂಕಿನ ಕೊರಕೋಡಿ ಗ್ರಾಮದಲ್ಲಿ ಆಶ್ರಮ ತೆಗೆದು, ಶ್ರೀ ಹೊದಿಕೆ ಮಾಸ್ತರರನ್ನು ಕೂಡಿಕೊಂಡು, ಒಕ್ಕಲುತನದ ಫಾರ್ಮ ತಯಾರಮಾಡಿ, ಸ್ವತಃ ಒಕ್ಕಲುತನವನ್ನು ಕೈಗೊಂಡರು. ವರ್ಧಾದಲ್ಲಿ ಹೊಸದಾಗಿ ತಯಾರಾದ ಕಾರ್ಡಿಂಗ ಮಷಿನ್ ತರಿಸಿ, ಶ್ರೀ ರಾಮಚಂದ್ರ ಭಟ್ಟ ಮುಂತಾದವರಿಂದ ಅದರಲ್ಲಿ ನೂಲುವ ತರಬೇತಿ ಕೊಟ್ಟದು ಅದೇ ಸಮಯದಲ್ಲಿ.

ನಾಯಕ ಮಾಸ್ತರರು ಸಿರಸಿ ಸಿದ್ದಾಪುರ ತಾಲೂಕುಗಳಲ್ಲಿ ಅನೇಕ ಬಗೆಯ ವಿಧಾಯಕ ಕಾರ್ಯಗಳನ್ನು ಕೈಗೊಂಡು ನಡೆಸಿ ಆಮೇಲೆ ಅಂಕೋಲಾ ತಾಲೂಕಿನ ಮೊಗಟಾ ಎಂಬ ಗ್ರಾಮಕ್ಕೆ ಬಂದು ಅಲ್ಲಿಯ ಹರಿಜನರ ಪರಿಸ್ಥಿತಿಯನ್ನು ಅಭ್ಯಸಿಸಿದರು. ಅಲ್ಲಿಯ ಹರಿಜನರಿಗೆ ಸ್ವಂತ ಸ್ಥಳ ಇದ್ದಿಲ್ಲ. ಭೂಧಣಿಗಳ ಜಾಗೆಗಳಲ್ಲಿಯೇ, ಗುಡಿಸಲುಗಳನ್ನು ಕಟ್ಟಿಕೊಂಡು, ಧಣಿಗಳ ಜೀತದ ಆಳುಗಳಾಗಿ ಪರಂಪರೆವರೆಗೆ ಅವರ ಗುಲಾಮರಂತೆ ಅವರು ಬಾಳುತ್ತಿದ್ದರು. ಅಜ್ಞಾನ, ಕುಡುಕತನ, ಹೊಲಸುತನ ತುಂಬಿತ್ತು. ನಾಯಕ ಮಾಸ್ತರರು ಆ ಹರಿಜನಕೇರಿಯಲ್ಲಿ ಹೋಗಿ ನೆಲಸಿದರು. ಅವರಿಗಾಗಿ ಒಂದು ಸ್ವತಂತ್ರ ನಿವೇಶನವನ್ನು ಪಡೆದರು. ಅಲ್ಲಿ ಅವರು ಸ್ವತಂತ್ರ ಗುಡಿಸಲುಗಳನ್ನು ಸಾಮೂಹಿಕವಾಗಿ ಸಹಕಾರದಿಂದ ನಿರ್ಮಿಸಿಕೊಳ್ಳುವಂತೆ ಮಾಡಿದರು. ತಾವು ಸಹ ಅವರ ಒಟ್ಟಿಗೆ ಉಳಿದರು. ಅವರಿಗೆ ಸ್ವಚ್ಛತೆಯ ಪಾಠವನ್ನು ಕಲಿಸಲು ಸ್ವತಃ ತಾವೇ ಕಸಬರಿಗೆಯನ್ನು ಹಿಡಿದು ಗುಡಿಸಿ, ಅವರೂ ಕಸಬರಿಗೆ ಹಿಡಿದು ಸ್ವಚ್ಛ ಮಾಡುವಂತೆ ಮಾಡಿದರು.

ಹರಿಜನರ ಕ್ಷೌರವನ್ನು ತಾವು ಮಾಡಿದರು. ಮುಂದೆ ತಮ್ಮ ತಮ್ಮ ಕ್ಷೌರಗಳನ್ನು ತಾವೇ ಮಾಡಿಕೊಳ್ಳುವಂತೆ ರೂಢಿಮಾಡಿಸಿದರು.

ಹರಿಜನರ ಜೊತೆಯಲ್ಲಿಯೇ ತಾವೂ ಕೊಡಲಿಹಿಡಿದ್ದು ಅವರನ್ನು ಅಡವಿಗೆ ಕರೆದುಕೊಂಡುಹೋಗಿ ಕಟ್ಟಿಗೆ ಕಡಿದುತಂದು ಮಾರಾಟಮಾಡಿ, ಸ್ವಂತ ಸಂಪಾದನೆ ಯಿಂದ ಸ್ವಾವಲಂಬೀ ಜೀವನ ನಡೆಸಲು ಕಲಿಸಿದರು. ಹರಿಜನರಿಗೆ ಓದು–ಬರಹ, ಪ್ರಾರ್ಥನೆ, ನೂಲುವುದು ಮುಂತಾದವುಗಳನ್ನು ಕಲಿಸಿದರು. ಕುಡುಕತನವನ್ನು ಬಿಡಿಸಿದರು ದೇಹ, ಬಟ್ಟೆ, ಮನೆ, ಅಂಗಳಗಳನ್ನು ಸ್ವಚ್ಛವಾಗಿ ಇಟ್ಟುಕೊಳ್ಳಲು ಕಲಿಸಿದರು. ಆ ಕಾಲಕ್ಕೆ ಕಾಕಾ ಕಾಲೇಲ್ಕರರೂ, ಉಮಾಬಾಯಿ ಕುಂದಾಪುರ ಅವರೂ, ಮೊಗಟಾಕ್ಕೆ ಹೋಗಿ ನಾಯಕ ಮಾಸ್ತರರ ಹರಿಜನ ಸೇವೆಯನ್ನು ಪ್ರತ್ಯಕ್ಷ ಕಂಡು ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿದ್ದರು.

ಮುಂದೆ ಪಡುಬಿದ್ರಿ ರಾಮರಾಯರೂ ಸೀತಾಬಾಯಿಯವರೂ ಅಲ್ಲಿ ಹೋದಾಗ ನಾಯಕ ಮಾಸ್ತರರು ಹರಿಜನರಿಂದಲೇ ಅಡಿಗೆ ಮಾಡಿಸಿ ಸಹಪಂಕ್ತಿ ಭೋಜನವನ್ನು ಆಗಿನ ಕಾಲಕ್ಕೆ ಮಾಡಿಸಿದ್ದರು. ಈ ಎಲ್ಲ ರೀತಿಯಾಗಿ ಹರಿಜನರ ಸೇವೆಮಾಡಿ, ಅದು ಪರಮಾತ್ಮನ ಪೂಜೆ ಎಂಬಷ್ಟು ಸಂತೃಪ್ತಿ ಹೊಂದುತ್ತಿದ್ದರು. ಅವರ ಈ ಕಾರ್ಯದಲ್ಲಿ ಮೊಗಟಾದ ವೆಂಕಟರಮಣ ನಾಯಕರು ನಾಯಕ ಮಾಸ್ತರರಿಗೆ ಎಲ್ಲ ಬಗೆಯ ಸಹಾಯ ಮತ್ತು ಸಹಕಾರ ನೀಡಿದ್ದರು. ಮೊಗಟಾದ ವೆಂಕಟರಮಣ ನಾಯಕರು ನಾಯಕ ಮಾಸ್ತರರ ನೆರಳಿನಂತೆ ಇದ್ದು ಅನೇಕಸಾರಿ ಜೈಲುಶಿಕ್ಷೆ ಅನುಭವಿಸಿದವರಿರುವರು. ಪೋಲೀಸರ ಲಾಠಿ ಪ್ರಹಾರದಿಂದ ಬೆನ್ನೆಲುವು ಮುರಿಸಿಕೊಂಡರೂ ಮತ್ತೆ ಮತ್ತೆ ಸತ್ಯಾಗ್ರಹ ನಡೆಸಿದವರು. ಮದುವೆಯಾಗಿ ಪ್ರಾಯದ ಹೆಂಡತಿ ಇದ್ದೂ ಬ್ರಹ್ಮಚರ್ಯ ಪಾಲಿಸಿದವರು. ಆಸ್ತಿವಂತರಾಗಿ ಇದ್ದೂ ತಮ್ಮ ಆಸ್ತಿಯನ್ನು ಹರಿಜನರಿಗೆ ದಾನಮಾಡಿದವರು. ನಾಯಕ ಮಾಸ್ತರರ ಸಂಪರ್ಕ ಬಂದ ಅನೇಕ ಕಡೆಗಳಲ್ಲಿ ಇಂಥ ಸತ್ಪುರುಷರು ವಿರಳ ವಾಗಿಯಾದರೂ ನಮ್ಮ ದೃಷ್ಟಿಗೆ ಕಾಣಸಿಗುತ್ತಾರೆ. ನಾಯಕ ಮಾಸ್ತರರು ಹರಿಜನಕೇರಿಯಲ್ಲಿ ಇರುವಾಗ 'ಗ್ರಾಮಸೇವಕ' ಎಂಬ ಪತ್ರಿಕೆಯನ್ನು ಹೊರಡಿಸು ತ್ತಿದ್ದರು. ಅಲ್ಲಿ ಒಂದು ಎಕರೆ ಹೊಲವನ್ನು ಪಡೆದು ಸಂಡಾಸದ ಹೊಸ ಪ್ರಯೋಗ ಮಾಡಿ, ಮಲವನ್ನು ಹೊಲಕ್ಕೆ ಗೊಬ್ಬರವನ್ನಾಗಿ ಬಳಸಲು ಸಂಡಾಸ ವನ್ನೇ ಸ್ಥಳಾಂತರಿಸುವ ಹಾಗು ಅಲ್ಲಲ್ಲಿ ತಗ್ಗು ತೋಡಿ ಮಲವಿಸರ್ಜನೆಯಾದ ಮೇಲೆ ಮಣ್ಣು ಮುಚ್ಚುವ ವಿಧಾನದಿಂದ ಹೆಚ್ಚುವರಿ ಬೆಳೆತೆಗೆಯುವ ಪ್ರಯೋಗ ಮಾಡಿತೋರಿಸಿದರು. ಈ ರೀತಿಯಾಗಿ ಹರಿಜನಕೇರಿಯಲ್ಲಿ ಅವರ ತಪಸ್ಸು ನಡೆದಿತ್ತು.

ನಾಯಕ ಮಾಸ್ತರರು ೧೯೪೪ರಲ್ಲಿ ಅಂಕೋಲೆಯಲ್ಲಿ ಗ್ರಾಮಸೇವಾ ಸಮಿತಿಯನ್ನು ಸ್ಥಾಪನೆ ಮಾಡಿ, ನೂಲುವದು, ನೇಯುವದು, ಬಡಿಗತನ ಚಮ್ಮಾರಿಕೆ ಮುಂತಾದ ಗ್ರಾಮೋದ್ಯೋಗಗಳ ತರಬೇತಿ ವ್ಯವಸ್ಥೆ ಮಾಡಿದರು. ಜನಸಂಪರ್ಕವನ್ನು ಹೊಂದದೆ ನಿರುದ್ಯೋಗದಲ್ಲಿದ್ದ ಬಡ ಮುಸಲ್ಮಾನ ಹೆಣ್ಣುಮಕ್ಕಳು, ಅಕ್ಕಸಾಲಿಗರ ಹೆಣ್ಣುಮಕ್ಕಳು, ಇತರ ಬಡಜನರಿಗೆ ನೂಲುವ, ನೇಯುವ ಶಿಕ್ಷಣ ಕೊಡಿಸಿ, ಉದ್ಯೋಗಕ್ಕೆ ಅವಕಾಶಮಾಡಿಕೊಟ್ಟರು. ಮನೆಯಲ್ಲೇ ಕೂತು ಜೀವನಕ್ಕೆ ಸಂಪಾದನೆ ಮಾಡುವ ಗೃಹೋದ್ಯೋಗವನ್ನು ಕಲ್ಪಿಸಿಕೊಟ್ಟರು. ಅವರ ಸ್ಥಾಪಿಸಿದ ಅಂಕೋಲೆಯ ಗ್ರಾಮಸೇವಾ ಸಮಿತಿಯು ಇಂದು ಬೆಳೆದು ಜಿಲ್ಲೆಯ ತುಂಬ ಶಾಖೋಪಶಾಖೆಗಳಾಗಿ ಹಬ್ಬಿ ಸಾವಿರಾರು ಜನರಿಗೆ ಉದ್ಯೋಗ ದೊರಕಿಸಿ ಕೊಟ್ಟಿರುತ್ತದೆ.

೧೯೪೮ರಿಂದ ಸರಕಾರವು ಅಂಕೋಲೆಯಲ್ಲಿ ಸರ್ವೋದಯ ಯೋಜನೆಯನ್ನು ಮಂಜೂರು ಮಾಡಿತು. ನಾಯಕ ಮಾಸ್ತರರು ಸರ್ವೋದಯ ಕಮಿಟಿಯ ಮೆಂಬರರಿದ್ದರು. ಸರ್ವೋದಯ ಕಾರ್ಯವು ಅಂಕೋಲೆಯ ನಾಲ್ವತ್ತು ಹಳ್ಳಿಗಳನ್ನು ಒಳಗೊಂಡಿತ್ತು. ಹೊದಿಕೆ ಮಾಸ್ತರರು ಸರ್ವೋದಯ ಸಂಚಾಲಕರೆಂದು ನೇಮಿಸಲ್ಪಟ್ಟರು. ಸರ್ವೋದಯ ಸಮಾಜ ರಚನೆಯಾಗಬೇಕೆಂದೂ, ಸ್ವಾವಲಂಬೀ ಸಮಾಜ ರಚನೆಯಾಗಬೇಕೆಂದೂ ನಾಯಕ ಮಾಸ್ತರರು ಮನಸಾ ಹಂಬಲಿಸುವವರು. ಅದಕ್ಕಾಗಿ ಅವರು ಹಳ್ಳಿಹಳ್ಳಿ, ಮನೆಮನೆಗಳಿಗೆ ಪಾದಚಾರಿಗಳಾಗಿ ಅಡ್ಡಾಡಿ, ಸರ್ವೋದಯ ಸಮಾಜರಚನೆಯ ಬಗ್ಗೆ ಜನರಿಗೆ ಬೋಧಿಸುತ್ತಿದ್ದರು. ಅವರ ಬೋಧನೆಯು ಅಂತಃಕರಣದ ಆಳದಿಂದ, ಅತ್ಯಂತ ಕಳಕಳಿಯಿಂದ ಹೊರ ಬರುತ್ತಿತ್ತು. ಈ ಬಗ್ಗೆ ಅವರು ಸತತವಾಗಿ ಐದು ವರ್ಷ ದುಡಿದಿದ್ದಾರೆ. ತಮ್ಮ ಶಾರೀರಿಕ ಶ್ರಮವನ್ನು ಕಷ್ಟವನ್ನೂ ಸಹಿಸಿ, ತಪಸ್ವಿಯಂತೆ ದೇಹಸವೆಯಿಸಿದ್ದಾರೆ. ಆಮೇಲೆ ಭೂದಾನ ಚಳವಳಿಯಲ್ಲಿ ಪಾದಯಾತ್ರೆಕೈಗೊಂಡು ಭೂದಾನ, ಸರ್ವೋದಯ ಪಾತ್ರೆ ಈ ಬಗ್ಗೆ ತುಂಬಾ ತನ್ಮಯತೆಯಿಂದ ದುಡಿದಿದ್ದಾರೆ. ಆ ಬಗ್ಗೆ ಅನೇಕ ಲೇಖನಗಳನ್ನು ಬರೆದಿದ್ದಾರೆ.

ಮುಂದೆ ಅವರ ಶರೀರ ದುರ್ಬಲವಾಗಹತ್ತಿತು. ಆರೋಗ್ಯವು ಆಗಾಗ ಕೆಡುತ್ತಲೇ ಇತ್ತು. ಮೂಲವ್ಯಾಧಿ ಅಂಟಿಕೊಂಡಿತು. ಅಂಥದರಲ್ಲಿಯೂ ಅವರು ಜನತಾ ಜನಾರ್ದನನ ಸೇವೆ ಬಿಡಲಿಲ್ಲ.

ಕುಮಟಾ ತಾಲೂಕಿನ ಮಾದನಗೇರಿ ಎಂಬುದು ಒಂದು ಹಳ್ಳಿ. ಆ ಹಳ್ಳಿಯಲ್ಲಿ ಹರಿಜನರೇ ಹೆಚ್ಚಾಗಿ ಇರುವ ಕೇರಿಗೆ ಹೊಂದಿ ನಾಯಕ ಮಾಸ್ತರರು ಒಂದು ಆಶ್ರಮ ಮಾಡಿಕೊಂಡು ಉಳಿದರು. ಮತ್ತು ಬಡಜನರ ಸೇವೆ

ಕೈಗೊಂಡರು. ಅಲ್ಲಿ ಅವರು ಅಮರಾವತಿ ಪೈ ಎಂಬ ದಾಯಿಯನ್ನೂ ಮತ್ತೆ ಒಬ್ಬಿಬ್ಬರು ಆಶ್ರಮ ವಾಸಿಗಳನ್ನೂ ಜೊತೆಗೆ ಇಟ್ಟುಕೊಂಡು ಹರಿಜನರಿಗೆ ನಿಸರ್ಗ ಚಿಕಿತ್ಸೆ, ಔಷಧೋಪಚಾರ, ಹೆರಿಗೆ ಕೆಲಸ ಮುಂತಾದವುಗಳನ್ನು ಮಾಡುತ್ತಿದ್ದರಲ್ಲದೆ ಆರೋಗ್ಯಪಾಲನೆಯ ನಿಯಮ, ಕುಡಿತದ ದುಷ್ಪರಿಣಾಮ ಮುಂತಾದವುಗಳ ಬಗ್ಗೆ ತಿಳಿಸಿ ಹೇಳುತ್ತಿದ್ದರು.

ಆಶ್ರಮದಲ್ಲಿ ನೂಲುವದು, ಪ್ರಾರ್ಥನೆ, ಅಧ್ಯಾಪನ ಇವು ನಡೆದೇ ಇರುತ್ತಿದ್ದವು. ಚಿಕ್ಕ ಬಾಲವಾಡಿಯನ್ನು ನಡೆಸುತ್ತಿದ್ದರು. ಐದಾರು ಆಕಳುಗಳನ್ನಿಟ್ಟುಕೊಂಡು ಗೋಸೇವೆ ಮಾಡುತ್ತಿದ್ದರು. ಅಲ್ಲಿ ಸ್ವಲ್ಪ ಹೊಲ, ಸ್ವಲ್ಪ ತೆಂಗಿನ ತೋಟಗಳನ್ನು ಗೇಣಿಗೆ ಪಡಕೊಂಡು ಅದರಲ್ಲಿ ಒಕ್ಕಲತನ, ಕಾಯಿಪಲ್ಲೆ ಬೆಳೆದು, ತೆಂಗಿಗೆ ನೀರುಹಾಕಿ ಫಲಪಡೆದು, ಒಡೆಯನ ಗೇಣಿಕೊಟ್ಟು, ಬೆಳೆದ ಧಾನ್ಯ, ಕಾಯಿಪಲ್ಲೆ ಮುಂತಾದವುಗಳನ್ನು ಮಾರಿ ಬಂದ ಹಣವನ್ನು ಹರಿಜನರಿಗೆ ಸೇವೆಗೆ ವಿನಿಯೋಗಿಸುತ್ತಿದ್ದರು. ತಾವು ಉಪಯೋಗಿಸುವ ಧಾನ್ಯ, ಕಾಯಿಪಲ್ಲೆಗಳಿಗೆ ಬೆಲೆ ಗೊತ್ತು ಮಾಡಿ ಲೆಕ್ಕ ಇಟ್ಟು ಉಪಯೋಗಿಸುತ್ತಿದ್ದರು. ಅಲ್ಲಿ ಅವರು ಆಶ್ರಮ ಪದ್ಧತಿಯಿಂದ ಕೆಲವು ಮದುವೆ ಮಾಡಿಸಿದರು. ಅಲ್ಲಿಂದಲೇ 'ಭೂದಾನ' ಪತ್ರಿಕೆಗೆ ಲೇಖನ ಬರೆಯುತ್ತಿದ್ದರು.

ಅವರು ಮಾದನಗೇರಿಯಲ್ಲಿ ಇರುವಾಗಲೇ, ನಮ್ಮ ರಾಜ್ಯ ಸರಕಾರವು ಮದ್ಯಪಾನ ಪ್ರತಿಬಂಧವನ್ನು ಸಡಲಿಸುವ ಕಾಯಿದೆ ತಂದಿತು. ಈ ಕಾಯಿದೆಯಿಂದ ಮನನೊಂದ ನಾಯಕ ಮಾಸ್ತರರು ಹದಿನಾಲ್ಕು ದಿನಗಳ ಉಪವಾಸ ಕೈಗೊಂಡರು. ಈ ಉಪವಾಸದ ಆರಂಭದಲ್ಲಿ ಅವರು ಸಾರ್ವಜನಿಕರ ಮುಂದೆ ಭೂದಾನ ಪತ್ರಿಕೆಯ ಮೂಲಕ ಈ ಮುಂದಿನಂತೆ ತಮ್ಮ ಆತ್ಮನಿವೇದನೆಯನ್ನು ಮಾಡಿಕೊಂಡರು.

### "ನಮ್ರ ಆತ್ಮನಿವೇದನೆ"

ಮೈಸೂರು ರಾಜ್ಯದಲ್ಲಿ ಮದ್ಯ ಪ್ರತಿಬಂಧವನ್ನು ಶಿಥಿಲಗೊಳಿಸುವ ಕುರಿತು ರಾಜ್ಯದ ಮಂತ್ರಿಮಂಡಲವು ಅನುಮೋದಿಸಿರುವ ಯೋಜನೆಯನ್ನು ಓದಿ ನನ್ನ ಅಂತಃಕರಣಕ್ಕೆ ಆಘಾತವಾಯಿತು. ಈಗ ಘೋಷಿಸಲಾದದ್ದು, ಯೋಜನೆಯ ಮೊದಲನೆಯ ಹಂತ ಮಾತ್ರ. ಎರಡನೆಯ ಹಂತವೂ ಬೇಗ ಸಿದ್ಧವಾಗಲಿದೆ. ನನ್ನ ಮೇಲಾದ ಈ ಆಘಾತವು ದಿನೇದಿನೇ ಪ್ರಬಲವಾಗುತ್ತಿದೆ. ಸರಕಾರದ ಈ ಯೋಜನೆಯು ಮದ್ಯಪ್ರತಿಬಂಧದ ಸಮಾಪ್ತಿಗೆ ನಾಂದಿಯಾಗಿದೆ. ರಾಷ್ಟ್ರಪಿತನ ನೆಚ್ಚಿನ ಆದರ್ಶಗಳಿಗೆ ತಿಲಾಂಜಲಿಯನ್ನೀಯುವ ಯೋಜನೆಯಾಗಿದೆ. ನಮ್ಮ

ಮಾತೃಭೂಮಿಯ ಪವಿತ್ರ ಸಂಸ್ಕೃತಿಗೇ ಸುರಂಗ ಹಾಕುವಂತಿದೆ. ಗಾಂಧೀಯವರ ತತ್ವಗಳನ್ನು ಈ ರೀತಿ ಕಾಲಕೆಳಗೆ ತುಳಿಯುತ್ತಿರುವಾಗ ನಾನು, ನಿಷ್ಕ್ರಿಯನಾಗಿ ಕುಳಿತುಕೊಂಡರೆ, ನಾನು ಆ ರಾಷ್ಟ್ರಪಿತನಿಗೆ ದ್ರೋಹ ಬಗೆದ ಪಾಪಕ್ಕೆ ಗುರಿಯಾಗುವೆನು.

ರಾಜ್ಯದ ಮಾನ್ಯ ಅರ್ಥ ಮಂತ್ರಿಯವರು, ಈ ವ್ಯಸನದ ವ್ಯಾಪಾರವನ್ನು ಪ್ರಚಾರಗೊಳಿಸಲು ಶಕ್ಯವಿದ್ದ ಎಲ್ಲ ಸೌಕರ್ಯಗಳನ್ನು ಯೋಜನೆಯಲ್ಲಿ ಒದಗಿಸಿದ್ದಾರೆ. ನಮ್ಮ ಮೇಲೆ ಆಳಿಕೆ ನಡಿಸುತ್ತಿದ್ದ ಪರಕೀಯ ರಾಜಸತ್ತೆಯು ಈ ಮದ್ಯ ವ್ಯಾಪಾರ ದಿಂದ ಹಣ ಗಳಿಸುತ್ತಿತ್ತೆಂಬುದು ನಿಜ. ಆದರೆ ಈಗ, ನಮ್ಮ ರಾಜ್ಯದ ಲೋಕ ನಿಯುಕ್ತ ಮಂತ್ರಿ ಮಂಡಲವೇ, ಮದ್ಯಪಾನಕ್ಕಾಗಿ ಪರಮೀಟುಗಳನ್ನು ಮಾರಲು ಯೋಜಿಸಿದೆ, ಹೌದು "ಆರೋಗ್ಯದ ಕಾರಣಗಳಿಂದಾಗಿ." ಇದೆಲ್ಲದರ ಅರ್ಥವೇನು ? ಪಾಶ್ಚಾತ್ಯ ದೇಶಗಳಲ್ಲಿ ಕುಡಿಯುವುದು ಒಂದು ಶಿಷ್ಟ ಸಂಪ್ರದಾಯ; ನಮ್ಮ ದೇಶದಲ್ಲಿ ಹೀಗೆಂದೂ ಇದ್ದಿಲ್ಲ! ಅತ್ಯಂತ ವ್ಯಸನಾಧೀನನೂ ಸಹ, ಶೆರೆ ಅಂಗಡಿಗೆ ಹೋಗುವಾಗ, ಅಂತಃಕರಣದಲ್ಲಿ ತಾನು ಏನೋ ಪಾಪ ಮಾಡುತ್ತಿರುವೆ, ಎಂಬ ಭಾವನೆಯನ್ನು ಕಳಕೊಂಡಿದ್ದಿಲ್ಲ. ಆದರೆ, ಈಗ ನಮ್ಮ ಮಂತ್ರಿ ಮಂಡಳವು ತನ್ನ ಈ ಮದ್ಯಪ್ರಸಾರದ ಯೋಜನೆಯಿಂದ, ಈ ದುರ್ವ್ಯಸನಕ್ಕೆ ಶಿಷ್ಟ ಸಂಪ್ರದಾಯದ ಪ್ರಮಾಣ ಮುದ್ರೆಯನ್ನೊತ್ತುತ್ತಿದೆ. ಇದರಿಂದ ಮದ್ಯ ಪ್ರತಿಬಂಧ ಯೋಜನೆಯ ಬುಡಕ್ಕೇ ಸುರಂಗ ಹಾಕಿದಂತಿದೆ !

ಈ ಯೋಜನೆಯಿಂದ ಅಬಕಾರಿ ಉತ್ಪನ್ನದಲ್ಲಿ ಒಂದು ಕೋಟಿ ರೂಪಾಯಿ ಹೆಚ್ಚಿಗೆ ಉತ್ಪನ್ನ ಬರುವದೆಂದು ಮಾನ್ಯ ಅರ್ಥ ಮಂತ್ರಿಗಳು ಲೆಕ್ಕಹಾಕಿರುವರು. ಆದರೆ, ಸಾವಿರಾರು ಕುಟುಂಬಗಳನ್ನು ನೈತಿಕ ಮತ್ತು ಆರ್ಥಿಕ ಅಧೋಗತಿಗೆ ಗುರಿ ಮಾಡಿ ಕೌಟುಂಬಿಕ ಪಾವಿತ್ರ್ಯವನ್ನು ಕೆಡಿಸಿ, ಈ ಉತ್ಪನ್ನ ಗಳಿಸಲಾಗುತ್ತದೆಂಬ ಸಂಗತಿಯು ಮಂತ್ರಿವರ್ಯರ ಲಕ್ಷಕ್ಕೆ ಬರದಿರುವದು ಶೋಚನೀಯ. ಮದ್ಯ ಪ್ರತಿ ಬಂಧವು ರಾಜ್ಯದ ಲಕ್ಷಾವಧಿ ಬಡವರ್ಗದವರಿಗೆ – ಒಂದು ವರದಾನವಾಗಿತ್ತು. ಅವರ ಕಂಗೆಟ್ಟ ಸ್ಥಿತಿಯಲ್ಲಿ ಒಂದು ಆಶಾಕಿರಣವಾಗಿತ್ತು. ಅದರೆ, ಅದೆಲ್ಲವೂ ಈಗ ಬದಲಾಗುವದು. ಯಾಕೆಂದರೆ, ಈಗ ರೂಪಿಸಿದ ಯೋಜನೆಯು ಮದ್ಯಪ್ರಸಾರದ ಚಂಚು ಪ್ರವೇಶ ಮಾತ್ರ.

ಈ ಅನರ್ಥವನ್ನು ತಡೆಗಟ್ಟುವಲ್ಲಿ ನನ್ನ ನಮ್ರ ಶಕ್ತಿಯಿಂದ ನನ್ನ ಕೈಲಾದ ಯತ್ನವನ್ನು ಕೈಕೊಳ್ಳದೆ ನನ್ನ ಮನಸ್ಸಿಗೆ ಶಾಂತಿ ಇಲ್ಲದಾಗಿದೆ. ಇದಕ್ಕೆ ಪರಿಣಾಮ ಕಾರೀ ಪ್ರತೀಕಾರ ಮಾಡದಿದ್ದರೆ, ಇದು ನಮ್ಮ ಪವಿತ್ರ ಆದರ್ಶಗಳಿಗೆ ಘಾತಕವಾಗಿ ಪರಿಣಮಿಸುದು, ಅನೇಕ ಮನೆತನಗಳ ನೈತಿಕ ಮತ್ತು ಆರ್ಥಿಕ ಅಧಃಪತನಕ್ಕೆ ಕಾರಣವಾಗುವದು.

ಆದರೆ, ನನ್ನಂಥ ದುರ್ಬಲ ಮನುಷ್ಯನಿಗೆ ಏನು ಶಕ್ಯ ? ಶಕ್ಯವಿದ್ದ ಒಂದೇ ಉಪಾಯವೆಂದರೆ, ಸರ್ವರ ಹೃದಯದಲ್ಲೂ ವಾಸಿಸಿರುವ ಆ ದಯಾಮಯ ಸತ್ಯಂ ಶಿವಂ ಆಗಿರುವ ಪರಮಾತ್ಮನಿಗೆ ಶರಣು ಹೋಗುವದು. ಅವನನ್ನು ಪ್ರಾರ್ಥಿಸುವದು. ಪ್ರಾರ್ಥನೆಯಾದರೋ ಅಂತಃಕರಣದ ಆಳದಿಂದ ಹೊರಹೊಮ್ಮುವದಾದರೆ ಪ್ರಾರ್ಥನೆಗೆ ಆತ್ಮ ಶುದ್ಧಿಯು ಅವಶ್ಯ. ಈ ದೃಷ್ಟಿಯಿಂದ ಇಂದು ಮಧ್ಯಾಹ್ನ ೧೨ ಘಂಟೆಯಿಂದ ನಾನು ೧೪ ದಿನ ಅವಧಿಯ ಉಪವಾಸ ವ್ರತವನ್ನು ಕೈಕೊಳ್ಳುವ ಸಂಕಲ್ಪ ಮಾಡಿರುವೆ. ಉಪವಾಸದ ಅವಧಿಯಲ್ಲಿ ನಾನು ನೀರನ್ನು ಮಾತ್ರ ತೆಗೆದುಕೊಳ್ಳುವೆ.

ನನ್ನ ಮಿತ್ರ ಬಾಂಧವರಲ್ಲಿ ನನ್ನ ನಮ್ರ ಬೇಡಿಕೆಯಿಷ್ಟೇ. ನಾನು ಈ ವ್ರತವನ್ನು ಸ್ವಲ್ಪವೂ ಚಲಿಸದೆ, ಚಂಚಲನಾಗದೆ, ಪೂರ್ತಿಗೊಳಿಸುವಂತೆ ನೈತಿಕ ಸಾಮರ್ಥ್ಯವನ್ನು ದೇವರು ನನಗೆ ದಯಪಾಲಿಸಲೆಂದು ಅವರು ಆ ದಯಾಘನನಲ್ಲಿ ಪ್ರಾರ್ಥಿಸಲಿ.

ಇತ್ತೀಚಿಗೆ ಕೆಲವರ್ಷಗಳಿಂದ ನನ್ನ ಪ್ರಕೃತಿ ನೆಟ್ಟಗಿರುವದಿಲ್ಲ ! ಆದರೆ, ನಮ್ಮೆಲ್ಲರ ಹೃದಯದಲ್ಲಿದ್ದು ನಮಗೆ ಪ್ರೇರಣೆ ನೀಡುವ ಆ ದಯಾನಿಧಿ ಪರಮಾತ್ಮನಲ್ಲಿ ಶ್ರದ್ಧೆ ಇಟ್ಟು, ಆ ಶ್ರದ್ಧೆಯ ಬಲದಿಂದಲೇ, ಈ ಸಾಹಸವನ್ನು ಕೈಕೊಂಡಿರುವೆನು. ಈ ಉಪವಾಸದ ಅವಧಿಯಲ್ಲಿ ಏನಾದರೂ ಅಸ್ವಾಸ್ಥ್ಯವಾದರೆ, ನಾನು ಕೇವಲ ರಾಮನಾಮುವನ್ನು ಮತ್ತು ನಿಸರ್ಗೋಪಚಾರವನ್ನು ಆಶ್ರಯಿಸುವೆ. ಬೇರೆ ಯಾವ ಉಪಾಯವನ್ನೂ ಕೈಕೊಳ್ಳಲಿಕ್ಕಿಲ್ಲ !

ದೇವರು ಅನುಗ್ರಹಿಸಿದರೆ–ಅವನು ಅನುಗ್ರಹಿಸುವನೆಂಬ ಶ್ರದ್ಧೆ ನನಗೆ ಇದೆ– ಈ ಉಪವಾಸ ವ್ರತವು ತಾ॥ ೨೭ ಮಧ್ಯಾಹ್ನ ೧೨ ಘಂಟೆಗೆ ಕೊನೆಗೊಳ್ಳುವದು !

ಪರಮಾತ್ಮನನ್ನು ನಮ್ರವಾಗಿ ಪ್ರಾರ್ಥಿಸಿ ಈ ಆತ್ಮನಿವೇದನೆಯನ್ನು ಇಲ್ಲಿಗೆ ಮುಗಿಸುತ್ತೇನೆ.

ಗ್ರಾಮಸೇವಾ ಕೇಂದ್ರ
ಮಾದನಗೇರಿ. ಉ. ಕ.
ತಾ॥ ೧೩–೧೧–೬೫.

ತಿಮ್ಮಪ್ಪನಾಯಕ

ಈ ಮೇಲಿನ ಅವರ ಆತ್ಮನಿವೇದನೆಯನ್ನು ಓದಿದರೆ ನಾಯಕ ಮಾಸ್ತರರ ವ್ಯಕ್ತಿತ್ವ, ಬಡಜನರ ಬಗ್ಗೆ ಅವರಿಗೆ ಇರುವ ಮರುಕ, ಅವರ ಅಂತರಾತ್ಮದ ಕೊರಗು ಈ ಎಲ್ಲ ವಿಚಾರವು ತಿಳಿಯುವಂತೆ ಇದೆ. ನಾಯಕ ಮಾಸ್ತರರು ತಮ್ಮ ನಿರ್ಧಾರ ದಂತೆ ಹದಿನಾಲ್ಕು ದಿನಗಳ ಉಪವಾಸವನ್ನು ಮಾಡಿ ಮುಗಿಸಿದರು. ಅವರ ಉಪವಾಸ ಪಾರಣೆಯ ದಿನ ಬೇರೆ ಬೇರೆ ಭಾಗದ ಸರ್ವೋದಯ ಕಾರ್ಯಕರ್ತರೂ, ಸ್ನೇಹಿತರೂ, ಹಳ್ಳಿಗಳ ಜನರೂ ಹಾಜರಿದ್ದರು. ಉಪವಾಸದುದ್ದಕ್ಕೂ ಪ್ರಾರ್ಥನೆ, ಭಜನೆಗಳು ನಡೆದಿದ್ದವು.

ನಾಯಕ ಮಾಸ್ತರರ ದೇಹಸ್ಥಿತಿ ಕೆಡುತ್ತಲೇ ಇತ್ತು. ಮಾದನಗೇರಿ ಆಶ್ರಮ ವನ್ನು ತೆರವು ಮಾಡಿ, ಅಂಕೋಲೆಯ ಗ್ರಾಮಸೇವಾ ಸಮಿತಿಯಲ್ಲಿ ಬಂದು ಉಳಿಯುವ ಸಂಕಲ್ಪ ಮಾಡಿದರು. ಆದರೆ, ಅದೇ ಹೊತ್ತಿಗೆ ಅಮರಾವತಿ ಪೈ ಅವರು ವಿಪರೀತ ಕಾಯಿಲೆ ಬಿದ್ದರು. ಅವರ ಉಪಚಾರಕ್ಕೆ ಅವರ ಸಂಬಂಧಿಕರಾರೂ ಬಂದು ಮುಟ್ಟಲಿಲ್ಲ. ಆದಕಾರಣ ಅವರು ತಮ್ಮ ಅಶಕ್ತತೆಯಲ್ಲಿಯೇ ಆಕೆಯ ಸೇವೆ, ಶುಶ್ರೂಷೆಮಾಡುತ್ತ ಉಳಿದರು.



ಈ ರೀತಿ ಆಶ್ರಮ ಜೀವನ ನಡಿಸಿ, ೧೯೭೧ನೆಯ ಇಸವಿಯಲ್ಲಿ ಅಂಕೋಲಾ ಗ್ರಾಮಸೇವಾ ಸಮಿತಿಯಲ್ಲಿ ಬಂದು ನೆಲಸಿದರು. ನಾಯಕ ಮಾಸ್ತರರ ಕೊನೆಯ ಯೋಜನೆಯು ಆಶ್ರಮವು ಉತ್ತರ ಕನ್ನಡ ಜಿಲ್ಲೆಯ ಮುಂಡಗೋಡ ತಾಲ್ಲೂಕಿನ ಕುಸೂರ ಎಂಬ ಹಳ್ಳಿಯಲ್ಲಿ ಸದ್ಯ ಆರಂಭವಾದ, "ಗೋವಿಂದ ಧಾಮ" ಎಂಬ ಆಶ್ರಮವಾಗಿರುತ್ತದೆ. ಈ ಆಶ್ರಮವನ್ನು ಮೀರಾತಾಯಿ ಹಾಗು ಸ್ವಾಮಿ ಸೇವಾನಂದರು ನೋಡಿಕೊಳ್ಳುತ್ತಿರುವರು. ಸ್ವಾಮಿಜಿ ಈ ಹಿಂದೆ ಬೆಂಗಳೂರಿನಲ್ಲಿ ಆಶ್ರಮವನ್ನು ನಡೆಸುತ್ತಿದ್ದರು. ಆದರೆ ಇಂಥ ಆಶ್ರಮಗಳು ಹಳ್ಳಿಗಳಲ್ಲಿ ಹೆಚ್ಚು ಉಪಯುಕ್ತವಾಗುವವೆಂಬ ಉದ್ದೇಶದಿಂದ ಈ ಆಶ್ರಮವು ಇಲ್ಲಿ ಸ್ಥಾಪನೆಯಾಗಿರು ತ್ತದೆ. ದಿ॥ ನಾಯಕ ಮಾಸ್ತರರು ಈ ಆಶ್ರಮಕ್ಕೆ ಕಟ್ಟಡ ವೊದಲಾದ ಅನುಕೂಲತೆ ಗಳನ್ನು ಒದಗಿಸಿಕೊಡಬೇಕೆಂಬ ತಮ್ಮ ಅಪೇಕ್ಷೆಯನ್ನು ತಮ್ಮ ಸ್ನೇಹಿತರಾದ ಶ್ರೀ ಹರಿ ಪೈ ಅವರಿಗೆ ಹೇಳಿ ಹೋದ ಪ್ರಕಾರ ಕೆಲಸ ಮುಂದರಿಸಿರುತ್ತಾರೆ.

ನಾಯಕ ಮಾಸ್ತರರು ತಮ್ಮ ಸುದೀರ್ಘವಾದ ಸಾಮಾಜಿಕ ರಾಜಕೀಯ ಧಾರ್ಮಿಕ ಅಧ್ಯಾತ್ಮಿಕ ಗ್ರಂಥಗಳ ಅಧ್ಯಯನ, ಮನನ, ಚಿಂತನಗಳ ಆಳವಾದ ಅನುಭವಗಳಿಂದಲೂ, ಅನೇಕ ಮಹಾತ್ಮರುಗಳ, ತತ್ವೋಪದೇಶಕರ, ಸನ್ಮಾರ್ಗ ಬೋಧನೆಗಳನ್ನು ತಮ್ಮ ಜೀವನದುದ್ದಕ್ಕೂ ಆಚರಣೆಯಲ್ಲಿ ತರಲು, ಸಾಧನೆ ನಡೆಸಿ ಪರಿಪಕ್ವವಾದ ತಮ್ಮ ಸ್ವಂತ ಅನುಭವಗಳಿಂದಲೂ ರಚಿಸಿದ ಈ ಕೆಳಗೆ ಹೆಸರಿಸಿದ ಗ್ರಂಥಗಳು ಅವರು ಜನತೆಗೆ ಕೊಟ್ಟ ಅಮೂಲ್ಯ ಕೊಡುಗೆಗಳಾಗಿರುವವು :

೧) ಮದ್ಯಪಾನ ಪ್ರತಿಬಂಧ .... ೧೯೬೫ರಲ್ಲಿ ಬರೆದದ್ದು
೨) ಭಾರತ ನವನಿರ್ಮಾಣ ಗಾಂಧೀಜಿ .... ೧೯೬೭ ಜನವರಿ ೩೦
೩) ಗಾಂಧೀಜಿಯವರ ಆಧ್ಯಾತ್ಮಿಕ ಜೀವನ .... ೧೯೬೭ ಅಕ್ಟೋಬರ ೨
೪) ಧರ್ಮ ಸಮನ್ವಯ ದರ್ಶನ (ಅನುಭಾವಿಗಳ ಅನುಭವಾಮೃತ) .... ೧೯೭೨ ಅಗಸ್ಟ ೧೫
೫) ಶಿವಶರಣರ ಸಾಧನಾಪಥ .... ೧೯೭೪ ಅಕ್ಟೋಬರ ೨

ನಾಯಕ ಮಾಸ್ತರರ ಜೀವನವೂ ಸಾಧಕ ಜೀವನವಾಗಿತ್ತು. ಸಾರ್ಥಕ ಜೀವನವಾಗಿತ್ತು. ಆದರ್ಶ ಜೀವನವಾಗಿತ್ತು. ನಾಯಕ ಮಾಸ್ತರರು ರಾಷ್ಟ್ರದ ಆಪತ್ತನ್ನು ಜನತೆಯ ಸಂಕಷ್ಟವನ್ನು ತನ್ನದನ್ನಾಗಿ ಮಾಡಿಕೊಂಡವರು. ಅವುಗಳ ಪರಿಹಾರಕ್ಕಾಗಿ ತಮ್ಮ ಜೀವನವನ್ನು ಗಂಧದ ಕೊರಡಿನಂತೆ ತೇದು ಸವೆಯಿಸಿದರು. ಸ್ವದೇಶಿವ್ರತ ಆಚರಿಸಿದರು, ಖಾದಿ ಸೇವೆಗೈದರು, ಜೈಲುಶಿಕ್ಷೆ ಅನುಭವಿಸಿದರು. ಸಾಬರಮತಿ ಆಶ್ರಮ, ಕುಮರಿ ಆಶ್ರಮಗಳಲ್ಲಿ ಸೇರಿ ಆಶ್ರಮ ಜೀವನ ನಡೆಸಿದರು. ದೀನದಲಿತರೊಡನೆ ಒಂದಾಗಿ ಬಾಳಿ ಅವರ ಸೇವೆಗೈದರು. ಸರ್ವೋದಯ ಭೂದಾನ ಕಾರ್ಯಗಳನ್ನು ಗೈದರು. ಗ್ರಂಥ ರಚನೆ ಮಾಡಿದರು. ಆದರೆ ಈ ಎಲ್ಲ ಅವಧಿಗಳಲ್ಲಿಯೂ ಅವರು ಪಟ್ಟ ಕಷ್ಟ ಅಷ್ಟಿಷ್ಟಲ್ಲ. ಅವರ ಆರೋಗ್ಯವೂ ಎಂದೂ ಸರಿ ಇರುತ್ತಿರಲಿಲ್ಲ. ಯಾವಾಗಲೂ ವ್ಯಾಧಿ ಅವರ ದೇಹಕ್ಕೆ ಅಂಟಿ ಕೊಂಡಿರುತ್ತಿತ್ತು. ಅವರಿಗೆ ಹತ್ತಿದ ಮೂಲವ್ಯಾಧಿಯಿಂದಂತೂ ಅವರು ಬಹಳ ಕಷ್ಟಪಟ್ಟಿದ್ದಾರೆ. ಅದು ವಿಪರೀತಕ್ಕೆ ಮುಟ್ಟಿದ ಮೇಲೆ ಅಂಕೋಲೆಯ ಕ್ರಿಸ್ತ ಮಿತ್ರ ಆಶ್ರಮದ ಆಸ್ಪತ್ರೆಯಲ್ಲಿ ಡಾಕ್ಟರ ಮ್ಯಾಥ್ಯೂ ಅವರಿಂದ ಸ್ನೇಹಿತರ ಒತ್ತಾಯದಿಂದ ಶಸ್ತ್ರ ಚಿಕಿತ್ಸೆ ಮಾಡಿಸಿಕೊಂಡು ತಕ್ಕಮಟ್ಟಿಗೆ ಗುಣಹೊಂದಿದರು. ಗ್ರಂಥ ರಚನೆಯ ಕಾಲದಲ್ಲಿಯೂ ಅಷ್ಟೇ. ಈ ಎಲ್ಲ ದೈಹಿಕ ಕಷ್ಟಗಳನ್ನು ಅನುಭವಿಸುತ್ತಲೂ ಅವರು ತಮ್ಮ ನಿರ್ಧಾರದ ಕೆಲಸ ಕಾರ್ಯಗಳನ್ನು ತಪ್ಪದೇ ಮಾಡಿ ಮುಗಿಸುತ್ತಿದ್ದರು. ಮತ್ತು ತೃಪ್ತಿ ಹೊಂದುತ್ತಿದ್ದರು. ಇದು ಅವರ ಮಹಾತ್ಯಾಗ ಹಾಗೂ ಮಹಾಸಾಧನೆ. ನಾಯಕ ಮಾಸ್ತರರ ಖಾದಿ ಸೇವೆಯನ್ನು ನೆನೆದು, ಕರ್ನಾಟಕ ರಾಜ್ಯ ಖಾದಿ ಗ್ರಾಮೋದ್ಯೋಗ ಮಂಡಳಿಯು ಮಾಡಿದ ಸತ್ಕಾರದ ಕೊಡುಗೆಯನ್ನ ಮಂಡಳಿಯ ಅಧ್ಯಕ್ಷರಾದ ಎಸ್. ವಿ. ಮಂಜುನಾಥ ಅವರು, ನಾಯಕ ಮಾಸ್ತರರ ಮರಣದ ಕೆಲವೇ ತಿಂಗಳ ಮೊದಲು ಅಂಕೋಲೆಗೆ ಬಂದು (ಫಲ ಹಣ್ಣು-ಹೂಗಳೊಂದಿಗೆ ಗಾಂಧೀಜಿಯವರ ಪ್ರತ್ಥಳಿಯನ್ನು) ಅವರಿಗೆ ಒಪ್ಪಿಸಿದ್ದರು. ಆರಂಭದ ಅವಧಿಯಲ್ಲಿ ನಾಯಕ ಮಾಸ್ತರರಲ್ಲಿ ಒಂದೇ ಒಂದು ಮಾನಸಿಕ ದುರ್ಬಲತೆ ಕಂಡು ಬರುತ್ತಿತ್ತು. ಅನ್ಯಾಯ, ಕುಹಕತನ, ಕುಚೇಷ್ಟೆ ಅವರಿಗೆ ಸುತರಾಂ ಸೇರುತ್ತಿದ್ದಿಲ್ಲ. ಅವರ ಮುಂದೆ ಅಂಥದ್ದೇನಾದರೂ

ನಡೆದರೆ ಒಮ್ಮೊಮ್ಮೊಮ್ಮೆ ಕೋಪ ಬಂದು ಬಿಡುತ್ತಿತ್ತು. ಅವರೊಬ್ಬ ಶೀಘ್ರ ಕೋಪಿಗಳು ಎಂಬ ಭಾವನೆ ನಮಗೆಲ್ಲ ಉಂಟಾಗಿತ್ತು. ಅದಕ್ಕಾಗಿ ನಾವು ಘರ್ಷಣೆ ಮಾಡಿಕೊಂಡದ್ದೂ ಉಂಟು. ಆದರೆ ಕಾಲಕ್ರಮೇಣ ಅವರ ಹೃದಯದ ಅರಿವು ನಮಗಾಯಿತು. ಅವರ ಶೀಘ್ರ ಕೋಪಕ್ಕೆ ಅವರು ತಮ್ಮ ದೇಹವನ್ನೇ ದಂಡಿಸಿ ಕೊಳ್ಳುತ್ತಿದ್ದರು. ಪಶ್ಚಾತ್ತಾಪ ಪಡುತ್ತಿದ್ದರು. ಮರುಕ್ಷಣದಲ್ಲಿ ತಪ್ಪು ಮಾಡಿದವರ ಬಗ್ಗೆ ಕನಿಕರ ಪಡುತ್ತಿದ್ದರು. ಬುದ್ಧಿ ಹೇಳುತ್ತಿದ್ದರು. ಚಿಕ್ಕ ಮಕ್ಕಳನ್ನೂ ಅಸಹಾಯಕರನ್ನೂ ಹೆಂಗಸರನ್ನೂ ಕಂಡರೆ ಅವರಿಗೆ ಎಲ್ಲಿಲ್ಲದ ಕರುಣೆ, ವಾತ್ಸಲ್ಯ. ಅವರ ಈ ಸದ್ವರ್ತನೆ ಸದಾಚಾರಗಳ ಮೂಲಕ ಅವರ ಸಾಮೀಪ್ಯಕ್ಕೆ ಬಂದ ಎಲ್ಲರಿಗೆ ಅವರ ಬಗ್ಗೆ ಪೂಜ್ಯ ಭಾವನೆ ಉಂಟಾಗಪತ್ತಿತು.

ನಾಯಕ ಮಾಸ್ತರರು "ನನಗಿಂತ ಕಿರಿಯರಿಲ್ಲ ಶಿವಶರಣರಿಗಿಂತ ಹಿರಿಯರಿಲ್ಲ" ಎಂಬ ಬಸವಣ್ಣನವರ ಉಕ್ತಿಯಂತೆ ವಿನಮ್ರಭಾವ ಹೊಂದಿದವರಾಗಿದ್ದರು. ಅವರು ಬರೆದ ಕೊನೆಯ ಗ್ರಂಥ "ಶಿವಶರಣರ ಸಾಧನಾಪಥ" ಎಂಬ ಪುಸ್ತಕದ ಪ್ರಸ್ತಾವನೆಯಲ್ಲಿ ಅವರು, ತಮ್ಮ ಸಹಚರರಾಗಿ ದೀರ್ಘಕಾಲ ದುಡಿದಂಥ ಶ್ರೀರಾಮಚಂದ್ರ ಲಕ್ಷ್ಮೀನಾರಾಯಣ ಭಟ್ಟ ಅವರನ್ನು ಕುರಿತು ಬರೆದ ಮಾತುಗಳು ಅವರ ವಿನಮ್ರಭಾವನೆಗೆ ಒಂದು ಉದಾಹರಣೆಯಾಗಿವೆ. ಅವರು ಬರೆದದ್ದು: "ಅಸಹಕಾರಯುಗದಿಂದಲೂ ನನ್ನ ಸಹಕಾರಿಗಳಾಗಿ ಬಂದು ಶ್ರೀ ರಾಮಚಂದ್ರ ಲಕ್ಷ್ಮೀನಾರಾಯಣ ಭಟ್ಟ ಅವರು ನನ್ನ ವಿಕ್ಷಿಪ್ತತೆಗಳನ್ನು ಗಣನೆಗೆ ತರದೆ ವ್ಯಾಧಿಗ್ರಸ್ಥ ನನ್ನ ಪ್ರಕೃತಿಯನ್ನು ಕಾಯ್ದುಕೊಳ್ಳಲು ದಕ್ಷತೆ ವಹಿಸಿರದಿದ್ದರೆ ಈ ಪುಸ್ತಕ ಪ್ರಕಾಶನದ ದಿನವನ್ನು ನಾನು ನೋಡುತ್ತಿದ್ದಿಲ್ಲ. ಈ ಅಪಾತ್ರನ ಕುರಿತು ಅವರ ಸೇವಾಭಾವವು ನನ್ನ ಆತ್ಮಶುದ್ಧಿಗೆ ನನ್ನ ಅವಗುಣಗಳನ್ನು ದೂರ ಮಾಡಿಕೊಳ್ಳಲು ಪ್ರೇರಕ ಶಕ್ತಿಯಾಗಲೆಂದು ಪರಮಾತ್ಮನಲ್ಲಿ ದೈನ್ಯದಿಂದ ಮೊರೆ ಇಡುವೆ" ಎಂದು ತಮ್ಮ ವಿನಮ್ರಭಾವನೆಯನ್ನು ವ್ಯಕ್ತಗೊಳಿಸಿರುವರು. ಅವರ ಸತತ ಸಾನಿಧ್ಯದ ಫಲವಾಗಿ ಶ್ರೀ ರಾಮಚಂದ್ರ ಭಟ್ಟರು ಸಹ ಬ್ರಹ್ಮಚಾರಿಗಳಾಗಿ ಉಳಿದು, ಆಶ್ರಮಗಳ ಸೇವೆ, ದೀನದಲಿತರ ಸೇವೆ, ರಾಷ್ಟ್ರಸೇವೆ, ರಾಷ್ಟ್ರಸೇವಕರ ಸೇವೆ ಈ ರೀತಿ ದಾಸರದಾಸನಾಗಿ, ಹನುಮಭಕ್ತಿಯಿಂದ ಸೇವೆಮಾಡಿಕೊಂಡಿರುವುದೇ ತನ್ನ ಧರ್ಮವೆಂದು ತಿಳಿದು ಜೀವಿಸುತ್ತ ಬಂದ ಎಪ್ಪತ್ತೆರಡು ವರ್ಷ ವಯಸ್ಸಿನ ಸೇವಾಜೀವಿಗಳಾಗಿರುವರು. ಈ ರೀತಿ ಅಲ್ಲಲ್ಲಿ ಅನೇಕ ಸಜ್ಜನರನ್ನು ನಾಯಕ ಮಾಸ್ತರರು ನಿರ್ಮಿಸಿ ಹೋಗಿರುವರು.

ಇತ್ತೀಚಿಗೆ ಅವರನ್ನು ಕಾಣಲು ಹೋಗುತ್ತಿದ್ದಾಗ ದೇಶದ ರಾಜಕೀಯ ವಿಷಯವನ್ನು ಚರ್ಚಿಸುತ್ತಿದ್ದರು. ದೇಶದಲ್ಲಿ ನಡೆಯುತ್ತಿದ್ದ ಭ್ರಷ್ಟಾಚಾರ, ಮೋಸ, ಸುಲಿಗೆ, ಅನ್ಯಾಯ ಇವುಗಳನ್ನು ನೆನೆನೆಸಿದು ವ್ಯಸನ ಪಡುತ್ತಿದ್ದರು.

ದಿ॥ ನಾಯಕ ಮಾಸ್ತರರು ತಮ್ಮ ಕೊನೆಯ ದಿನಗಳನ್ನು ಅಂಕೋಲೆಯ ಗ್ರಾಮಸೇವಾ ಸಮಿತಿಯಲ್ಲಿ ಕಳೆಯುತ್ತಿದ್ದರು. ಅಲ್ಲಿಯೇ ಅವರ ಕೊನೆಯ ಅಭಿಲಾಷೆಯ ರಚನೆಯಾದ "ಶಿವಶರಣರ ಸಾಧನಾಪಥ" ಪುಸ್ತಕವನ್ನು ಬರೆದು ಮುಗಿಸಿ ಅದನ್ನು ಅಚ್ಚು ಮಾಡಿಸಲೋಸುಗ ಬಾಗಲಕೋಟೆಯ ಬಸವೇಶ್ವರ ಪ್ರಿಂಟಿಂಗ್ ಪ್ರೆಸ್ಸಿಗೆ ಹೋಗಿ ಪ್ರಿಂಟ್‌ಮಾಡಿಸಿ ಮುಗಿಸಿದರು. ಅಲ್ಲಿಂದಲೇ ಬೆಳಗಾವಿಯಿಂದ ಹದಿನೆಂಟು ಮೈಲು ಅಂತರದಲ್ಲಿ ಇರುವ ನರಸಿಂಹಪುರದ ಆಶ್ರಮಕ್ಕೆ ಹೋಗಿ ಉಳಿದರು. ತೀರಾ ಹಣ್ಣಾದ ಅವರನ್ನು ನೋಡಿಕೊಳ್ಳಲು ಆಶ್ರಮದ ಇಬ್ಬರನ್ನು ಸಹಾಯಕ್ಕೆ ಕೊಡಲಾಗಿತ್ತು.

ನಾಯಕ ಮಾಸ್ತರರು ರಾತ್ರಿ ಮಲಗಿದವರು ಮಧ್ಯೆ ಎದ್ದು ಮೂತ್ರ ವಿಸರ್ಜನೆಗೆ ಹೋಗಬೇಕಾಗಿತ್ತು. ಅವರಿಗೆ ಆ ಬಗ್ಗೆ ಮತ್ತೊಬ್ಬರ ಸಹಾಯದ ಅವಶ್ಯಕತೆಯಿತ್ತು. ಆದರೆ ಆ ಹೊತ್ತಿಗೆ ಉಪಚಾರಕ್ಕೆ ಇದ್ದವರು ನಿದ್ದೆ ಹೋಗಿದ್ದ ಕಾರಣ ಅವರನ್ನು ಎಬ್ಬಿಸಿ ಕಷ್ಟಕೊಡಬಾರದೆಂದು, ತಾವೇ ಎದ್ದು ಮೂತ್ರಕುಂಡ ಇಟ್ಟಲ್ಲಿ ಹೋಗಿ ಮೂತ್ರ ಮಾಡಿದರು. ಕುಂಡ ತುಂಬಿದ ಕಾರಣ ಅದನ್ನು ತಾವೇ ಎತ್ತಿ ಚೆಲ್ಲಿ, ಎದ್ದು ತಿರುಗುವಾಗ ಆಯತಪ್ಪಿ ಬಿದ್ದು ಬಿಟ್ಟರು. ಕಾಲಿನ ಎಲುವು ಮುರಿಯಿತು. ಇದು ನಡೆದದ್ದು ಅಕ್ಟೋಬರ ೫ರ ರಾತ್ರಿ. ತಾರೀಖು ೧೯ರ ವರೆಗೂ ಅಲ್ಲಿಯೇ ನಿಸರ್ಗ ಚಿಕಿತ್ಸೆ ಹಾಗು ಗಿಡಮೂಲಿಕೆಗಳ ಚಿಕಿತ್ಸೆಗಳನ್ನು ನಡೆಸಿದರು. ಆದರೆ ಎಲುವು ತುಂಡಾಗಿ ಹೋಗಿದ್ದ ಕಾರಣ ಆ ಉಪಚಾರದಿಂದ ಪ್ರಯೋಜನವಾಗಲಿಲ್ಲ. ತಾರೀಕು ೨೦ಕ್ಕೆ ಬೆಳಗಾವಿಯ ಸಿವ್ಹಿಲ್ ಆಸ್ಪತ್ರೆಗೆ ಅವರನ್ನು ತರಲಾಯಿತು. ಅಲ್ಲಿಯೂ ಗುಣಮುಖರಾಗದೆ, ವೇದನೆ ಅಸಹ್ಯವಾಯಿತು. ಅದೇ ಹೊತ್ತಿಗೆ ಅವರಿಗೆ ದಮ್ಮು ಮತ್ತು ಕೆಮ್ಮು ಬರಹತ್ತಿದ್ದರಿಂದ ಅವರ ನಿತ್ಯ ಆಹಾರವಾಗಿದ್ದ ಹಣ್ಣು, ಮಜ್ಜಿಗೆ ಮುಂತಾದವು ಗಳನ್ನು ನಿಲ್ಲಿಸಬೇಕಾಯಿತು. ಹೀಗಾಗಿ ಅವರ ದೇಹವೂ ಕ್ಷೀಣವಾಗಹತ್ತಿತು. ಅಲ್ಲಿಯ ಡಾಕ್ಟರರು ಶಕ್ತಿಮೀರಿ ಪ್ರಯತ್ನಿಸಿದರೂ ಪ್ರಯೋಜನವಾಗಲಿಲ್ಲ. ಬದುಕಿಸುವ ಆಶೆ ಉಳಿಯಲಿಲ್ಲ. ಆದಕಾರಣ ಅವರನ್ನು ನವಂಬರ ೧೯ಕ್ಕೆ ಅವರದೇ ಸೃಷ್ಟಿಯಾದ ಅಂಕೋಲೆಯ ಗ್ರಾಮಸೇವಾ ಸಮಿತಿಗೆ ತಂದಮೇಲೆ ಅವರನ್ನು ತಂದೆಯಂತೆ ಕಂಡುಕೊಂಡಿದ್ದ ಅಂಕೋಲೆಯ ಕ್ರಿಸ್ತಮಿತ್ರ ಆಶ್ರಮದ ಡಾ॥ ತಂಗಮ್ಮ ಮತ್ತು ಇತರ ಡಾಕ್ಟರ ಹಾಗು ದಾಯಿಯರು ಭಕ್ತಿಭಾವದಿಂದ ಉಪಚಾರಮಾಡಿದರು. ಆದರೆ ಅವರ ಇಹಲೋಕಪಯಣ ತೀರಿತು. ನವಂಬರ ೨೬ನೆಯ ತಾರೀಖು ಮಧ್ಯಾಹ್ನ ಘಂಟೆ ೧೨-೨೫ಕ್ಕೆ ನಮ್ಮೆಲ್ಲರ ಹಿರಿಯಣ್ಣನಂತಿದ್ದ ನಾಯಕ ಮಾಸ್ತರರು ನಮ್ಮನ್ನು ಅಗಲಿ, ಪರಂಧಾಮವನ್ನೈದಿದರು. ಆದರೆ ಅವರ ಜೀವನವು ನಮ್ಮೆಲ್ಲರಿಗೆ ದಾರಿದೀಪವಾಗಿ ಉಳಿಯುವುದು.

# ಮಹಾತಪಸ್ವಿ

ಡಾ|| ರಂ. ರಾ. ದಿವಾಕರ

ಭಾರತೀಯ ಸ್ವಾತಂತ್ರ್ಯದ ಹೋರಾಟವು ೧೮೫೭ರಿಂದ ಪ್ರಾರಂಭ ವಾಯಿತೆಂದು ಇತಿಹಾಸಕಾರರು ಹೇಳುವರು. ಆ ಹೋರಾಟವು ೧೯೧೯ರ ವರೆಗೆ ಇತರ ದೇಶಗಳಲ್ಲಿಯ ಸ್ವಾತಂತ್ರ್ಯದ ಹೋರಾಟದ ಹಾಗೆಯೇ ಬರೀ ರಾಜಕೀಯ ಸ್ವರೂಪದ್ದು ಇತ್ತು. ಭಾರತದಲ್ಲಿ ಗಾಂಧಿಯುಗವು ಪ್ರಾರಂಭವಾದಂದಿನಿಂದ ಅದರ ಸ್ವರೂಪವೇ ಬದಲಾಯಿತು. ಗಾಂಧೀಜಿಯವರು ಸತ್ಯ–ಅಹಿಂಸೆಗಳ ಅಡಿಗಲ್ಲಿನ ಮೇಲೆ ತಮ್ಮ ಚಳುವಳಿಯನ್ನು ಪ್ರಾರಂಭಿಸಿದರು. ಆದುದರಿಂದ ಅದಕ್ಕೆ ನೈತಿಕ ಹಾಗೂ ಆಧ್ಯಾತ್ಮಿಕ ಶಕ್ತಿಗಳ ಬೆಂಬಲವು ದೊರಕಿತು. ಮತ್ತು ನೈತಿಕ ಹಾಗೂ ಆಧ್ಯಾತ್ಮಿಕ ಪ್ರವೃತ್ತಿ ಉಳ್ಳ ಅನೇಕ ಜನರು ಆ ಚಳವಳಿಯಲ್ಲಿ ಭಾಗವಹಿಸಲು ಮುಂದಾದರು. ಗಾಂಧೀಜಿ ಸ್ವತಃ ಆ ಚಳವಳಿ ತಮ್ಮ ಆಧ್ಯಾತ್ಮಿಕ ಸಾಧನವೆಂದು ಸಾರಿದರು. ಸ್ವರಾಜ್ಯ ಇದರ ಅರ್ಥ ಬರೀ ರಾಜಕೀಯ ಸ್ವರಾಜ್ಯ ವಲ್ಲ; ಸ್ವ–ರಾಜ್ಯ ಅಂದರೆ ತನ್ನ ಎಲ್ಲ ಶಕ್ತಿ–ಪ್ರವೃತ್ತಿಗಳ ಮೇಲೆ ಪ್ರಭುತ್ವ, ಆತ್ಮಶಕ್ತಿಯ ಜಯ, ಎಂದು ಅವರು ಹೇಳಿದ್ದುಂಟು. ರಾಜಕೀಯ ಕ್ಷೇತ್ರದಲ್ಲಿ ಕೂಡ ಹಿಂಸೆ ಹಾಗೂ ಅಸತ್ಯ ಇವುಗಳನ್ನು ಆತ್ಮಶಕ್ತಿಯಿಂದ, ಅಹಿಂಸೆಯಿಂದ, ಸತ್ಯಾಚರಣೆಯಿಂದ ಗೆಲ್ಲುವುದೇ ತಮ್ಮ ಉದ್ದೇಶ ಎಂದು ಅವರು ನಿರ್ಧರಿಸಿದರು.

ಗಾಂಧೀಜಿ ಅವರ ಈ ನಿಲುವು ಸ್ವಭಾವತಃ ಸಾತ್ವಿಕ ಪ್ರವೃತ್ತಿ ಉಳ್ಳ ಶ್ರೀ ತಿಮ್ಮಪ್ಪ ನಾಯಕರ ಮನಸನ್ನು ಸೆಳೆಯಿತು. ಅವರು ಸರ್ವ ಸ್ವಾರ್ಥವನ್ನೂ ತ್ಯಜಿಸಿ ಗಾಂಧೀ ಪ್ರಣೀತ ಅಹಿಂಸಾತ್ಮಕ ಅಸಹಕಾರದ ಚಳವಳಿಯಲ್ಲಿ ಧುಮುಕಿದರು. ಐಹಿಕ ದೃಷ್ಟಿಯಿಂದ ರಾಜಕೀಯ ಸ್ವಾತಂತ್ರ್ಯ ಹಾಗೂ ಸ್ವರಾಜ್ಯ, ಪಾರಮಾರ್ಥಿಕ ದೃಷ್ಟಿಯಿಂದ ಆಧ್ಯಾತ್ಮಿಕ ಸ್ವರಾಜ್ಯ ಇವೇ ಅವರ ಜೀವನೋದ್ದೇಶಗಳಾಗಿ ಪರಿಣಮಿಸಿದವು. ತಮ್ಮ ಶಾಲಾ ಮಾಸ್ತರಿಕೆಗೆ ರಾಜೀನಾಮೆ ಕೊಟ್ಟಂದಿನಿಂದ ಕೊನೆ ಉಸಿರಿನವರೆಗೆ ಅವರು ಉಚ್ಚ ಕೋಟಿಯ ಸಾಧಕರಂತೆ, ಮಹಾತಪಸ್ವಿಗಳಂತೆ ತಮ್ಮ ಆಚರಣೆಯನ್ನು ಇಟ್ಟುಕೊಂಡಿದ್ದರು. ಚಳವಳಿಯಲ್ಲಿ ಅವರು ಎಷ್ಟು ಮಗ್ನರಾಗಿ ವರ್ತಿಸುತ್ತಿದ್ದರೋ ಅಷ್ಟೇ ನಿಷ್ಠೆಯಿಂದ ಅವರು ರಚನಾತ್ಮಕ ಕಾರ್ಯ ಕ್ರಮಗಳ ಮೂಲಕ ನಮ್ಮ ಸಮಾಜದ ಆರ್ಥಿಕ–ಸಾಮಾಜಿಕ ಸೇವೆಯಲ್ಲಿ ತೊಡಗಿರು ತ್ತಿದ್ದರು. ಈ ಬಗೆಯ ಸಭ್ಯ–ಶುಚಿತ್ವದ ಪ್ರತ್ಯಕ್ಷ ಮೂರ್ತಿಯನ್ನೇ ನಾವು ಶ್ರೀ ನಾಯಕ ಮಾಸ್ತರರಲ್ಲಿ ಕಾಣುತ್ತಿದ್ದೆವು. ಇದು ಬಹುಜನರಲ್ಲಿ ಕಂಡು ಬರುವದಿಲ್ಲ.

ಇನ್ನೊಂದು ಮಹತ್ವದ ಸಂಗತಿ ಅಂದರೆ ಅವರು ರಾಷ್ಟ್ರೀಯ ಕಾರ್ಯಕ್ರಮ ಗಳನ್ನು ಎಷ್ಟು ಆಸ್ಥೆಯಿಂದ, ಕೌಶಲ್ಯದಿಂದ ನಡೆಸಿಕೊಂಡು ಹೋಗುತ್ತಿದ್ದರೋ ಅಷ್ಟೇ ಗಂಭೀರವಾಗಿ ಅವರು ತತ್ವಚಿಂತನದಲ್ಲಿ ಮಗ್ನರಾಗಿರುತ್ತಿದ್ದರು. ಕಾರ್ಯ ಕ್ರಮಗಳನ್ನು ಕೈಕೊಳ್ಳುವಾಗ ಹಾಗೂ ಅವುಗಳನ್ನು ನಡೆಸಿಕೊಂಡು ಹೋಗುವಾಗ ತಮ್ಮಿಂದ ತತ್ವಚ್ಯುತಿ ಆಗಕೂಡದೆಂಬ ಬಗ್ಗೆ ಅವರು ಬಹಳ ಸೂಕ್ಷ್ಮವಾಗಿ ಎಚ್ಚರ ಪಡುತ್ತಿದ್ದರು.

ನಾನು ಅವರಿಗೆ ತಪಸ್ವೀ ಎಂಬ ಬಿರುದನ್ನು ಬರೀ ಲೌಕಿಕವಾಗಿ ಹೇಳುವದಿಲ್ಲ. ಅವರಷ್ಟು ಸಾದಾ ಜೀವನ, ವ್ರತಸ್ಥ ಜೀವನ, ದೇಹಪ್ರಾಣಗಳ ಅವಶ್ಯಕತೆಗಳ ಬಗ್ಗೆ ಔದ್ಯಾಸಿನ್ಯ ನಾನು ಇನ್ನಾವ ಕಾರ್ಯಕರ್ತರಲ್ಲಿಯೂ ನೋಡಿಲ್ಲ. ಅವರು ಗಾಂಧೀ ಸೇವಾ ಸಂಘದ ಸದಸ್ಯರಾಗಿದ್ದರು. ಅವರ ಯೋಗಕ್ಷೇಮ ಪರಾವಲಂಬಿ ಇರಬಾರದೆಂದು ಸಂಘದ ಅಧ್ಯಕ್ಷರ ಉತ್ಕಟ ಇಚ್ಛೆಯಾಗಿತ್ತು. ಆದರೆ ಶ್ರೀ ನಾಯಕ ಮಾಸ್ತರರು ತಮಗೆ ತಿಂಗಳಿಗೆ ಏಳು ರೂಪಾಯಿ ಮಾತ್ರ ಬೇಕಾಗಬಹುದು ಎಂದು ಹೇಳಿ ಅದರಂತೆ ತಮ್ಮ ನಿರ್ವಾಹವನ್ನು ವರ್ಷಾನುವರ್ಷ ನಡೆಸಿದ್ದುಂಟು! ದೇಹಾರೋಗ್ಯ ಅಷ್ಟೊಂದು ನೆಟ್ಟಗಿರದಿದ್ದರೂ ಅದರ ಪರಿವೆ ಇಲ್ಲದೆ ಅವರು ಸತತವೂ ಲೋಕಸೇವಾ ನಿರತರಾಗಿರುತ್ತಿದ್ದರು.

೧೯೩೨-೧೯೩೩ರಲ್ಲಿ ಶಿರಸಿ-ಸಿದ್ಧಾಪುರಗಳಲ್ಲಿ ನಡೆದ ಕರನಿರಾಕರಣೆಯ ಚಳವಳಿಯಲ್ಲಿ ಶ್ರೀ ನಾಯಕ ಮಾಸ್ತರರ ಪಾತ್ರ ಬಹಳ ದೊಡ್ಡದು, ಅತಿಮಹತ್ವದ್ದು. ಚಳವಳಿಗೆ ಮೂಲ ಪ್ರೇರಣೆ ಗಾಂಧಿ ಅವರದಾದರೂ ಸ್ಥಾನಿಕ-ದೈನಂದಿನ ಮುಖಂಡತ್ವ ಹಾಗೂ ಮಾರ್ಗದರ್ಶನ ಅಷ್ಟೇ ಮಹತ್ವವುಳ್ಳವುಗಳು. ಶ್ರೀ ನಾಯಕ ಮಾಸ್ತರರ ಮೇಲೆ ಅಲ್ಲಿಯ ಜನರ ಅಪಾರ ಶ್ರದ್ಧೆ ಇಲ್ಲದೆ ಹೋಗಿ ದ್ದರೆ ಅಂಥ ಸಿಕರದ ತ್ಯಾಗವನ್ನೊಳಗೊಂಡ ಚಳವಳಿ ಯಶಸ್ವಿ ಆಗುವದು ಕಠಿಣವಾಗುತ್ತಿತ್ತು.

ತತ್ವನಿಷ್ಠೆ, ಕರ್ತೃತ್ವ, ಸಂಘಟನಾಪಟುತ್ವ, ಶಿಸ್ತಿನಿಂದ ನಡೆಯುವಿಕೆ ಇವೆಲ್ಲವು ಗಳೊಡನೆ ಶ್ರೀ ನಾಯಕ ಮಾಸ್ತರರು ಮಹಾನ್ ಆಧ್ಯಾತ್ಮವಾದಿಗಳು ಹಾಗೂ ಚಿಂತಕರೂ ಆಗಿದ್ದಾರೆಂದು ಮೇಲೆ ಹೇಳಿದ್ದೇನೆ. ಅವರ ಚಿಂತನ ಅವರಿಗಷ್ಟೇ ಸೀಮಿತವಾಗಿರದೆ ಅದು ಪುಸ್ತಕ ರೂಪದಲ್ಲಿ ಜನಸಾಮಾನ್ಯರಿಗೆ ಉಪಲಬ್ಧವಾದುದು ನಮ್ಮೆಲ್ಲರ ಅಹೋಭಾಗ್ಯ. ಅವರ ಚಿಂತನದಲ್ಲಿ ಅತ್ಯಂತ ಗಾಢವಾದ ಸಮನ್ವಯ ದೃಷ್ಟಿ ತುಂಬಿತುಳುಕುತ್ತಿದೆ. ತಮ್ಮ ಬರಹಗಳಲ್ಲಿ ಯಾವುದೇ ಒಂದೇ ಧರ್ಮದ ದೃಷ್ಟಿಯನ್ನಿಟ್ಟುಕೊಳ್ಳದೆ ಮಾನವ ಮಾತ್ರರಿಗೆ ಸಲ್ಲಬಹುದಾದ ದೃಷ್ಟಿಯಿಂದ ಧರ್ಮಕರ್ಮಗಳತ್ತ ನೋಡಿದ್ದಾರೆ. ಅವರು ಕಣ್ಣುಮುಚ್ಚುವ ಮೊದಲು

ಶಿವಶರಣರ ವಾಙ್ಮಯವನ್ನೂ ಅಭ್ಯಸಿಸಿ ಒಂದು ಉದ್ಗ್ರಂಥವನ್ನು ಬರೆದಿದ್ದಾರೆ. ದೇಹಾರೋಗ್ಯ, ವಯಸ್ಸು, ಅನೇಕ ಅನನುಕೂಲತೆಗಳು ಇವುಗಳನ್ನು ಲೆಕ್ಕಿಸದೆ ಅವರು ಆ ಗ್ರಂಥವನ್ನು ಪ್ರಕಟಿಸಿದುದು ಅವರ ಅಪಾರ ಮಾನವಪ್ರೇಮವನ್ನೂ, ಲೋಕಸೇವಾ ತತ್ಪರತೆಯನ್ನು ನಮ್ಮೆದುರು ಒಡ್ಡುತ್ತಿದೆ.

ಒಟ್ಟಿಗೆ ನೋಡಲಾಗಿ ಅವರ ಜೀವನ ಒಂದು ಸಾತ್ವಿಕೋತ್ತಮವಾದ ಆದರ್ಶ ಜೀವನ ಎಂದು ಹೇಳಬಹುದು. ಮುಂದಿನ ಪೀಳಿಗೆಗಳಿಗೆ ಅವರ ಜೀವನದ ಪೂರ್ಣ ಲಾಭ ದೊರೆಯಬೇಕಾದರೆ ಅವರ ಪೂರ್ಣ ಜೀವನ ಚರಿತ್ರೆ ಪ್ರಸಿದ್ಧವಾಗುವದು ಅವಶ್ಯ. ಒಬ್ಬ ಸಾಮಾನ್ಯ ಶಾಲಾ ಶಿಕ್ಷಕ ತನ್ನ ಆಂತರಿಕ-ಆಧ್ಯಾತ್ಮಿಕ ಪ್ರೇರಣೆಯಿಂದ ತನ್ನ ಜೀವನವನ್ನು ಯಾವ ರೀತಿ ಆದರ್ಶಭೂತವಾಗಿರುವಂತೆ ಮಾಡಬಲ್ಲನೆಂಬುದನ್ನು ತಿಳಿದುಕೊಳ್ಳಬೇಕಾದರೆ ಅವರ ನಿಕಟವರ್ತಿಗಳು ಅವರ ಪೂರ್ಣ ಚರಿತ್ರೆಯನ್ನು ಪ್ರಕಟಿಸುವದು ಅವಶ್ಯ.

ಶ್ರೀ ನಾಯಕ ಮಾಸ್ತರರ ಆತ್ಮವೂ ಅಜರಾಮರವಾಗಿರುವುದಲ್ಲದೆ ಅವರು ತೋರಿದ ದಾರಿಯು ಮುಂದಿನವರಿಗೆ ಮಾರ್ಗದರ್ಶಕವಾಗಿರುವುದು.

## "ಸರ್ವಧರ್ಮ ಸಮನ್ವಯ"ದ ಕುರಿತು

ಸರ್ವಧರ್ಮಗಳ ವಿಚಾರ ಬಂದೊಡನೆ ನನ್ನೆದುರು ಮೂರು ಶಬ್ದಗಳು ಬಂದು ನಿಲ್ಲುವವು: ಸರ್ವಧರ್ಮ ಸಮಭಾವ, ಸರ್ವಧರ್ಮ ಸಮಾನತ್ವ, ಮತ್ತು ಸರ್ವಧರ್ಮ ಸಮನ್ವಯ. ಅನೇಕರು ಈ ಮೂರೂ ಶಬ್ದಗಳನ್ನು ಸಮಾನಾರ್ಥಕ ಎಂಬುವಂತೆ ಉಪಯೋಗಿಸುವದುಂಟು. ವಸ್ತುಸ್ಥಿತಿ ಹಾಗಿಲ್ಲ. ಸರ್ವಧರ್ಮಗಳು ಸಮಾನ ಇರುವವೋ ಇಲ್ಲವೋ ಎಂಬುದನ್ನು ಲೆಕ್ಕಕ್ಕೆ ತರದೆ, ಸ್ನೇಹಕ್ಕಾಗಿ, ಶಿಷ್ಟಾಚಾರಕ್ಕಾಗಿ, ಸಹಜೀವನಕ್ಕಾಗಿ, ಸರ್ವಧರ್ಮ ಸಮಭಾವವು ಅವಶ್ಯ; ತಮ್ಮ ತಮ್ಮ ತಾಯಿ ಅವರವರಿಗೆ ಎಲ್ಲಕ್ಕೂ ಹೆಚ್ಚಿನವಳು; ಆ ಮನೋಭಾವಕ್ಕೆ ಮಹತ್ವ ಕೊಟ್ಟು, ಸರ್ವಧರ್ಮ ಸಮಭಾವವನ್ನು ಇಟ್ಟುಕೊಳ್ಳುವದು ವ್ಯಾವಹಾರಿಕ ದೃಷ್ಟಿಯಿಂದ ಸಹ ಉಚಿತವು. ಒಂದೇ ರಾಷ್ಟ್ರದಲ್ಲಿ, ಹಲವಾರು ಧರ್ಮದವರು ಶಾಂತಿ ಸಮಾಧಾನದಿಂದ ಬಾಳಬೇಕಾದರೆ ಈ ಸರ್ವ-ಧರ್ಮ ಸಮಭಾವವು ಬಹಳೇ ಉಪಕಾರಕವಾಗುವದು.

"ಸರ್ವಧರ್ಮ ಸಮಾನತ್ವ ಎಂಬುದು ಅದಕ್ಕೂ ಮುಂದಿನ ಹೆಜ್ಜೆ. ಕಾರಣಾಂತರಗಳಿಂದ, ತಮ್ಮ ಧರ್ಮವೇ ಹೆಚ್ಚಿನದು, ಶ್ರೇಷ್ಠ, ಉಳಿದವುಗಳು ಕಡಿಮೆ ತರಗತಿಯವು ಎಂದು ಹೇಳಿಕೊಳ್ಳುವವರು ದೊಡ್ಡ ದೊಡ್ಡ ವಿದ್ಯಾವಂತರಲ್ಲಿ ಕೂಡ ಇರುವರು. ತಮ್ಮದೇ ಏಕಮೇವ ನಿಜಧರ್ಮ ಎಂದು ಹೇಳುವವರೂ

ಇದ್ದಾರೆ. ಅಂಥವರು ಸರ್ವಧರ್ಮಗಳು ಸಮಾನ ಎಂದು ಒಪ್ಪಿಕೊಳ್ಳುವದು ಅಸಾಧ್ಯ. ಆ ದಿಕ್ಕಿನಲ್ಲಿ ಅವರು ವಿಚಾರಮಾಡಲು ಸಹಾ ಸಿದ್ಧ ಇರಲಾರರು. ಆದರೆ ಮುಕ್ತ ಮನಸ್ಸಿನಿಂದ ಸತ್ಯವನ್ನು ಶೋಧಿಸುವ ನಿರ್ಧಾರದಿಂದ ಹೊರಟ ಧರ್ಮಚಿಂತಕರು, ಸರ್ವಧರ್ಮ ಸಮಾನತ್ವದ ದಿಕ್ಕಿನಲ್ಲಿ ವಿಚಾರ ಮಾಡಬಲ್ಲರು. ಧರ್ಮಗಳು ಪ್ರತ್ಯೇಕವಾಗಿ ಇರುವಂತೆ ಇದ್ದು, ಅವುಗಳಲ್ಲಿಯು ಸಮಾನತ್ವವನ್ನು ಕಂಡುಹಿಡಿಯುಲು ಸಾಧ್ಯ. ಆ ಪ್ರಮೇಯವನ್ನು ಒಪ್ಪಲು ಸಾಧ್ಯ.

"ಸರ್ವಧರ್ಮ ಸಮನ್ವಯ" (ಸಿನ್‌ಥೆಸಿಸ್), ಇದು ಅದಕ್ಕೂ ಮುಂದಿನ ಹೆಜ್ಜೆ. ಯಾಕೆಂದರೆ ಸಮನ್ವಯದಲ್ಲಿ ಪ್ರತ್ಯೇಕತೆಗೆ ಸ್ಥಾನವೇ ಉಳಿಯಲಾರದು. ಧರ್ಮ ಎಂಬುದರ ಮೂಲ ಅಡಿಗಲ್ಲು ಒಂದೇ ಒಂದು. ಧರ್ಮದತ್ತ ಮಾನವನ ಮನಸ್ಸು ಆಕರ್ಷಿತವಾಗುವದು. ದೇಶ-ಕಾಲ-ಪರಿಸ್ಥಿತಿಗಳ ಮೂಲಕ ಹಲವಾರು ಧರ್ಮಗಳು ಅಸ್ತಿತ್ವದಲ್ಲಿ ಬಂದಿವೆ. ಮಾನವನ ಬಣ್ಣ, ನಿಲುವು, ಭಾಷೆ ಮುಂತಾದವುಗಳು ಬೇರೆ ಬೇರೆ ಇದ್ದರೂ ಜೀವಕೋಟಿಯಲ್ಲಿ ಮಾನವ ಎಂಬುವನು ಒಂದೇ ಕುಲದವನು. ಮಾನವ ಕುಲಕ್ಕೆಯೇ ಸೇರಿದವನು: ಅದೇ ರೀತಿ ಧರ್ಮದ ವಿಷಯ. ಧರ್ಮವು ಸತ್ಯಶೋಧನ ಪ್ರವೃತ್ತಿಯ ಫಲ. ಸತ್ಯವನ್ನು ಅನುಭವಿಸಲು ಮಾನವನು ಕೈಕೊಂಡ ಪ್ರಯತ್ನಗಳು ಸಾಧನಗಳು, ಧರ್ಮ ಎನಿಸುವವು, ಎಂಬುದೇ ಧರ್ಮ, ಧರ್ಮ ಸಮನ್ವಯದ ದೃಷ್ಟಿ.

"ಧರ್ಮಸಮನ್ವಯ ದರ್ಶನ"ದ ಪ್ರಥಮ ಖಂಡದಲ್ಲಿ ಶ್ರೀ ತಿಮ್ಮಪ್ಪ ನಾಯಕರು ಆ ದೃಷ್ಟಿಯಿಂದ ಪ್ರತ್ಯೇಕವಲ್ಲದ ಆದರೆ ವ್ಯವಹಾರದಲ್ಲಿ ಪ್ರತ್ಯೇಕ ಎಂದು ತಿಳಿಯಲಾದ ಧರ್ಮಗಳ ಸಾಂಗೋಪಾಂಗ ಸಮೀಕ್ಷೆ ಮಾಡಿದ್ದಾರೆ. ಇದೊಂದು ದೊಡ್ಡ ಪ್ರಯತ್ನ ಎಂದು ನಾನು ಹೇಳಬಲ್ಲೆ. ವಿಶೇಷತಃ ಕನ್ನಡದಲ್ಲಿ ಇಂಥ ಪ್ರಯತ್ನವನ್ನು ಇನ್ನೂ ಯಾರೂ ಮಾಡಿದ್ದನ್ನು ನಾನು ಕಂಡಿಲ್ಲ. ಇಂಗ್ಲಿಷಿನಲ್ಲಿ ಡಾ. ಭಗವಾನದಾಸ ಅವರು "ದಿ ಎಸ್ಸೆನ್ಶಿಯಲ್ ಯುನಿಟಿ ಆಫ್ ರಿಲಿಜನ್ಸ" ಎಂಬ ಉದ್ಗ್ರಂಥವನ್ನು ಈ ವಿಷಯದಲ್ಲಿ ಬರೆದಿದ್ದಾರೆ.

ಶ್ರೀ ತಿಮ್ಮಪ್ಪ ನಾಯಕರ ಈ ಪ್ರಯತ್ನವು ಸ್ವಾಗತಾರ್ಹವೂ, ಪ್ರಶಂಸನೀಯವೂ ಇರುವದು. ತಾವು ಕೂಡ ಜೀವನದ ಸತ್ಯವನ್ನು ಹುಡುಕಿ ಅವರಂತೆ ಮಾರ್ಗಕ್ರಮಣ ಮಾಡುತ್ತಿರುವ ಉತ್ಕಟ ಆಧ್ಯಾತ್ಮಿಕ ಯಾತ್ರಿಕರು. ಈ ದೃಷ್ಟಿಯಿಂದಲೇ ಅವರು ಧರ್ಮ-ತತ್ವಜ್ಞಾನಗಳ ಅಧ್ಯಯನ-ಚಿಂತನ ನಡೆಸಿರುವರು.

ಈ ಗ್ರಂಥದಲ್ಲಿ ಶ್ರೀ ನಾಯಕರು ಧರ್ಮವನ್ನಷ್ಟೇ ವಿಚಾರಿಸಿಲ್ಲ. ತತ್ವಜ್ಞಾನವನ್ನಷ್ಟೇ ವಿಚಾರಿಸಿಲ್ಲ, ಧರ್ಮ-ಸಾಧನಗಳನ್ನು ಅಲ್ಲಲ್ಲಿ ಚರ್ಚಿಸಿದ್ದಾರೆ. ಆದುದರಿಂದ ಈ ಗ್ರಂಥದ ಮಹತ್ವ ಮತ್ತಷ್ಟು ಹೆಚ್ಚಾಗಿದೆ.

ಮಾನವನೇ ತಾನು ಬುದ್ಧಿ ಪುರಸ್ಸರವಾಗಿ ಪ್ರಯತ್ನ ಮಾಡಲಿ ಬಿಡಲಿ, ಅವನು ಜ್ಞಾತ–ಅಜ್ಞಾತ ಮಾರ್ಗಗಳಿಂದ ನಿರಾಲಂಬ ಮುಕ್ತ ಆನಂದ ಎಂಬ ಚಿತ್–ಶಕ್ತಿಯನ್ನೇ ಪಡೆಯುವ ಹಂಬಲವನ್ನು ಇಟ್ಟುಕೊಂಡಿರುವನು. ಇಂದ್ರಿಯಗಳ ಮೂಲಕ ದೊರೆಯುವ ವಿಷಯ ಸುಖಗಳಿಂದ ಆತ್ಯಂತಿಕ ತೃಪ್ತಿಯನ್ನು ಹೊಂದಲಾರೆವು. ಏಕಾಂತಿಕ, ನಿತ್ಯ, ಅಖಂಡ ಆನಂದವೇ ಮಾನವನ ಕೊನೆಯ ಗುರಿ. ಆತ್ಮನ ಅಂದರೆ ನಿತ್ಯ–ವಸ್ತುವಿನ ಜ್ಞಾನದಿಂದಲೇ ಆ ಆನಂದವು. "ಆನಂದ–ರೂಪಂ ಅಮೃತಂ ಯದ್ ವಿಭಾತಿ" ಎಂಬುದೇ ಆತ್ಯಂತಿಕ ಸತ್ಯ. ಆ ಜ್ಞಾನದಿಂದ, ಅನುಭವದಿಂದ "ದುಃಖಾಂತಂ ಚ ನಿಗಚ್ಛತಿ" ಎಂಬ ಸ್ಥಿತಿ ಪ್ರಾಪ್ತವಾಗಬಲ್ಲದು. ಇದನ್ನೇ ಗೀತೆಯಲ್ಲಿ ಅತೀಂದ್ರಿಯ, ದ್ವಂದ್ವಾತೀತ, ಆತ್ಯಂತಿಕ ಸುಖವೆಂದು ವರ್ಣಿಸಲಾಗಿದೆ. ವೈಯಕ್ತಿಕವಾಗಿ ಹಾಗೂ ಸಾಮೂಹಿಕವಾಗಿ ಆ ಆನಂದವನ್ನು ಪಡೆದು, ಅನುಭವಿಸಿ, ಅದನ್ನೇ ಆತ್ಮ–ಸಾತ್ ಮಾಡಿಕೊಂಡು ಅದರಲ್ಲಿ ವಿಹರಿಸುವವನೇ ಸಿದ್ಧ ಪುರುಷನು.

ಈ ಮೂಲ ತತ್ವ, ಅದರ ಜ್ಞಾನ, ಅದನ್ನು ಪಡೆಯುವ ಸಾಧನ ಸಂಪತ್ತು, ಅನುಭವದಲ್ಲಿ ವಿಹರಿಸುತ್ತ ಜೀವನವನ್ನು ನಡೆಸುವುದು, ಇದೆಲ್ಲ ಪುರಾತನ ಕಾಲದಿಂದ ಭಾರತದಲ್ಲಿ ವಿವಿಧ ರೂಪಗಳಲ್ಲಿ ತೋರ್ಪಡುತ್ತ ಬಂದಿವೆ. ದೇಶ–ಕಾಲ–ಪರಿಸ್ಥಿತಿಗಳಿಗನುಸರಿಸಿ ಮಹಾಪುರುಷರು ಹಾಗೂ ಮಹಾನ್ ಸಾಧ್ವೀಮಣಿಗಳು ಆತ್ಮವಿದ್ಯೆಯನ್ನು ಆಯಾ ಭಾಷೆಯಲ್ಲಿ ಉಪದೇಶಿಸುತ್ತ ಬಂದಿದ್ದಾರೆ. ಧರ್ಮಗಳ ಬಾಹ್ಯ ರೂಪ, ಆಚಾರಾದಿಗಳು ಬೇರೆ ಬೇರೆ ಕಂಡರೂ ತತ್ವತಃ ಅವೆಲ್ಲವುಗಳ ಗಮ್ಯಸ್ಥಾನ ಒಂದೇ ಒಂದು ಎಂಬುದೇ ಧರ್ಮಸಮನ್ವಯ ದೃಷ್ಟಿಗೆ ಮೂಲಾಧಾರ. ಆ ದೃಷ್ಟಿಯನ್ನೇ ಅವಲಂಬಿಸಿ ಶ್ರೀ ನಾಯಕರು ಆಧುನಿಕ ಮಹಾಪುರುಷರ ವಿಚಾರಗಳ ಸಮೀಕ್ಷೆ ನಡೆಸಿ ನಮ್ಮೆದುರಿಗೆ ಇಟ್ಟಿದ್ದಾರೆ. ಆ ಮಹಾಪುರುಷರಲ್ಲಿ ಪರಮಹಂಸ ರಾಮಕೃಷ್ಣ ಹಾಗೂ ರಮಣ ಮಹರ್ಷಿಗಳೂ ಇರುವರು. ಅತ್ಯಂತ ವ್ಯವಹಾರ ಕುಶಲ ರಾಷ್ಟ್ರಪುರುಷ ಮಹಾತ್ಮಾ ಗಾಂಧಿಯವರೂ, ಸರ್ವೋದಯ ಕ್ರಾಂತಿ ಧುರೀಣರಾದ ವಿನೋಬಾಜಿಯವರೂ ಇರುವರು.

ಈ ಎಲ್ಲ ಕಾರಣಗಳ ಮೂಲಕ ಈ ಗ್ರಂಥವು ಮಾನವ–ಕುಲದ ಜೀವಾಳದ ಪ್ರಶ್ನೆಯಾದ ಧರ್ಮ, ಧರ್ಮ–ಧ್ಯೇಯ, ಆ ಧ್ಯೇಯದ ಸಾಧನ ಇವುಗಳ ಮೇಲೆ ಹೊಸ ಬೆಳಕನ್ನು ಬೀರುವಂತಹದಾಗಿದೆ. ಭಾಷೆ ಸರಳ, ಸುಲಭ, ಶಬ್ದ–ಪಾಂಡಿತ್ಯ ರಹಿತ ಆಗಿದೆ. ಇಂಥ ಉಚ್ಚ ಸಾಹಿತ್ಯ ಕನ್ನಡದಲ್ಲಿ ಕಡಿಮೆ. ಆದುದರಿಂದ ಇದು ಬಹಳ ಸ್ವಾಗತಾರ್ಹವು. ಈ ಬಗ್ಗೆ ಕನ್ನಡ ಭಾಷಾ ಭಾಂದವರು ಶ್ರೀ ನಾಯಕರಿಗೆ ಉಪಕೃತರಾಗಿರಬೇಕು.

# ನಾಯಕ ಮಾಸ್ತರರ ಜೀವನ

**ವಾ. ಅ. ಹೊದಿಕೆ**

ನಾಯಕ ಮಾಸ್ತರರನ್ನು ನಾನು ಮೊಟ್ಟ ಮೊದಲು ಕಂಡದ್ದು ನಾನು ಶಿಕ್ಷಣಕ್ಕೆ ಶರಣು ಹೊಡೆದು ಶಿರಸಿಗೆ ಮರಳಿ ಬಂದಾಗ ೧೯೨೦ರಲ್ಲಿ. ಆಗ ಅವರು ನಮ್ಮ ಮನೆಯ ಬಳಿ ಗೋಪಾಳಕೃಷ್ಣ ದೇವಸ್ಥಾನದ ಅಟ್ಟದಮೇಲೆ ಇರುತ್ತಿದ್ದರು. ಅಲ್ಲೇ ಸತ್ಯಾಶ್ರಮ ಲೈಬ್ರರಿಯೂ ಇತ್ತು.

ಕರ್ಮ ಧರ್ಮ ಸಂಯೋಗದಿಂದ ಮಾರಿಗುಡಿಪೇಟೆಯ ವಿದ್ಯಾರ್ಥಿಗಳ ಆಗ್ರಹ ದಿಂದ ನಾನು ಒಂದು ರಾಷ್ಟ್ರೀಯ ಶಾಲೆ ತೆರೆಯಬೇಕು ಎಂದು ನಿಶ್ಚಿತವಾದೊಡನೆ ಅದಕ್ಕೆ ಅದೇ ಗೋಪಾಳಕೃಷ್ಣ ದೇವಸ್ಥಾನದ ಮಾಳಿಗೆಯೇ ಯೋಗ್ಯ ಸ್ಥಳವೆಂದು ನಿರ್ಧರಿಸಲಾಯಿತು. ಮತ್ತು ಅದಕ್ಕೆ ನಾಯಕ ಮಾಸ್ತರರು ಮರುಮಾತಾಡದೇ ನಮ್ಮದೇ ನೆರೆಮನೆಯ ಅಟ್ಟಕ್ಕೆ ತಮ್ಮ ವಾಸಸ್ಥಳವನ್ನು ಸಂತೋಷದಿಂದ ಸ್ಥಳಾಂತರಿಸಿ ಕೊಂಡು ನನಗೆ ಅನುಕೂಲ ಮಾಡಿಕೊಟ್ಟರು. ಜತೆಯಲ್ಲಿ ಸತ್ಯಾಶ್ರಮ ಲೈಬ್ರರಿಯ ವ್ಯವಸ್ಥೆಯನ್ನು ನನಗೇ ವಹಿಸಿಬಿಟ್ಟರು. ಆಗ ಅವರು ಹೆಡ್‌ಮಾಸ್ತರರಾಗಿದ್ದ ಶಿರಸಿ ಎ. ವಿ. ಸ್ಕೂಲಿನ ಎಷ್ಟೋ ವಿದ್ಯಾರ್ಥಿಗಳು ಶಾಲೆ ಬಿಟ್ಟು ನನ್ನ ರಾಷ್ಟ್ರೀಯ ಶಾಲೆಗೆ ಬರಹತ್ತಿದರು. ಆದರೆ ನಾಯಕ ಮಾಸ್ತರರು ಒಬ್ಬರನ್ನೂ ತಡೆಯುತ್ತಿರಲಿಲ್ಲ. ಅರ್ಥಾತ್ ಅಂದಿನ ಅಸಹಕಾರ ಆಂದೋಲನಕ್ಕೆ ಅವರದು ಸಂಪೂರ್ಣ ಸಹಾನು ಭೂತಿ ಇತ್ತು. ಅಂದಿನ ಮುಂಬಯಿ ಕ್ರಾನಿಕಲ್ ಪತ್ರಿಕೆಯಲ್ಲಿ ಅವರು ಅಂದಿನ ಸರಕಾರದ ದುಷ್ಕೃತ್ಯಗಳನ್ನು ಟೀಕಿಸಿ ಲೇಖನಗಳನ್ನೂ ಬರೆಯುತ್ತಿದ್ದರು.

ಅವರು ತಮ್ಮ ವೇತನದಲ್ಲಿಯ ಬಹುಭಾಗವನ್ನು ಪ್ರತಿ ತಿಂಗಳ ಆರಂಭದಲ್ಲಿ ಸ್ವಾಮಿ ವಿವೇಕಾನಂದ, ಸ್ವಾಮಿ ರಾಮತೀರ್ಥ, ಟಾಲಸ್ಟಾಯ್, ಕಾರ್ಲಾಯಿಲ್, ಮೊದಲಾದವರ ಸುಪ್ರಸಿದ್ಧ ಪುಸ್ತಕಗಳನ್ನು ತರಿಸಲಿಕ್ಕೆ ವಿನಿಯೋಗಿಸುತ್ತಿದ್ದರು. ಮತ್ತು ಆ ಪುಸ್ತಕಗಳನ್ನು ಓದಿ ಸತ್ಯಾಶ್ರಮ ಲೈಬ್ರರಿಗೆ ಕೊಟ್ಟುಬಿಡುತ್ತಿದ್ದರು. ಹೀಗಾಗಿ ನನಗೆ ಅವರಿಂದ ಉತ್ತಮೋತ್ತಮ ಪುಸ್ತಕ ದೊರೆಯುತ್ತಿದ್ದವು. ಮತ್ತು ಅವುಗಳ ಮೌಲ್ಯವೂ ನನಗೆ ಅವರಿಂದ ಗೊತ್ತಾಗುತ್ತಿತ್ತು.

೧೯೨೧ರ ಕೊನೆಯಲ್ಲಿ ಸರಕಾರದ ದಬ್ಬಾಳಿಕೆಯು ಹೆಚ್ಚಿದೊಡನೆ ಒಂದು ದಿನ ಅವರು ಅಕಸ್ಮಾತ್ತಾಗಿ ತಮ್ಮ ನೌಕರಿಗೆ ರಾಜೀನಾಮೆ ಕೊಟ್ಟು ರಾಷ್ಟ್ರೀಯ ಶಾಲೆಗೆ ಬಂದು ಸೇರಿ ಬಿಟ್ಟರು. ಅವರ ಜತೆಯಲ್ಲಿ ಅವರ ಪ್ರೀತಿಯ ಹಲವಾರು ವಿದ್ಯಾರ್ಥಿ

ಗಳೂ ಬಂದು ಸೇರಿದರು. ಆವೊದಲೇ ಕಾಂಗ್ರೆಸ್ ಕಮಿಟಿ ಸ್ಥಾಪಿತವಾಗಿ, ಶಿರಸಿ ಯಲ್ಲಿ ಮನೆಮನೆಯಲ್ಲಿ ಮುಷ್ಟಿಫಂಡು ನಡೆಯುತ್ತಿ, ಅದರಿಂದ ರಾಷ್ಟ್ರೀಯ ಶಿಕ್ಷಕರಿಗೆಲ್ಲ ತಿಂಗಳಿಗೆ ೧೫ ರೂಪಾಯಿ ಸಹಾಯ ಧನ ಸಿಗುತ್ತಿತ್ತು. ಶಿಕ್ಷಕರ ಸಂಖ್ಯೆಯೂ ಆರಕ್ಕೆ ಮುಟ್ಟಿತ್ತು. ನಾಯಕ ಮಾಸ್ತರರು ಬಂದು ಸೇರಿದ ನಂತರ ವಿದ್ಯಾರ್ಥಿಗಳ ಸಂಖ್ಯೆಯು ೩೦೦ಕ್ಕೆ ಮುಟ್ಟಿತು.

ರಾಷ್ಟ್ರೀಯ ಶಾಲೆಯ ಶಿಕ್ಷಕರೂ ವಿದ್ಯಾರ್ಥಿಗಳೂ ಶೆರೆಸೇಂದಿ ಅಂಗಡಿಗಳ ಪಿಕೆಟಿಂಗ್, ವಿದೇಶೀ ವಸ್ತ್ರಗಳ ಬಹಿಷ್ಕಾರ, ಪ್ರಭಾತ ಫೇರಿ, ಮೆರವಣಿಗೆ, ಸಭೆ ಸಮ್ಮೇಳನ, ಖಾದೀ ಹಾಗೂ ರಾಷ್ಟ್ರೀಯ ವೃತ್ತಪತ್ರ ಮತ್ತು ಪುಸ್ತಕಗಳ ಮಾರಾಟ ಮೊದಲಾದ ಆಂದೋಲನದ ಯಾವತ್ತೂ ಕಾರ್ಯಕ್ರಮಗಳಲ್ಲಿ ಭಾಗವಹಿಸು ತ್ತಿದ್ದರು. ನಾಯಕ ಮಾಸ್ತರರು ಉಗ್ರವಾದ ಭಾಷಣಗಳನ್ನು ಮಾಡುತ್ತಿದ್ದರು. ಇಂಥ ಒಂದು ಭಾಷಣಕ್ಕಾಗಿ ನಾಯಕ ಮಾಸ್ತರರಿಗೆ ೧೯೩೨ರಲ್ಲಿ ಒಂದು ವರ್ಷದ ಸಶ್ರಮ ಶಿಕ್ಷೆಯಾಯಿತು. ಆ ಅವಧಿಯನ್ನು ಅವರು ಜೈಲಿನಲ್ಲಿ ಕಳೆದರು.

ಕೆಲವೇ ದಿನಗಳಲ್ಲಿ ದತ್ತಾತ್ರೇಯ ಜೋಶಿ ಮತ್ತು ನಾರಾಯಣ ಮರಾಠೆ ಹೆಸರಿನ ನಮ್ಮ ರಾಷ್ಟ್ರೀಯ ಶಾಲೆಯ ಬೇರೆ ಇಬ್ಬರು ಸಹ ಶಿಕ್ಷಕರಿಗೂ ಒಂದೊಂದು ವರ್ಷದ ತುರಂಗ ವಾಸವಾಯಿತು. ಇದಲ್ಲದೆ ಆಗ ಕಾರವಾರ ಜೈಲಿನಲ್ಲಿ :ನಮ್ಮ ಜಿಲ್ಲೆಯ ಬೇರೆ ೭–೮ ರಾಜಕೀಯ ಕೈದಿಗಳೂ ಇದ್ದರು. ಇದಲ್ಲದೆ ೨೦ ವರ್ಷಗಳ ಆಜನ್ಮ ಶಿಕ್ಷೆಯಾಗಿದ್ದ ಬಂಗಾಲದ ರಾಖಾಲಚಂದ ದೇ ಎಂಬ ಕ್ರಾಂತಿಕಾರರೂ ಕಾರವಾರ ಜೈಲಿನಲ್ಲೇ ಇದ್ದರು.

ನಾಯಕ ಮಾಸ್ತರರ ಒಡನಾಟದಿಂದ ರಾಖಾಲಚಂದರಲ್ಲಿ ವಿಚಾರ ಕ್ರಾಂತಿಯೇ ಆಯಿತು. ಆರಂಭದಿಂದಲೂ ಸಾತ್ವಿಕ ವೃತ್ತಿಯವರಾಗಿದ್ದ ಅವರು ಸಂಪೂರ್ಣ ಅಹಿಂಸಾತ್ಮಕ ಗಾಂಧಿ ವಿಚಾರದವರಾಗಿಬಿಟ್ಟರು. ಇಷ್ಟೇ ಅಲ್ಲ, ಮುಂದೆ ಬಿಡುಗಡೆ ಹೊಂದಿದ ಮೇಲೆ ಇಂದಿಗೂ ಅವರು ಒಬ್ಬ ನಿಷ್ಠಾವಂತ ಸರ್ವೋದಯ ಕಾರ್ಯ ಕರ್ತರಾಗಿದ್ದು ಕೊನೆಯವರೆಗೂ ನಾಯಕ ಮಾಸ್ತರರೊಡನೆ ನಿಯಮಿತ ಪತ್ರ ವ್ಯವಹಾರ ನಡೆಸುತ್ತಿರುತ್ತಿದ್ದರು.

ನಾಯಕ ಮಾಸ್ತರರು ಜೈಲಿನಿಂದ ಬಿಡುಗಡೆಯಾಗಿ ಬಂದ ಮೇಲೆ ಮತ್ತು ಗಾಂಧಿಯವರ ಜೈಲುವಾಸದ ನಂತರ ಆಂದೋಲನವು ಮಂದವಾಗಿ ರಾಷ್ಟ್ರೀಯ ಶಾಲೆಗಳು ಬಂದಾಗುತ್ತಿದ್ದವು. ಕೊನೆಗೆ ನಾಯಕ ಮಾಸ್ತರರು ಗಾಂಧಿಯವರ ಸಾಬರಮತಿ ಸತ್ಯಾಗ್ರಹಾಶ್ರಮದಲ್ಲಿ ಹೋಗಿ ಉಳಿದರು. ಆಗಲೇ ಅವರಿಗೆ ಗಾಂಧಿ ಯವರ ನಿಕಟ ಸಹವಾಸದ ಲಾಭವಾದದ್ದು. ಅಲ್ಲಿಂದ ತಿರುಗಿ ಬಂದ ಮೇಲೆ

ಗಂಗಾಧರರಾವ ದೇಶಪಾಂಡೆಯವರ ಕುಮರಿ ಆಶ್ರಮದಲ್ಲಿ ಉಳಿದು ಪುಂಡಲೀಕಜಿ ಕಾತಗಡೆ, ರಾಮಚಂದ್ರ ವಡವಿ, ದಾದಾ ಕಾಳೆ ಮೊದಲಾದವರೊಡನೆ ಹುದಲಿ ಭಾಗವನ್ನು ತಮ್ಮ ಕಾರ್ಯಕ್ಷೇತ್ರವನ್ನಾಗಿ ಮಾಡಿಕೊಂಡಿದ್ದರು.

ಅನನುಭವದಿಂದಾಗಿ ಬಹಳಷ್ಟು ಆರ್ಥಿಕ ನಷ್ಟವನ್ನೂ ಸಾಲವನ್ನೂ ಮಾಡಿಕೊಳ್ಳಲು ಕಾರಣಭೂತವಾದದ್ದು ನನ್ನ ಆಯುಷ್ಯದಲ್ಲಿ ಒಂದೇ ಒಂದು ವ್ಯವಹಾರ–ರಾಷ್ಟ್ರೀಯ ಶಾಲೆಯಲ್ಲಿರುವಾಗಲೇ ನಾನು ಎರಡು ವರ್ಷ ನಡೆಸುತ್ತಿದ್ದ "ಆತ್ಮೋದ್ಧಾರ ಗ್ರಂಥಮಾಲೆ". ಅದರಿಂದ ಆಗಿದ್ದ ಸಾಲವನ್ನು ತೀರಿಸುವ ಸಲುವಾಗಿ ಗ್ರಾಮಾಂತರ ಪ್ರದೇಶದಲ್ಲಿ ನಾನು ಮಕ್ಕಳಿಗೆ ವಿದ್ಯಾಭ್ಯಾಸ ಹೇಳಿ ಹಣಗಳಿಸಲಿಕ್ಕಾಗಿ ಎರಡು ವರ್ಷ ಕಳೆಯಬೇಕಾಯಿತು. ಇದರಿಂದಾಗಿ ಆಶ್ರಮಾದಿಗಳಿಗೆ ಹೋಗಲಿಕ್ಕೆ ನನಗೆ ಅವಕಾಶವೇ ಸಿಗಲಿಲ್ಲ. ಮುಂದೆ ಶಿರಸಿಯಲ್ಲೇ ಖಾದೀ ಭಂಡಾರ ತೆರೆದು ಎಲ್ಲ ವಿಧದ ರಾಷ್ಟ್ರೀಯ ಚಟುವಟಿಕೆಗಳನ್ನು ನಡೆಸುತ್ತಿದ್ದರಿಂದ ನನಗೆ ಹೊರಗೆ ಹೋಗುವ ವಿಚಾರವೇ ಬರಲಿಲ್ಲ. ಹೀಗಾಗಿ ನನಗೆ ನಾಯಕ ಮಾಸ್ತರರ ಭೆಟ್ಟಿಯಾದದ್ದು ಅವರೂ ನಾನು ಇಬ್ಬರೂ ೧೯೩೦ರ ಜೈಲುವಾಸ ಅನುಭವಿಸಿ ಶಿರಸಿಗೆ ಬಂದ ತರುವಾಯವೇ.

ಶಿರಸಿ, ಸಿದ್ದಾಪುರ ಹುಲ್ಲುಬನ್ನಿ ಸತ್ಯಾಗ್ರಹ, ಜಂಗಲ್ ಸತ್ಯಾಗ್ರಹಗಳ ಸಂಚಾಲಕರಾಗಿಯೂ ನಾಯಕ ಮಾಸ್ತರರು ಕೆಲಸ ನಡೆಸಿದರು. ಮುಂದೆ ಆರ್ಥಿಕ ದೃಷ್ಟಿಯಿಂದ ಕರಬಂದಿನಡಿಸಿದ ಸಿದ್ದಾಪುರ, ಶಿರಸಿ ರೈತರ ಪರಿಹಾರ ಕಾರ್ಯವನ್ನು ಸಂಘಟಿಸುವ ಕೆಲಸವನ್ನಂತೂ ನಾಯಕ ಮಾಸ್ತರರೇ ನಿರ್ವಹಿಸುತ್ತಿದ್ದರು.

ಎರಡನೆಯ ಸಲ ೧೯೩೨ರಲ್ಲಿ ಜೈಲುವಾಸ ಅನುಭವಿಸಿ ಬರುವ ಹೊತ್ತಿಗೆ ಹಲವು ಕಾರ್ಯಕರ್ತರು ಕೂಡಿ ಹಳ್ಳಿಯಲ್ಲೇ ಉಳಿದು ಹಳ್ಳಿಯವರಂತೆಯೇ ಯಾವತ್ತು ಉತ್ಪಾದಕ ಶರೀರ ಶ್ರಮದ ಧಂಧೆಗಳನ್ನೆಲ್ಲ ಮಾಡುತ್ತ ಹೋಗಬೇಕೆಂಬ ವಿಚಾರವನ್ನು ನಾಯಕ ಮಾಸ್ತರರು ನಮ್ಮೆಲ್ಲರ ಮುಂದೆ ಇಟ್ಟರು. ಅದಕ್ಕೆ ನಾನು, ಶ್ರೀಧರ ಕಿಣಿ, ಗೋಪಾಳ ಕಿಣಿ, ಗೋಪಾಳ ಹೆಗಡೆ, ರಾಮಚಂದ್ರ ಭಟ್ಟ, ನಾರಾಯಣ ಭಟ್ಟ ಮುಸ್ಕಿ, ಹುಲಿಮನಿ, ವೇಣಸೆ ಮೊದಲಾದ ೮–೧೦ ಜನರು ಸಮ್ಮತಿಸಿದೆವು. ಶಿರಸಿಯಿಂದ ೩–೪ ಮೈಲು ಅಂತರದಲ್ಲಿರುವ ಕೊರಕೋಡಿ ಎಂಬಲ್ಲಿಯ ೫ ಎಕರೆ ಪಡಭೂಮಿಯ ಸಾಗುವಳಿ ಕೈಕೊಂಡೆವು. ಹಳ್ಳಿಯನ್ನು ಸೇರುವ ಉದ್ದೇಶದಿಂದಲೇ ಖಾದಿ ಭಂಡಾರದಿಂದ ಮುಕ್ತನಾಗಿ, ನನ್ನ ಸ್ವಂತ ಸ್ವದೇಶಿ ಸ್ಟೋರನ್ನೂ ಮುಚ್ಚಿ ಬಿಟ್ಟಿದ್ದ ನಾನೇ ಈ ವ್ಯವಹಾರಕ್ಕೆ ಅವಶ್ಯ ಬಿದ್ದ ಭಂಡವಾಳ ಪೂರೈಸಿದೆನು. ೨ ವರ್ಷ ಉಳಿದು ಅಲ್ಲಿ ಒಕ್ಕಲುತನ, ಗೋಪಾಲನ, ನೂಲುವದು, ನೇಯುವದು, ಕಬ್ಬು ಬೆಳೆಸಿ ಬೆಲ್ಲಮಾಡುವದು, ಎಲ್ಲವನ್ನು

ಮಾಡಿದೆವು. ಪ್ರತಿಯೊಬ್ಬರೂ ತಮತಮಗೆ ಅನುಭವವಿದ್ದ ಧಂದೆ ಮಾಡುತ್ತಿದ್ದರು. ಇಲ್ಲವೇ ಇತರ ಧಂದೆಗಳನ್ನು ಕಲಿತುಕೊಳ್ಳುತ್ತಿದ್ದರು. ನಾಯಕ ಮಾಸ್ತರರು ಮಾತ್ರ ಹೆಚ್ಚಾಗಿ ಅಡಿಗೆಯ ಕೆಲಸವನ್ನೇ ವಹಿಸಿಕೊಂಡಿದ್ದರು.

ಇದೇ ಕಾಲದಲ್ಲಿ ಅವರಿಗೆ ಮೂಲವ್ಯಾಧಿಯ ಬಾಧೆ ಹೆಚ್ಚಾಗಿ ಮುಂಬಯಿಗೆ ಕರೆದೊಯ್ದು ಮೊದಲನೆ ಸಲ ಆಪರೇಷನ್ ಮಾಡಿಸಬೇಕಾಯಿತು. ಗಂಗಾಧರ ಶಾನಭಾಗ ಹಾಗೂ ಗುಲವಾಡಿಯವರು ಆ ಜವಾಬ್ದಾರಿ ನಿರ್ವಹಿಸಿದರು.

ಈ ಸ್ವಾವಲಂಬೀ ಆಶ್ರಮವು ಎರಡು ವರ್ಷ ನಡೆಯಿತು. ಅನೇಕ ಕಷ್ಟನಷ್ಟಗಳನ್ನು ಎದುರಿಸಬೇಕಾಗಿ ಬರುತ್ತಿದ್ದರೂ ಹೊಸ ಹೊಸ ಅನುಭವ ಬರುತ್ತಿದ್ದುದರಿಂದ ಆನಂದದಲ್ಲಿಯೇ ಸಾಗಿತು. ಆರ್ಥಿಕ ದೃಷ್ಟಿಯಿಂದಲೂ ಹಾನಿ ತಟ್ಟಲಿಲ್ಲ. ಬಹುತರ ಎಲ್ಲವರ ಆರೋಗ್ಯವೂ ಕುಸಿಯಹತ್ತಿತ್ತು. ನೆರೆಯ ಪ್ರದೇಶದಲ್ಲೆಲ್ಲ ಮೈಲೀ ಬೇನೆಯ ಹಾವಳಿಯೂ ಹಬ್ಬಿತ್ತು. ಇದೇ ಜೀವನವನ್ನು ಮುಂದುವರಿಸಬೇಕೆಂದು ನಾಯಕ ಮಾಸ್ತರರ ಅಪೇಕ್ಷೆ ಇತ್ತು. ಆದರೆ ಜನಸಂಪರ್ಕವೇ ಇಲ್ಲದ ಆ ಕುಗ್ರಾಮದಲ್ಲಿ ಉಳಿಯುವದು ಬಹಳ ಜನರಿಗೆ ಹಿಡಿಸಲಿಲ್ಲ. ಹೀಗಾಗಿ ಈ ಅಧ್ಯಾಯವು ಅಲ್ಲಿಗೇ ಮುಗಿಯಿತು,

ಅಲ್ಲಿಂದ ನಾನು ನೇರವಾಗಿ ವರ್ಧಾಮಗನವಾಡಿ ಸೇವಾಗ್ರಾಮ ಆಶ್ರಮಗಳಿಗೆ ಹೋದೆ. ಮತ್ತು ತಿರುಗಿ ಬಂದು ಬೈಲು ಸೀಮೆಯ ಒಕ್ಕಲುತನದ ಅನುಭವ ಪಡೆಯುವ ಹಾಗೂ ನೇಯ್ಗೆಯನ್ನು ಅಭ್ಯಾಸ ಮಾಡುವ ದೃಷ್ಟಿಯಿಂದ ಹೊಸರಿತ್ತಿ, ಗುತ್ತಲ ಮೊದಲಾದ ಭಾಗದಲ್ಲಿಯೇ ಉಳಿದೆ.

ಅನಂತರ ಕಾಂಗ್ರೆಸ್ ಮಂತ್ರಿ ಮಂಡಳ ರಚನೆಯಾಗಿ ರಾಷ್ಟ್ರ ಭಾಷಾ ಹಿಂದೀ ಪ್ರಚಾರ, ವ್ಹೊಲಂಟರಿ ಶಾಲೆಗಳನ್ನು ಸ್ಥಾಪಿಸಿ ಸಾಕ್ಷರತಾ ಪ್ರಚಾರ ಮೊದಲಾದ ಕೆಲಸಗಳಿಗೆ ಒಳ್ಳೇ ಅವಕಾಶ ಸಿಗುತ್ತಿರುವದು ಕಂಡು ನಾಯಕ ಮಾಸ್ತರರು ನನಗೆ ಆಗ್ರಹದ ಪತ್ರ ಬರೆದು ಶಿರಸಿಗೆ ಕರೆಸಿಕೊಂಡರು. ಆಗ ನಾಯಕ ಮಾಸ್ತರರು ಜಿಲ್ಲಾ ಕಮಿಟಿಯ ಅಧ್ಯಕ್ಷರಾಗಿಯೋ, ಕಾರ್ಯದರ್ಶಿಯಾಗಿಯೋ ಎಲ್ಲ ಜವಾಬುದಾರಿ ಹೊತ್ತು ಕೆಲಸ ಮಾಡುತ್ತಿದ್ದರು. ಅದೇ ಹೊತ್ತಿನಲ್ಲಿ ಕಾಂಗ್ರೆಸ್ ವತಿಯಿಂದ ಜಿಲ್ಲಾ ಲೋಕಲ್ ಬೋರ್ಡ್ ಚುನಾವಣೆಗೆ ಉಮೇದ್ವಾರರನ್ನು ನಿಲ್ಲಿಸುವದೂ ನಡೆಯಿತು. ಕಾಂಗ್ರೆಸ್ ಹೆಸರಿನ ಒಂದು ವಾರ ಪತ್ರಿಕೆಯನ್ನೂ ಹೊರಡಿಸುತ್ತಿತ್ತು. ಹಲವಾರು ಕಾಂಗ್ರೆಸ್ ರಾಜಕೀಯ ಚಟುವಟಿಕೆಗಳಲ್ಲಿ ನನ್ನನ್ನು ಸೇರಿಸಲು ನಾಯಕ ಮಾಸ್ತರರು ಪ್ರಯತ್ನಪಟ್ಟರು. ಆದರೆ ಕೊನೆಯವರೆಗೂ ಶೈಕ್ಷಣಿಕ ಕಾರ್ಯಕ್ಷೇತ್ರಕ್ಕಷ್ಟೇ ನಾನು ಅಂಟಿಕೊಂಡು ಉಳಿದೆ.

ಮುಂದೆ ವೈಯುಕ್ತಿಕ ಹಾಗೂ ಸಾಮೂಹಿಕ ಚಲೇಜಾವ ಆಂದೋಲನದ ಅಂಗವಾಗಿ ಜೈಲುಜೀವನವನ್ನು ಮುಗಿಸಿ ಬಂದೊಡನೆ ಉ. ಕ. ಜಿಲ್ಲಾ ಗ್ರಾಮ ಸೇವಾಸಮಿತಿ ಸ್ಥಾಪನೆ ಆಗಿ ನಾಯಕ ಮಾಸ್ತರರು ಅಂಕೋಲೆಯಲ್ಲಿ ಇರಹತ್ತಿದರು. ಆಗಲೂ ಜಿಲ್ಲಾ ಕಾಂಗ್ರೆಸ್ ಕಮಿಟಿಯ ಹೆಚ್ಚಿನ ಜವಾಬುದಾರಿಯನ್ನು ಹೊನ್ನಾವರದ ಶಾಸ್ತ್ರೀ ವಕೀಲರ ಸಹಾಯದಿಂದ ಅವರೇ ನಿರ್ವಹಿಸುತ್ತಿದ್ದರು. ಆದರೆ ಮುಂದೆ ಸ್ವರಾಜ್ಯ ಸಿಕ್ಕು ಕಾಂಗ್ರೆಸ್ ಕಮಿಟಿಯಲ್ಲಿ ಮೇಲಾಟ, ಒಳ ಪಂಗಡ, ಕಾರಸ್ಥಾನ ಮೊದಲಾದ ಅನಿಷ್ಟ ಪ್ರವೃತ್ತಿಗಳು ಬಲವಾಗಿ ಬೇರುಬಿಡಹತ್ತಿರುವುದು ಕಂಡು ನಾಯಕ ಮಾಸ್ತರರು ಕಾಂಗ್ರೆಸ್ ಕಮಿಟಿಯೊಳಗಿಂದ ಸಂಪೂರ್ಣ ಅಲಿಪ್ತರಾಗಿ ಬಿಟ್ಟರು.

ಗ್ರಾಮಸೇವಾ ಸಮಿತಿಯಲ್ಲಿ ಭವಾನಿಬಾಯಿ ಕಾನಗೋಡ ಇವರ ಜತೆಗೂಡಿ ಹಳಕಾರ, ಬಗ್ಗೋಣ, ಗುಡೆಅಂಗಡಿ, ಬಾಡ, ಕಾಗಾಲ, ಹೆಗಡೆ ಮೊದಲಾದ ಕಡೆಗಳಲ್ಲಿ ನೂಲುವ ವರ್ಗಗಳನ್ನು ನಡಿಸಿ ನೂಲುವ ಕೇಂದ್ರಗಳ ಸಂಘಟನೆ ಮಾಡಿದ್ದಲ್ಲದೆ ಕೊನೆಗೆ ಕೆಲವು ಕಾಲ ಸಮಿತಿಯ ಕಾರ್ಯದರ್ಶಿಯಾಗಿಯೂ ಕೆಲಸ ಮಾಡಿದೆ. ಆದರೆ ಸಾಲ, ಹಣದ ವಿನಿಯೋಗ ಮೊದಲಾದ ಕೆಲವು ಆರ್ಥಿಕ ವ್ಯವಹಾರಗಳು ನನಗೆ ಹಿಡಿಸದ್ದರಿಂದ ನಾನು ಸಮಿತಿಗೆ ರಾಜೀನಾಮೆ ಕೊಟ್ಟು ಬಂಕಿಕೊಡ್ಲ, ಗಂಗಾವಳಿ ಮೊದಲಾದ ಗ್ರಾಮಾಂತರ ಪ್ರವೇಶದಲ್ಲಿದ್ದು ವ್ಯಕ್ತಿಗತವಾಗಿ ನಿರೀಕ್ಷಣೆ, ಅಭ್ಯಾಸ, ಜನಸೇವೆ ಮಾಡುತ್ತ ಉಳಿದೆ.

ಆದರೆ ಮುಂದೆ ಮುಂಬಯಿ ಸರಕಾರವು ಪ್ರತಿ ಜಿಲ್ಲೆಯಲ್ಲಿಯೂ ಸರ್ವೋದಯ ಯೋಜನೆಯನ್ನು ನಡಿಸುವ ವಿಚಾರ ಮಾಡಹತ್ತಿದೊಡನೆ ನಾಯಕ ಮಾಸ್ತರರು ಪುನಃ ನನ್ನನ್ನು ಆಗ್ರಹ ಪೂರ್ವಕ ಕರೆಸಿಕೊಂಡು ಅಂಕೋಲೆ ಭಾಗದಲ್ಲಿ ಸರ್ವೋದಯ ಯೋಜನೆಯ ಸಂಚಾಲಕನಾಗಿ ಕೆಲಸ ಮಾಡಲು ಮನ ಒಲಿಸಿದರು. ಹಾಗೂ ಕಾರ್ಯಕರ್ತರ ತರಬೇತಿ ಮೊದಲಾದ ಕೆಲಸಗಳ ಜವಾಬುದಾರಿ ಸ್ವತಃ ಹೊತ್ತರು.

ಆದರೆ ಮುಂದೆ ಅವರು ತಾವೂ ಗ್ರಾಮಸೇವಾ ಸಮಿತಿಯ ಜವಾಬುದಾರಿಗಳಿಂದ ಮುಕ್ತರಾಗಿ ಮಾದನಗೇರಿಯಲ್ಲಿ ಭಗಿನಿ ಅಮರಾವತಿ ಪೈ ಇವರ ಜತೆಯಲ್ಲಿ ವ್ಯಕ್ತಿಗತವಾಗಿ ಶ್ರಮಿಸಿ ಜೀವನ ಮತ್ತು ಸಮಾಜ ಸೇವಾಕಾರ್ಯ ಮಾಡಹತ್ತಿದರು. ಅದೇ ಕಾಲದಲ್ಲಿ ಕರ್ನಾಟಕ ಗಾಂಧೀ ಸ್ಮಾರಕ ನಿಧಿಯ ಸಂಚಾಲಕರಾಗಿ ಕೆಲಸ ಮಾಡುತ್ತಿದರು.

ಸರಕಾರಿ ಸರ್ವೋದಯ ಯೋಜನೆಯ ಜತೆಯಲ್ಲಿಯೇ ನಾನು ಸರ್ವೋದಯ ಪುಸ್ತಕ ಮಾಲೆ, ಭೂದಾನ ಪಾಕ್ಷಿಕ ಪತ್ರಿಕೆ ಹಾಗೂ ಸಾಹಿತ್ಯ ಪ್ರಕಾಶನ

ಮಾಡುತ್ತಲಿದ್ದೆ. ಮತ್ತು ಸಂಪೂರ್ಣವಾಗಿ ಭೂದಾನ ಆಂದೋಲನದಲ್ಲಿ ಸೇರುವ ಉದ್ದೇಶದಿಂದ ೧೯೫೭ರಲ್ಲಿ ಸರಕಾರಿ ಸರ್ವೋದಯ ಯೋಜನೆಗೆ ರಾಜೀನಾಮೆ ಕೊಟ್ಟು ಹೊರಬಿದ್ದೆ. ಅದೇ ಕಾಲಕ್ಕೆ ಕರ್ನಾಟಕದಲ್ಲಿ ವಿನೋಬಾರ ಪಾದಯಾತ್ರೆ ಆರಂಭವಾಯಿತು. ಅವರ ಪ್ರವಚನಗಳ ಅನುವಾದಕರಾಗಿ ನಾಯಕ ಮಾಸ್ತರರು ಬಹು ಭಾಗದಲ್ಲಿ ಅವರ ಜತೆಯಲ್ಲಿಯೇ ಸಂಚರಿಸಿದರು.

ಮುಂದೆ ಸರ್ವಸೇವಾ ಸಂಘವು ನಿಧಿ ಮುಕ್ತಿ ಹಾಗೂ ಶಾಸನ ಮುಕ್ತಿಯ ನಿರ್ಣಯ ಸ್ವೀಕರಿಸಿದ ತರುವಾಯ ನಾಯಕ ಮಾಸ್ತರರು ಗಾಂಧೀ ನಿಧಿಯ ಸಂಚಾಲಕತ್ವದಿಂದಲೂ ಮುಕ್ತರಾದರು. ವ್ಯಕ್ತಿಶಃ ಸರ್ವೋದಯ ಕಾರ್ಯಕರ್ತರಿಗೆ ಮಾರ್ಗದರ್ಶನ ಮಾಡುವದು, ಪಾದಯಾತ್ರೆ, ಶಿಬಿರಗಳಲ್ಲಿ ಭಾಗ ತೆಗೆದುಕೊಳ್ಳು ವದು ಮೊದಲಾದ ಕೆಲಸ ಮಾಡುತ್ತಲೇ ಉಳಿದರು.

ಮೈಸೂರು ಸರಕಾರವು ಪಾನ ನಿರೋಧವನ್ನು ರದ್ದು ಪಡಿಸಬಯಸುತ್ತಿರುವದು ತಿಳಿದೊಡನೆ ನಾಯಕ ಮಾಸ್ತರರು ೧೪ ದಿನಗಳ ಉಪವಾಸ ಮಾಡಿ ಜನಜಾಗೃತಿ ಮಾಡಿದರು.

ಕಾಕಾ ಕಾಲೇಲಕರರೊಂದಿಗೆ ನಾಯಕ ಮಾಸ್ತರರದು ನಿಕಟ ಸಂಪರ್ಕವಿತ್ತು. ಮತ್ತು ಅವರ ಪ್ರೇರಣೆಯಿಂದಲೇ ತಮ್ಮ ಕೊನೆಯ ದಿನಗಳಲ್ಲಿ ಹಲವು ಅಮೂಲ್ಯ ಪುಸ್ತಕಗಳನ್ನು ಬರೆದು ಪ್ರಕಟಿಸಿದರು.

ಇನ್ನು ಅವರ ಗುಣ ಧರ್ಮ, ಸ್ವಭಾವ, ಜೀವನ ಕ್ರಮಗಳ ಕುರಿತು ನಾಲ್ಕು ಮಾತು. ಆರ್ಥಿಕ ವ್ಯವಹಾರದಲ್ಲಿ ಅವರು ಮೊದಲಿನಿಂದಲೂ ಅಸಂಗ್ರಹ ವೃತ್ತಿ ಯವರು. ನೌಕರಿಯಲ್ಲಿದ್ದಾಗ ಹೊಟ್ಟೆ ಬಟ್ಟೆಯ ಖರ್ಚು ಕಳೆದು ಮಿಕ್ಕದ್ದನ್ನೆಲ್ಲ ಪುಸ್ತಕ ಕೊಳ್ಳಲಿಕ್ಕೆ ವಿನಿಯೋಗಿಸಿ ಬಿಡುತ್ತಿದ್ದರು. ರಾಷ್ಟ್ರೀಯ ಶಾಲೆಗೆ ಸೇರಿದಾಗ ತಿಂಗಳಿಗೆ ೧೫ ರೂಪಾಯಿ ಮಾತ್ರ ದೊರೆಯುತ್ತಿತ್ತು. ಮುಂದೆ ಗಾಂಧೀ ಸೇವಾ ಸಂಘದ ಸದಸ್ಯರಾದ ಮೇಲೆಯೂ ಸಂಘದಿಂದ ತಿಂಗಳಿಗೆ ೨೫ ರೂಪಾಯಿ ಮಾತ್ರ ತೆಗೆದುಕೊಳ್ಳುತ್ತಿದ್ದರು. ಮುಂದೆ ನಿಧಿ ಮುಕ್ತರಾದ ಮೇಲಂತೂ ಸಂಪೂರ್ಣವಾಗಿ ಜನಾಧಾರಿತರಾಗಿದ್ದರು. ಮಿತ್ರರಿಂದ ಅನಿಯಮಿತವಾಗಿ ಬರುವ ಅಲ್ಪ ನಿಧಿಯನ್ನೇ ಅವಲಂಬಿಸಿದ್ದರು. ಸಾಹಿತ್ಯ ಮಾರಾಟದಿಂದ ಕೆಲವು ಕಮಿಷನ್ನು ಸಿಗುತ್ತಿತ್ತು. ಆದರೆ ತಾವು ಬರೆದ ಪುಸ್ತಕಗಳ ಬಗ್ಗೆ ಪ್ರಕಾಶಕರಿಂದ ಸಂಭಾವನೆ ಪಡೆಯಲು ಸಹ ಒಪ್ಪುತ್ತಿರಲಿಲ್ಲ. ಹೀಗಾಗಿ ತೀರಾ ಜಿಪುಣತನದಲ್ಲಿ ಅವರ ಜೀವನ ಸಾಗುತ್ತಿತ್ತು. ಈ ಪರಿಸ್ಥಿತಿಯನ್ನು ಅರಿತ ಅವರ ಸಹ ಕಾರ್ಯಕರ್ತರೇ ಅವರ ಜೀವನವು ಸುಗಮ ವಾಗಿ ಸಾಗುತ್ತಿರುವಂತೆ ನೋಡಿಕೊಳ್ಳಬೇಕಾಗುತ್ತಿತ್ತು.

ಮೂಲವ್ಯಾಧಿಯಿಂದಾಗಿ ಅವರ ಆರೋಗ್ಯವು ಸದಾ ಕಾಲವೂ ತೊಂದರೆ ಕೊಡುತ್ತಿತ್ತು. ರಕ್ತ ಬೀಳುತ್ತಿರುತ್ತಿತ್ತು. ಖಾರ ತಿನ್ನುವದೇ ಅವರಿಂದ ಆಗುತ್ತಿರಲಿಲ್ಲ. ಉಪ್ಪನ್ನು ಪೂರ್ಣವಾಗಿ ಬಿಟ್ಟಿದ್ದರು. ಈ ಶಾರೀರಿಕ ದೌರ್ಬಲ್ಯದಿಂದಾಗಿ ಶೀಘ್ರ ಕೋಪಿಗಳೂ ಸಿಡುಕಿನ ಸ್ವಭಾವದವರೂ ಆಗಿದ್ದರು. ಮರುಕ್ಷಣವೇ ಅವರಿಗೆ ಪಶ್ಚಾತ್ತಾಪವೂ ಆಗುತ್ತಿತ್ತು. ಬಿಚ್ಚು ಮನಸ್ಸಿನಿಂದ ಕ್ಷಮಾಯಾಚನೆಯನ್ನು ಮಾಡುತ್ತಿದ್ದರು. ಅವರಿಗೆ ನಿರ್ದಿಷ್ಟ ವೇಳೆಗೆ ಸರಿಯಾಗಿ ನಿರ್ದಿಷ್ಟ ಆಹಾರವೇ ಬೇಕಾಗುತ್ತಿತ್ತು. ಹೊರಗೆ ಹೋದಾಗ ಇದು ಸಾಧ್ಯವಾಗದೆ ತುಂಬಾ ಕಷ್ಟ ಪಡುತ್ತಿದ್ದರು. ಮತ್ತು ಅದರಿಂದ ಅವರ ಆರೋಗ್ಯವೂ ಕೆಡುತ್ತಿತ್ತು. ಇದರಿಂದಾಗಿಯೇ ಕೊನೆಕೊನೆಯಲ್ಲಿ ಅವರು ಪ್ರವಾಸ ಮಾಡುವದನ್ನೇ ಬಿಟ್ಟಿದ್ದರು.

ಅವರು ತುಂಬಾ ಆಧ್ಯಾತ್ಮ ವೃತ್ತಿಯವರು. ಸಾಧಕರೂ ನಿಗ್ರಹಿಗಳೂ ತಪಸ್ವಿಗಳೂ ಆಗಿದ್ದರೂ ದಿನನಿತ್ಯದ ಬಹು ಭಾಗವನ್ನು ಅವರಿಗೆ ಶರೀರ ಮತ್ತು ಆರೋಗ್ಯದ ಚಿಂತನ ಚರ್ಚೆಗಳಲ್ಲಿಯೇ ಕಳೆಯಬೇಕಾಗುತ್ತಿತ್ತು.

ಅವರ ಮುಖದ ಮೇಲಿನ ತೇಜ ಮತ್ತು ಅವರಲ್ಲಿಯ ಆಧ್ಯಾತ್ಮಿಕ ವೃತ್ತಿಗಳಿಂದಾಗಿ ಜನರ ಮೇಲೆ ಅವರ ಪ್ರಭಾವ ಬೀಳುತ್ತಿತ್ತು. ಶಾರೀರಿಕ ದೌರ್ಬಲ್ಯ, ಅನಾರೋಗ್ಯ, ಕುಶಲಕೈಗಾರಿಕೆಗಳ ಅಜ್ಞಾನ ಮೊದಲಾದವುಗಳಿಂದ ಅವರ ಜೀವನವು ಸದಾ ಕಾಲವೂ ಪರಾಧೀನವಾಗಿರುತ್ತಿತ್ತು. ಮತ್ತು ಅದರಿಂದಲೂ ಅವರಿಗೆ ಅನಾಯಾಸವಾಗಿ ಜನಸಂಪರ್ಕ ಸಾಧಿಸುತ್ತಿತ್ತು. ಜನಸಂಗ್ರಹ ವೃತ್ತಿಯೂ ಅವರಲ್ಲಿತ್ತು. ಸಾಧ್ಯವಿರುವ ಮಟ್ಟಿಗೆ ಜನರ ಅನುವು ಆಪತ್ತುಗಳನ್ನು ಕೇಳಿಕೊಂಡು ಪರಿಹಾರ ಸೂಚಿಸುತ್ತಿದ್ದರು. ಸಹಾನುಭೂತಿಯನ್ನಂತೂ ವ್ಯಕ್ತಪಡಿಸುತ್ತಿದ್ದರು.

ಅವರ ಸೇವೆಗಾಗಿ ಅವರ ಜತೆಯಲ್ಲಿ ಯಾರಾದರೂ ಇರಲೇಬೇಕಾಗುತ್ತಿತ್ತು. ಆದರೆ ಅವರ ಸೇವೆ ಮಾಡುವುದು ಸರ್ವಸಾಮಾನ್ಯರಿಗೆ ಸಾಧಿಸುತ್ತಿರಲಿಲ್ಲ. ಆದರೆ ನಿಷ್ಠಾವಂತ ಭಕ್ತ ಜನರ ಕೊರತೆ ಅವರಿಗೆ ಎಂದೂ ಅನಿಸಲಿಲ್ಲ. ಯಾಕೆಂದರೆ ಅವರ ಸಹವಾಸದಲ್ಲಿ ಅನುಭವ ಜ್ಞಾನದ ಹಾಗೂ ಸದಾಚಾರದ ಪಾಠಗಳು ಅನಾಯಾಸವಾಗಿ ಲಭಿಸುತ್ತಿದ್ದವು. ಹೀಗಾದ್ದರಿಂದ ಅವರ ಸೇವೆ ಮಾಡುವವರಲ್ಲಿ ಭಯಭಕ್ತಿಗಳೆರಡೂ ಸದಾಕಾಲವೂ ಇದ್ದೇ ಇರುತ್ತಿದ್ದವು.

ಅವರ ನಿಕಟವರ್ತಿಗಳಲ್ಲಿ ಹಲವರು ಅವರ ಕಡೆಯಿಂದ ಪತ್ರವ್ಯವಹಾರದ ಮುಖಾಂತರವೇ ಮಾರ್ಗದರ್ಶನ ಪಡೆಯುತ್ತಿದ್ದರು. ಮತ್ತು ಇಂಥ ಪತ್ರವ್ಯವಹಾರವು ಅವರ ಸರ್ವೋತ್ಕೃಷ್ಟ ಸಾಹಿತ್ಯವಾಗಿರುತ್ತಿತ್ತು. ಮಾತಿಗಿಂತ ಅವರ ಬರವಣಿಗೆಯು

ಸವಿಸ್ತರವೂ ಸಮರ್ಪಕವೂ ಹೆಚ್ಚು ಪ್ರಭಾವಶಾಲಿಯೂ ಆಗಿರುತ್ತಿತ್ತು. ಬರೆಯುವುದರಲ್ಲಿ ಅವರಿಗೆ ಬೇಸರವೆಂಬುದೇ ಇರಲಿಲ್ಲ. ಆದರೆ ಪತ್ರವ್ಯವಹಾರದಲ್ಲಿ ಸಾಕಷ್ಟು ಕಾಗದವನ್ನ ಉಪಯೋಗಿಸಲು ಸಹ ಅವರು ತುಂಬಾ ಜಿಪುಣತನ ಮಾಡುತ್ತಿದ್ದರಿಂದ ಅವರ ಪತ್ರವ್ಯವಹಾರ ಓದಿಕೊಳ್ಳುವವರಿಗೇ ಬೇಸರ ಬರುವಂತೆ ಆಗುತ್ತಿತ್ತು. ಅಂತೂ ಅವರ ಈ ಪತ್ರವ್ಯವಹಾರವನ್ನು ಸಂಗ್ರಹಿಸಿ ಸಂಪಾದಿಸಿ ಪ್ರಕಟಿಸಿದರೆ ಒಂದು ಸರ್ವೋತ್ಕೃಷ್ಟ ಸಾಹಿತ್ಯ ನಿರ್ಮಿತಿ ಆಗಬಹುದು.
ಆಳವಾದ ಅಭ್ಯಾಸ, ಸೂಕ್ಷ್ಮವಾದ ವಿಶ್ಲೇಷಣೆ, ಸುಸ್ಪಷ್ಟವಾದ ವಿವೇಚನೆಗಳಿಂದಾಗಿ ನಾಯಕ ಮಾಸ್ತರರ ಅಭಿಪ್ರಾಯವು ಯಾವಾಗಲು ಚಿಂತನಶೀಲರಿಂದಲೂ ಮಾನ್ಯತೆ ಪಡೆಯುತ್ತಿತ್ತು. ಅವರ ಶಿಕ್ಷಣ ಪದ್ಧತಿಯೂ ಸಹ ಅಷ್ಟೇ ವಿವರ ಪೂರ್ಣವಾಗಿರುತ್ತಿತ್ತು. ವಿದಾರ್ಥಿಗಳು ಮಂತ್ರಮುಗ್ಧರಾಗಿ ಆಲಿಸುತ್ತಿದ್ದರು.

ಅವರ ತರ್ಕಶಕ್ತಿ, ತೀಕ್ಷ್ಣದೃಷ್ಟಿ ಸೂಕ್ಷ್ಮ ಪ್ರಶ್ನೆಗಳಮುಂದೆ ತರಬೇತಿ ಹೊಂದಿದ ಸುಳ್ಳುಗಾರರದೂ ಸಹ ನಡೆಯುತ್ತಿರಲಿಲ್ಲ. ಅಪ್ರಾಮಾಣಿಕತನವನ್ನು ಅವರಿಂದ ಎಂದೂ ಸಹಿಸಲಾಗುತ್ತಿರಲಿಲ್ಲ. ಯಾರೊಬ್ಬರ ಬಗ್ಗೆ ಅವರ ಮನಸ್ಸು ಒಮ್ಮೆ ದೂಷಿತವಾಯಿತೆಂದರೆ ದೀರ್ಘಕಾಲ ಪರಿಯಂತರವೂ ಅದು ಹಾಗೇ ಇರುತ್ತಿತ್ತು. ಅದರಂತೆ ಅವರ ಪ್ರೇಮ ವಿಶ್ವಾಸಗಳೂ ಸಹ ಕೆಲಮಟ್ಟಿಗೆ ಅಂಧವಾಗಿಯೇ ಇರುತ್ತಿದ್ದವು.

ಅವರು ಅವಸರದಿಂದ ಯಾವುದೇ ಕೆಲಸಕ್ಕೆ ದುಡುಕುತ್ತಿರಲಿಲ್ಲ. ಸಾಧಕ ಭಾಧಕಗಳನ್ನೆಲ್ಲಾ ವಿಚಾರಿಸಿ ಪರಿಶೀಲಿಸಿ, ತೂಗಿ ತೂಗಿ ನೋಡಿ ಕಾಲಿಡುತ್ತಿದ್ದರು. ಹೀಗಾಗಿ ತಪ್ಪು ಹೆಜ್ಜೆ ಬೀಳುವ ಸಂಭವ ಕಡಿದೆಯಾಗುತ್ತಿತ್ತು.

# ಗಾಂಧೀಮಾರ್ಗಸಾಧಕ

## ರಖಲಚಂದ್ರ ದೇ

೧೯೩೦ರಲ್ಲಿ ನಾನು ಕಾರವಾರ ಜೈಲಿನಲ್ಲಿದ್ದೆ. ಆಗ ಭಾರತದಲ್ಲೆಲ್ಲ ಕಾಯಿದೆ ಭಂಗ ಚಳವಳಿ ನಡೆದಿತ್ತು. ಅದರಲ್ಲಿ ಕರ್ನಾಟಕದ ಜನತೆಯೂ ಸೇರಿತ್ತು. ಜೈಲಿನಲ್ಲಿ ತುಂಬಲ್ಪಟ್ಟ ಹಣಮಂತರಾವ್ ಕೌಜಲಗಿ, ಹೊದಿಕೇಜಿ, ಮಾಂಜರೇಕರ, ಹರಿ ಪೈ, ಶಾಮರಾವ ಶೆಣೈ, ಹಳದೀಪುರಕರ ಮೊದಲಾದ ಕೆಲ ಪ್ರಮುಖರ ಪರಿಚಯ ನನಗೆ ಆಯಿತು. ಆದರೆ ನಾಯಕ ಮಾಸ್ತರರ ಪರಿಚಯ ಮಾತ್ರ ಬೇರೊಂದು ವಿಶೇಷ ರೀತಿಯಲ್ಲೇ ಆಯಿತು. ನಾನೊಬ್ಬ ಹಿಂಸಾವಾದಿ ಬಂಗಾಲಿ ಕ್ರಾಂತಿಕಾರನಾಗಿದ್ದೆ. ಪ್ರತಿಯೊಂದು ಸಮಸ್ಯೆಯನ್ನೂ ಹಿಂಸೆಯಿಂದ ಬಿಡಿಸುವದೇ ನಮ್ಮ ಧರ್ಮವಿದ್ದಂತಿತ್ತು. ಜೈಲಿನಲ್ಲಿ ರಹಿಮಾನಖಾನನೆಂಬ ಅತಿ ಬಡಿವ ಮತ್ತು ದುರ್ಬಲ ಜಮಾದಾರನಿದ್ದ. ಅವನು ಒಬ್ಬ ಹುಡುಗನಿಗೆ ಹೊಡೆದಿದ್ದ. ಅದನ್ನು ನೋಡಿದೊಡನೆಯೇ ನಾನು ಸಿಟ್ಟಿನಿಂದ ಒಮ್ಮೆಲೇ ಅವನ ಮೈಮೇಲೆ ಜಿಗಿದೆ. ಮತ್ತು ರಹಿಮಾನಖಾನನನ್ನು ದೂಡಿ ಕೆಡಹಿದೆ.

ಮರುದಿನ ಮುಂಜಾನೆ ನಾಯಕ ಮಾಸ್ತರರು ನನ್ನ ಖೋಲಿಗೇ ಬಂದರು. ನಸುನಗುತ್ತ ಮಾತು ಪ್ರಾರಂಭಿಸಿ ಹಿಂದಿನ ದಿನದ ಘಟನೆಯ ಕುರಿತು ಹೇಳಿದರು. "ಹೊಡೆಯುವದು ಸರಿಯಲ್ಲ. ಎರಡನೆಯವರ ತಪ್ಪು ಕಂಡೊಡನೆ ನಾವು ನ್ಯಾಯದ ಅವತಾರವೆಂದು ಭಾವಿಸುವದು ತಪ್ಪು. ಅಜ್ಞರಾದ ಬಡಪಾಯಿಗಳಿಂದಲೂ ಪರಿಸ್ಥಿತಿಯ ಮೂಲಕ ಅನಿವಾರ್ಯವಾಗಿ ಎಷ್ಟೋ ತಪ್ಪು ಆಗುತ್ತಿರುತ್ತವೆ. ಅಷ್ಟು ಮಾತ್ರಕ್ಕೆ ಅವರು ದುಷ್ಟರು ಎಂದು ತಿಳಿಯಬಾರದು. ಯಾಕೆಂದರೆ ನಾವು ಸಹ ಪರಿಸ್ಥಿತಿಯಿಂದಾಗಿ ಎಷ್ಟೋ ತಪ್ಪು ಮಾಡುತ್ತಿರುತ್ತೇವೆ. ಮತ್ತು ಮೇಲಾಗಿ ಯುಕ್ತಿವಾದಗಳಿಂದ ಅವುಗಳ ಸಮರ್ಥನೆ ಮಾಡಿಕೊಳ್ಳುತ್ತೇವೆ. ಆದರೆ ಬಡಪಾಯಿಗಳ ಹತ್ತಿರ ಅಂಥ ಬುದ್ಧಿಮತ್ತೆಯೂ ಇರುತ್ತಿರುವದಿಲ್ಲ. ಯುಕ್ತಿವಾದಗಳೂ ಇರುತ್ತಿರುವದಿಲ್ಲ. ಎಷ್ಟೆಂದರೂ ಅವರೂ ನಮ್ಮ ಬಾಂಧವರೇ ಅಲ್ಲವೇ?" ಎಂದು ಮುಂತಾಗಿ ಹೇಳಿದರು.

ಆಗಲೇ ನನಗೆ ವಿವೇಕಾನಂದರ ಈ ಕೆಳಗಿನ ಉದ್ಗಾರ ಎಷ್ಟೋ ಸಾರಿ ಪಾರಾಯಣ ಮಾಡಿ ಕಣ್ಣೀರು ಸುರಿಸಹಚ್ಚಿದ್ದು ನೆನಪಿಗೆ ಬಂತು. "ಅಜ್ಞ, ಮೂರ್ಖ, ದರಿದ್ರ, ಮೋಚಿ, ಚಮಗಾರ, ಬಂಗೀ ಜನರೆಲ್ಲ ನಮ್ಮದೇ ರಕ್ತ,

ನಮ್ಮದೇ ಬಾಂಧವರು" ಎಂಬ ವಾಕ್ಯವದು! ಆದರೆ ರಾಜಕಾರಣದಲ್ಲಿ, ಕ್ರಾಂತಿಯಲ್ಲಿ ಸಹ ಈ ಭಾವನೆಯು ಸರಿಹೊಂದಬಹುದೇ? ಈ ಮೊದಲು ಇಂಥ ಎಷ್ಟೋ ಯುಕ್ತಿವಾದಗಳನ್ನು ನಾನು ನನ್ನ ತೇಜಸ್ವೀ ತರ್ಕಗಳಿಂದ ಖಂಡಿಸಿದ್ದೆ. ಆದರೆ ಇಂದು ಮಾತ್ರ ಏಕೋ ಅದೆಲ್ಲ ಮರೆತುಬಿಟ್ಟೆ! ನನ್ನ ಬಾಯಿಯೇ ಬಂದಾಯಿತು. ಯಾಕೆಂದರೆ ಅಂದು ನನಗೆ ಎದುರಾದುದು ಕೇವಲ ಒಂದು ಯುಕ್ತಿವಾದವಾಗಿರಲಿಲ್ಲ. ಅದರ ಹಿಂದೆ ಯಾವುದೋ ಒಂದು (ನೈತಿಕ) ಶಕ್ತಿ ಇತ್ತು. ರಾಜಕೀಯ ಭಾಷೆಯಲ್ಲಾದರೋ ಕ್ರೋಧ, ತಿರಸ್ಕಾರ ಮೊದಲಾದವುಗಳೇ ಶಕ್ತಿ ಎಂದು ತಿಳಿಯಲ್ಪಡುತ್ತವೆಯೇ ಹೊರತು ಪ್ರೇಮ ಪವಿತ್ರತೆ ಮೊದಲಾದವು ಕೇವಲ "ಭಾವನೆ"ಗಳೆಂದು ಎಣಿಸಲ್ಪಡುತ್ತವೆ.

ಅಂದು ನನ್ನನ್ನು ಮೂಕನನ್ನಾಗಿ ಮಾಡಿ ವಿಚಾರ ಮಾಡಹಚ್ಚಿದ ಶಕ್ತಿಯು ಅದಾವದಿದ್ದೀತು? ಅವರೇನು ಆವೇಶಭರಿತ ಭಾಷಣ ಬಿಗಿದಿರಲಿಲ್ಲ. ಮೃದು ಭಾಷೆಯಲ್ಲಿಯೇ ನಾಲ್ಕಾರು ಶಬ್ದ ಹೇಳಿದ್ದರು. ಅವುಗಳನ್ನು ಯುಕ್ತಿವಾದದಿಂದ ಎದುರಿಸುವದು ಸಾಧ್ಯವಿರಲಿಲ್ಲ. ನನ್ನ ಅಂತರಂಗದಲ್ಲಿ ನಾನು ಅದರ ಉತ್ತರವನ್ನು ಹುಡುಕಬೇಕಾಯಿತು. ಮತ್ತು ನನ್ನ ಆಂತರಿಕ ಸಮಾಧಾನಕ್ಕಾಗಿ ನಾನು ಅಂದಿನಿಂದ ಒಂದು ಹೊಸ ಹಾದಿಯನ್ನೇ ಹಿಡಿಯಬೇಕಾಯಿತು.

ಅದೇ ದಿನದಿಂದ ಆ ನಮ್ರತೆಯ ಮೂರ್ತಿ, ಆ ಮೃದು ಮಾತು, ನಸುನಗುವ ಕಣ್ಣಿನಿಂದ ಮಾತಾಡುವ ವ್ಯಕ್ತಿಯ ಮುದ್ರೆ ನನ್ನ ಅಂತಃಕರಣದಲ್ಲಿ ಅಚ್ಚು ಒತ್ತಿದಂತೆ ಮಾಡಿಬಿಟ್ಟಿದೆ. ನನ್ನ ಜೈಲಿನ ಜೀವನದಲ್ಲಿ ಅದೆಷ್ಟೋ ದಿನ ಅವರ ಸಹವಾಸದಲ್ಲಿ ಕಳೆದು ಆಳವಾಗಿ ಅವರನ್ನು ಅವಲೋಕಿಸುತ್ತ ಇದ್ದೆ. "ಇಮಿಟೇಶನ್ ಆಫ್ ಕ್ರೈಸ್ಟ್" ಪುಸ್ತಕವು ಯಾವಾಗಲೂ ಅವರ ಕೈಯಲ್ಲಿ ಇರುತ್ತಿತ್ತು. ನಿಂತು ಕೊಂಡು ಹಾಗೂ ಅಡ್ಡಾಡುತ್ತ ಸಹ ತುಂಬಾ ಧ್ಯಾನದಿಂದ ಅದನ್ನು ಓದುತ್ತಾ ಇರುತ್ತಿದ್ದರು. ಕಣ್ಣಿಗೂ ಮೋರೆಗೂ ನೊಣಗಳು ಮುಕುರುತ್ತಿದ್ದವು. ಆದರೂ ಅವುಗಳ ಕಡೆಗೆ ಅವರ ಲಕ್ಷ್ಯವೇ ಇರುತ್ತಿರಲಿಲ್ಲ. ಜೈಲಿನಿಂದ ಬಿಡುಗಡೆ ಹೊಂದಿದ ನಂತರ ಅನೇಕ ಸರ್ವೋದಯ ಸಮ್ಮೇಲನಗಳಲ್ಲಿ ಅವರನ್ನು ಕಾಣುತ್ತಿದ್ದೆ. ತಮ್ಮದೇ ಕೈನೂಲಿನಿಂದ ತಯಾರಿಸಿದ ಒಂದು ಪಂಚೆ ಹಾಗೂ ಒಂದು ಅಂಗಿ ಇದಿಷ್ಟೇ ಅವರ ಪೋಷಾಕಾಗಿತ್ತು. ಎಲ್ಲಿಗೇ ಹೋಗಲಿ, ಬರಲಿ ಅದೇ ವೇಷ! ಅಪರಿಗ್ರಹದ ಸಾಕಾರ ಮೂರ್ತಿ.

ಅಸಾಮದಲ್ಲಿ ಬಂಗಾಲಿ ಜನರ ವಿರುದ್ಧ ಆಂದೋಲನ ನಡೆದಾಗ ವಿನೋಬಾರು ಅಲ್ಲಿಗೆ ಹೋಗಿದ್ದರು. ಆಗ ಭಾರತದ ವಿವಿಧ ಪ್ರಾಂತಗಳಿಂದ ಅನೇಕರು ಮಾನವ ಸೇವೆಯ ಪ್ರೇರಣೆಯಿಂದ ಆ ಗ್ರಾಮಕ್ಕೆ ಹೋಗಿದ್ದರು. ಆಗ ನಾಯಕ ಮಾಸ್ತರರೂ ಅಲ್ಲಿಗೆ ಹೋಗಿದ್ದರು. ಅದು ನನಗೆ ಗೊತ್ತೇ ಇರಲಿಲ್ಲ.

ಆಕಸ್ಮಾತ್ತಾಗಿ ಅವರಿಂದ ಒಂದು ಪತ್ರ ಬಂತು. ಗೋಪಾಲಪಾಡಾದ ದುದಸಾಯಿ ಕೇಂದ್ರದಿಂದ. "ನೂಲುವ ಹಂಜಿ ಇದ್ದರೆ ಒಂದು ಅರ್ಧ ಪೌಂಡ ಕಳಿಸಿರಿ" ಎಂದು. ಪತ್ರದಲ್ಲಿ ಶಿಷ್ಟಾಚಾರದ ಯಾವ ಶಬ್ದಗಳೂ ಇರಲಿಲ್ಲ. ನಾನು ಹಂಜಿ ತೆಗೆದುಕೊಂಡು ಜಲಪೈಗುಡಿಯಿಂದ ಗೋಹಾತಿಗೆ ಹೊರಟೇ ಬಿಟ್ಟೆ. ಶರಣಿಯಾ ಆಶ್ರಮಕ್ಕೆ ಹೋದೆ. ಸುತ್ತಲೂ ಗಂಭೀರ ವಾತಾವರಣ ಪಸರಿಸಿತ್ತು. ಆಫೀಸ್‌ನಲ್ಲಿ ಓರಿಸಾದ ನವಬಾಬು ಹಾಗೂ ಮಾಲತೀ ಚೌಧರಿ ಭೆಟ್ಟಿ ಆದರು. ಜವಾಬುದಾರಿಯ ಚಿಂತೆ ಅವರ ಮುಖದ ಮೇಲೆ ಒಡೆದುಕಾಣುತ್ತಿತ್ತು. ಅಷ್ಟರಲ್ಲಿ ನಾಯಕ ಮಾಸ್ತರರೂ ಬಂದುಬಿಟ್ಟರು. ಒಂದಿಷ್ಟು ಮಾತಾಡಿ ನಾನು ಹಂಜಿಯ ಕಟ್ಟು ಅವರ ಕೈಯಲ್ಲಿ ಇಟ್ಟೆ. ಅವರಿಂದ ಯಾವುದೇ ಔಪಚಾರಿಕ ಮಾತು ಕೇಳಿಸಲಿಲ್ಲ. ಅವರ ನಸುನಗುವ ಕಣ್ಣುಗಳು, ಮತ್ತು ಪ್ರಸನ್ನ ಮುಖಮುದ್ರೆ ಇವೇ ಎಲ್ಲ ಲೋಪದೋಷಗಳನ್ನು ಪರಿಹರಿಸಿದ್ದವು. ಅಂದೇ ನಾನು ಹಿಂತಿರುಗಿದೆ.

ಕೆಲವು ದಿನಗಳ ಮೇಲೆ ಅವರು ನಮ್ಮ ಆಶ್ರಮಕ್ಕೇ ಬಂದುಬಿಟ್ಟರು. ಅತ್ಯಂತ ಆನಂದದಲ್ಲಿ ಎರಡು ದಿನ ಕಳೆದರು. ಅವರು ಅಲ್ಲಿಂದ ಕರ್ನಾಟಕಕ್ಕೆ ಹಿಂದಿರುಗುವಾಗ ಅವರ ದಾರಿಯ ಖರ್ಚಿಗೆ ಕೆಲವು ರೂಪಾಯಿ ಮತ್ತು ಕೆಲವು ಖಾದ್ಯ ವಸ್ತುಗಳನ್ನು ಕೊಡಹೋದೆ. ಆದರೆ ನನ್ನ ಕಡೆಯಿಂದ ರೂಪಾಯಿ ತೆಗೆದು ಕೊಳ್ಳುವದಂತೂ ಇರಲಿ, ಆಶ್ರಮದಲ್ಲಿ ಅವರ ಊಟ ಉಪಚಾರಕ್ಕಾಗಿ ಕೊಟ್ಟಿದ್ದ ರಕಮಿನಲ್ಲೇ ಉಳಿಸಿದ ಮೂವತ್ತು ರೂಪಾಯಿಗಳನ್ನು ನನ್ನ ಕೈಯಲ್ಲಿ ಕೊಟ್ಟು ಆಶ್ರಮಕ್ಕೆ ಬರುವ ಬಡಜನರ ಬಗ್ಗೆ ಖರ್ಚುಮಾಡಲು ಹೇಳಿಬಿಟ್ಟರು! ಕೊಡಮಾಡಿದ ಖಾದ್ಯವಸ್ತುಗಳನ್ನೂ ತೆಗೆದುಕೊಳ್ಳಲಿಲ್ಲ.

ನಮ್ಮಿಬ್ಬರೊಳಗೆ ಪತ್ರವ್ಯವಹಾರ ನಡೆಯುತ್ತಲೇ ಇರುತ್ತಿತ್ತು. ಅದರಿಂದ ಅವರ ಚಿಂತನ ಹಾಗೂ ಕಾರ್ಯಪರಿವರ್ತನಗಳ ಕಲ್ಪನೆ ಬರುತ್ತಿತ್ತು. ಅವರ ಸ್ವತಂತ್ರವಾಗಿ ಕೆಲವೊಂದು ಗ್ರಾಮಸೇವೆಯ ಕೆಲಸ ಮಾಡುತ್ತಿದ್ದರು. ಪರಿಶುದ್ಧ ಸೇವೆಗೆ ಅವಶ್ಯವಿರುವವಷ್ಟು ಶುದ್ಧಿಯು ತಮಗೆ ಸಾಧಿಸಲಿ ಎಂಬ ಕೊರಗು ಅವರಿಗೆ ಸದಾಕಾಲ ಇರುತ್ತಿತ್ತು. ಮೈಸೂರು ಸರಕಾರವು ಪಾನಪ್ರತಿಬಂಧ ಕಾನೂನನ್ನು ರದ್ದುಮಾಡಿ ಪುನಃ ಮತ್ತೆ ಪಾನ ಆರಂಬಿಸಿದ್ದು ನೋಡಿ ಅವರಿಗೆ ಆಘಾತವಾಯಿತು ಪ್ರತಿರೋಧದ ಬೇರೆ ಯಾವುದೇ ಮಾರ್ಗ ಇಲ್ಲದ್ದರಿಂದ ಅವರು ೧೪ದಿನ ಉಪವಾಸ ಕೈಕೊಂಡರು. ಅವರಿಗೆ ಮೂಲವ್ಯಾಧಿಯ ಪೀಡೆ ಇದ್ದೇಇತ್ತು. ಮುಪ್ಪಿನ ಮೂಲಕ ಅಶಕ್ತಿಯೂ ಬಂದಿತ್ತು. ಇದರಿಂದ ಅವರ ಹಿತಚಿಂತಕರಿಗೆಲ್ಲ ವಿವಂಚನೆ ಅನಿಸಿತ್ತು, ಆದರೂ ಅವರು ತಮ್ಮ ಸಂಕಲ್ಪದ ಬಲದಿಂದ ಉಪವಾಸವನ್ನು ಯಶಸ್ವಿಯಾಗಿ ಪೂರ್ತಿಗೊಳಿಸಿಯೇ ಬಿಟ್ಟರು. ಇಷ್ಟಾದರೂ ಸರಕಾರದ ಸಿದ್ಧಾಂತದ ಶಿಲೆಯು ಒಂದಿಷ್ಟೂ ಕರಗಲಿಲ್ಲ.

ಭಾರತ ಸ್ವಾತಂತ್ರ್ಯಸಂಗ್ರಾಮದಲ್ಲಿ ಪ್ರಾಮುಖ್ಯವಾಗಿ ಎರಡು ತರಹದ ಪ್ರವೃತ್ತಿಗಳು ನಡೆಯುತ್ತಿದ್ದವು. ರಾಜಕಾರಣವನ್ನೇ ತಮ್ಮ ಗುರಿಯನ್ನಾಗಿ ಇರಿಸಿಕೊಂಡವರು ಒಂದು ವರ್ಗ. ಆತ್ಮ ಹಾಗೂ ಲೋಕ ಕಲ್ಯಾಣಗಳೆರಡನ್ನೂ ಕೂಡಿಯೇ ಸಾಧಿಸಿ ಹೊರಟವರದು ಇನ್ನೊಂದು ವರ್ಗ. ರಾಜಕಾರಣಿಗಳಾದರೋ ಅನುಕೂಲವಾದ ಸಂದರ್ಭವನ್ನು ಕಾಯುತ್ತಿರುತ್ತಾರೆ. ಅಂಥ ಸಂಧಿಯನ್ನು ಸಾಧಿಸಲಿಕ್ಕಾಗಿ ಅವರು ಗಿಡುಗದಂತೆ ಎತ್ತರದಲ್ಲಿ ಕುಳಿತುಕೊಂಡು ತಮ್ಮ ವಿಶಿಷ್ಟತರದ ಧ್ವನಿ ಮಾಡುತ್ತಿರುತ್ತಾರೆ. ಮತ್ತು ಸಂಧಿ ಸಿಗುತ್ತಲೇ ಜಿಗಿದು ತಮ್ಮ ಬೇಟೆಯನ್ನು ಹಿಡಿದು ಬಿಡುತ್ತಾರೆ. ಜೀವನ ಸಾಧನೆಗೆ ಅವರು ಯಾವುದೇ ಮಹತ್ವ ಕೊಡುತ್ತಿರುವುದಿಲ್ಲ. ಆದರೆ ಜನಕಲ್ಯಾಣ, ಆತ್ಮಕಲ್ಯಾಣ-ಇವೆರಡೂ ಅವಿಭಾಜ್ಯ ವೆಂದು ತಿಳಿಯುವವರು ಆಂತರಿಕ ಶೋಧನೆಯನ್ನೇ ನಡಿಸುತ್ತಿರುತ್ತಾರೆ.

ಸಂಧಿಸಾಧಿಸಿ ಕಬಳಿಸಿದ ಸತ್ತೆ (ಅಧಿಕಾರವು) ಸತ್ಯವಲ್ಲ. ಸಾಧನೆಯನ್ನು ಸತ್ಯ ಪ್ರಾಪ್ತಿಗಾಗಿ ನಡೆಸಲಾಗುತ್ತದೆಯೇ ಹೊರತು ಸತ್ತಾಪ್ರಾಪ್ತಿಗಾಗಿ ಅಲ್ಲ. ಇವೆರಡ ರಲ್ಲಿಯ ವಿಭಿನ್ನ ಮೌಲ್ಯವನ್ನು ತಿಳಿದುಕೊಂಡಿರುವವರಿಗೆ ಮಾತ್ರ ಮುಂದಿನಮಾರ್ಗ ಸ್ಪಷ್ಟವಾಗಿ ಕಾಣುತ್ತಿರುತ್ತದೆ.

ನಾಯಕ ಮಾಸ್ತರರ ಪ್ರವೃತ್ತಿಯಾದರೋ ಸದಾಕಾಲವೂ ಸತ್ಯಸಾಧನೆಯಿಂದ ಆಗಿರುತ್ತಿತ್ತು. ತಂದೆಯು ಮಕ್ಕಳ ಆಟವನ್ನು ನೋಡುವ ದೃಷ್ಟಿಯಿಂದಲೇ ನಾಯಕ ಮಾಸ್ತರರು ಸತ್ತಾ ಸ್ಪರ್ಧೆಯನ್ನು ನೋಡುತ್ತಿದ್ದರು .

ಇಂದಿನ ಗಾಂಧಿ ಭಕ್ತರಲ್ಲಿಯೂ ಇದ್ದ ಈ ವ್ಯತ್ಯಾಸವು ಬಹಿರಂಗವಾಗಿ ಬಿಟ್ಟಿದೆ. ಸರ್ವೋದಯದಲ್ಲೂ ಎರಡು ಸ್ವತಂತ್ರ ವಿಭಾಗಗಳಾಗಿವೆ. ನಾಯಕ ಮಾಸ್ತರರಿಗೆ ಮೊದಲೇ ಈ ತರಹದ ಲಕ್ಷಣ ಕಂಡಿದ್ದವು. ಅದಕ್ಕಾಗಿ ಅವರು ವ್ಯಸನವನ್ನುಪಡುತ್ತಿದ್ದರು. ಆದ್ದರಿಂದಲೇ ಕೊನೆಯ ಕಾಲದಲ್ಲಿ ಅವರು ಇಷ್ಟೊಂದು ನಿಸ್ಸಬ್ಧ, ನಿರ್ಲಿಪ್ತ, ಏಕಾಂತಜೀವಿಗಳಾಗಿದ್ದರು. ಸಾವು ಅವರಿಗೆ ಸಮೀಪಿಸಿದ್ದರೂ ನಮಗೆ ಅದರ ಸುಳಿವು ಹತ್ತಗೊಡಲಿಲ್ಲ.

ಕೊನೆಯವೆರಡು ಮಾತು. ನಾಯಕ ಮಾಸ್ತರರಂಥ ಸಾಧಕರ ಸ್ಮೃತಿ ರೂಪವಾಗಿ ಕೆಲವೊಂದು ಜಡಕುರುಹುಗಳನ್ನು ರಚಿಸಿ ಅಷ್ಟಕ್ಕೇ ನಾವು ಸಮಾಧಾನ ಪಟ್ಟುಕೊಳ್ಳದೆ, ಅವರಂತೆಯೇ ಭಾರತ ತುಂಬ ಬಹಳಷ್ಟು ದೀಪಗಳನ್ನು ಉರಿಸಿ ಬೆಳಕು ಚೆಲ್ಲುವ ಜವಾಬುದಾರಿಯು ನಮ್ಮ ಮೇಲೆಯೂ ಇರುತ್ತದೆ ಎಂಬುದನ್ನು ನಾವು ಎಂದೂ ಮರೆಯಲಾಗದು.

"ಶಂನೋ ಬುದ್ಧ್ಯಾ ಶುಭಯಾಸಂಯುನಕ್ತು"
"ದೇವರು ನಮಗೆಲ್ಲ ಸದ್ಬುದ್ಧಿಕೊಟ್ಟು ಒಟ್ಟುಗೂಡಿಸಲಿ"

# ತತ್ತ್ವನಿಷ್ಠ

## ಗೋಪಾಲ ಶಿವ ಹೆಗಡೆ

ಸಾಹಸ ಹಾಗೂ ಸ್ವಾವಲಂಬನದಿಂದ ಕಲಿತು ಪದವೀಧರರಾದರೂ ಆನುವಂಶಿಕ ಬಡತನ ನಿವಾರಣೆಗಾಗಿ ಅಥವಾ ತನ್ನ ಅನುಕೂಲತೆಗಳಿಗಾಗಿ ಅರ್ಥ ಸಂಪನ್ನನಾಗಲು ಶ್ರೀ ಮಾಸ್ತರರು ಎಂದೂ ಹಂಬಲಿಸಲೇ ಇಲ್ಲ. ಶ್ರೇಷ್ಠ ತತ್ತ್ವನಿಷ್ಠ ಜೀವನ ಅವರದು.

ಬಿ. ಎ. ಪಾಸಾಗಿ ಶಿರ್ಸಿಯಲ್ಲಿ ಹೈಸ್ಕೂಲ್ ಮುಖ್ಯಾಧ್ಯಾಪಕರಾದರೂ ಕೇವಲ ನೌಕರಿ ಜೀವನದಲ್ಲಿ ಇವರಿಗೆ ತೃಪ್ತಿ ಇರಲಿಲ್ಲ. ಗೋಖಲೆ ಹಾಗೂ ಗಾಂಧೀಜೀಯವರ ವಿಚಾರ ಓದಿದ ಇವರು ಅಸಹಕಾರದ ಆಂದೋಲನಕ್ಕಾಗಿ ನೌಕರಿಗೆ ತಿಲಾಂಜಲಿಯನ್ನಿತ್ತರು. ಅಲ್ಲಿಯೇ ಸಿರ್ಸಿ ರಾಷ್ಟ್ರೀಯ ಶಾಲೆಯ ಮುಖ್ಯಾಧ್ಯಾಪಕರಾಗಿ ಇತರ ಶಿಕ್ಷಕರೊಡನೆ ಹಳ್ಳಿಹಳ್ಳಿಗೆ ಹೋಗಿ ಜನ ಜಾಗೃತಿಯ ಕಾರ್ಯ ಕೈಗೊಂಡರು.

ರಾಷ್ಟ್ರೀಯ ಶಾಲೆಯಲ್ಲಿ ಮುಖ್ಯಾಧ್ಯಾಪಕರಾಗಿದ್ದ ಇವರು ಸ್ವಾವಲಂಬನ, ಶ್ರಮನಿಷ್ಠೆಗಳಲ್ಲಿ ಮಹಾ ಸಾಹಸಮಾಡಿ ಜೀವನ ಪಾಠವನ್ನು ಕಲಿಸಹತ್ತಿದರು. ತತ್ತ್ವಜ್ಞಾನಿ ಟಾಲಸ್ಟಾಯ್ ಅವರ "ಬ್ರೆಡ್‌ಲೇಬರ್" ತತ್ತ್ವವನ್ನು ಓದಿದ ಇವರು ಪರೋಪದೇಶ ಪಾಂಡಿತ್ಯ ಮಾಡಲಿಲ್ಲ. ಸ್ವತಃ ಅಂಥ ಜೀವನ ನಡೆಸಲು ಹೆಣಗಿದರು. ಹಳ್ಳಿಹಳ್ಳಿಗೆ—ಮನೆಮನೆಗೆ ಖಾದಿ ಹೊತ್ತು ಮಾರುವ, ಅಡವಿಯಿಂದ ಕಟ್ಟಿಗೆ ಹೊತ್ತು ತರುವ, ಊರಲ್ಲಿ ಸೆಗಣಿ ಹೆಕ್ಕಿತಂದು ಸಾರಿಸುವ, ಯಾವ ಕೆಲಸವೂ ಈ ಪದವೀಧರರ ಸ್ಥಾನಮಾನಕ್ಕೆ ಹೆದರಿ ಹಿಂದುಳಿಯಲಿಲ್ಲ. ಸ್ವಯಂ ಪಾಕವೂ, ಸಂಡಾಸ ಸಫಾಯಿಯೂ, ಅಷ್ಟೇ ನಿಷ್ಠೆಯ ಉಪಾಸನಾ ಕಾರ್ಯಕ್ರಮ ಈ ಕ್ರಾಂತಿಕಾರೀ ದೇಶಭಕ್ತರಿಗೆ.

ಕಾಲ ಮತ್ತು ಕಾರಣಾಂತರದಿಂದ ರಾಷ್ಟ್ರೀಯ ಶಾಲೆಯು ಬಂದಾಯಿತು. ಗಾಂಧೀಜಿಯವರ ಸನ್ನಿಧಿಗೆ ಸಾಬರಮತಿ ಆಶ್ರಮಕ್ಕೆ ಹೋದರು. ಅಲ್ಲಿ ಖಾದಿ ನೇಯ್ಗೆ ಕಲಿತುಬಂದು ಸ್ವಾವಲಂಬಿಯಾಗಿ ದೇಶಸೇವೆ ಮಾಡುವದೇ ಇವರ ಒಂದು ಗುರಿಯಾಗಿತ್ತು. ಅಲ್ಲಿ ತರಬೇತಿ ಹೊಂದಿದ ಮೇಲೆ ತಮ್ಮ ಪ್ರಾಂತ್ಯದಲ್ಲಿ ಎರಡು ವರ್ಷವಾದರೂ ಸೇವೆ ಮಾಡಬೇಕಾದ್ದು ಆ ಚರಖಾ ಸಂಘ–ಸಂಸ್ಥೆಯ

ಅಂದಿನ ಸಾಮಾನ್ಯ ವಿಧಿಯಾಗಿತ್ತು. ಅದಕ್ಕನುಸರಿಸಿ ದೇಶಭಕ್ತ ಗಂಗಾಧರ ರಾಯರ ಹುದಲಿ ಖಾದಿ ಉತ್ಪತ್ತಿ ಕೇಂದ್ರಕ್ಕೆ ಬಂದರು. ಮಾಸ್ತರರಾದ ಇವರಿಗೆ ಅಲ್ಲಿಯೂ ಬೇಡರ, ಹರಿಜನರ ಮಕ್ಕಳಿಂದೊಡಗೂಡಿದ ಪ್ರಾಥಮಿಕ ಶಾಲೆಯನ್ನು ನಡಿಸುವುದು ಪಾಲಿಗೆ ಬಂತು. ಆ ಶಾಲೆಯಲ್ಲಿಯೇ ಇವರ ವಾಸ. ಸ್ವಯಂ ಪಾಕದ ಸಪ್ಪನ್ನ ಕಿಚಡಿಯೇ ಇವರ ಊಟ. ಖಾದಿ ಉತ್ಪತ್ತಿ ಕೇಂದ್ರದಲ್ಲಿ ಹಿಂಜುವ, ನೂಲು ನೇಯುವ, ಶಿಕ್ಷಣ ಪಡೆಯುತ್ತಿದ್ದ ಒಬ್ಬಿಬ್ಬರು ವಿದ್ಯಾರ್ಥಿಗಳಿಗೆ ಒಂದೊಪ್ಪತ್ತು ಬೌದ್ಧಿಕ ಶಿಕ್ಷಣಕೊಡುವ ಕೆಲಸವನ್ನು ನಾಯಕ ಮಾಸ್ತರರು ಮಾಡುತ್ತಿದ್ದರು. ಇವರು ಕಲಿಸುವ ಪದ್ಧತಿಯು ವಿಚಾರ ಪ್ರಧಾನವಾಗಿತ್ತು. "ನಹಿನಹಿ ರಕ್ಷತಿ ಡುಕೃಂಞಕರಣೇ"—ವ್ಯಾಕರಣ, ಭಾಷೆ ಗೌಣವಾಗಿತ್ತು.

ಕುಮರೀ ರಾಷ್ಟ್ರೀಯ ಶಾಲೆಯು ಮುಚ್ಚಲ್ಪಟ್ಟ ಮೇಲೆ (1935) ಹುದಲಿಗೆ ಹೋಗುಳಿದವರಲ್ಲೊಬ್ಬನು ನಾನು. ಗಾಂಧೀಜಿಯುವರ ವಾರಪತ್ರಿಕೆ "ಯಂಗ್ ಇಂಡಿಯಾ" ಓದಿ ತಿಳಕೊಳ್ಳುವ ಸಾಮರ್ಥ್ಯ ನನಗೆ ಇದ್ದಿಲ್ಲ. ಆದರೂ ಅವರು ವಿಚಾರ ನೀಡುವುದಕ್ಕಾಗಿ "ಯಂಗ್ ಇಂಡಿಯಾ" ದೊಳಗಿನ ಲೇಖನಗಳನ್ನೇ ಓದಿಸಿ ಅರ್ಥ ತಿಳಿಸುತ್ತಿದ್ದರು. ಅದೇ ರೀತಿ ಗಾಂಧೀಜಿಯುವರೇ ಬರೆದ "ಇಂಡಿಯನ್ ಹೋಂ ರೂಲ್", "ಗಾಯ್ಡ್ ಟು ಹೆಲ್ತ್" ಮತ್ತು ಟಾಲಸ್ಟಾಯ್ ಅವರ "ಟ್ವೆಂಟಿತ್ರೀ ಟೇಲ್ಸ್"ಗಳನ್ನು ಓದಿಸುತ್ತಿದ್ದರು. ಸಂಸ್ಕೃತ ಕಲಿಸುವಾಗಲೂ ಭಾಷೆಗಿಂತ ಸದ್‌ಗ್ರಂಥಗಳ ವಿಚಾರ ಮುಖ್ಯವಾಗಿತ್ತು. ಪ್ರಾರಂಭದಲ್ಲಿ ಆಶ್ರಮ ಭಜನಾವಲಿಯ ಶ್ಲೋಕಗಳು, ಭಗವದ್ಗೀತೆ, ಉಪನಿಷತ್ತು ಇತ್ಯಾದಿ ಕ್ರಮವಿತ್ತು. ಹಿಂದೀ ಕಲಿಸುವುದಕ್ಕಾಗಿ ಯಾವುದೇ ಕ್ರಮಿಕ-ಪಠ್ಯಪುಸ್ತಕ ಬೇಕಾಗಿಲ್ಲ. ಗಾಂಧೀಜಿ ಯುವರ ಹಿಂದೀ ವಾರಪತ್ರಿಕೆ "ಹರಿಜನ ಸೇವಕ" ತರಿಸಹತ್ತಿದರು. ಕನ್ನಡದಲ್ಲಿ ವಿಶೇಷವಾಗಿ ದೇಶಭಕ್ತ ಹರ್ಡೇಕರ ಮಂಜಪ್ಪನವರು ಬರೆದ ಸ್ವಾಮೀರಾಮತೀರ್ಥರ ಉಪನ್ಯಾಸಗಳು, ಬಸವೇಶ್ವರ, ರಾಮಕೃಷ್ಣ ಪರಮಹಂಸ, ವಿವೇಕಾನಂದ ಚರಿತ್ರೆ ಮೊದಲಾದ ಜೀವನಸತ್ವಪೋಷಕ ಗ್ರಂಥಗಳನ್ನು ಓದಲುಕೊಟ್ಟು ಆಮೇಲೆ, ಅವುಗಳ ವಿಚಾರವಾಗಿ ಚರ್ಚಿಸುತ್ತಿದ್ದರು. ಅಲ್ಲದೆ ಖಾದೀಶಾಸ್ತ್ರ, ಅಸ್ಪೃಶ್ಯತಾ ನಿವಾರಣೆ ಆದಿ ರಚನಾತ್ಮಕ ಕಾರ್ಯಕ್ರಮಗಳ ಎಲ್ಲ ವಿಚಾರಗಳು ಅಲ್ಲಿ ಇದ್ದೇ ಇರುತ್ತಿದ್ದವು. ಬೆಳಿಗ್ಗೆ ನಾಲ್ಕು ಘಂಟೆಗೆ ಏಳುವದು, ರಾತ್ರಿ ಹತ್ತು ಘಂಟೆಗೆ ಮಲಗುವದು, ಎರಡು ಹೊತ್ತು ಪ್ರಾರ್ಥನೆ, ಸ್ನಾನ, ಊಟ ಎಲ್ಲವೂ ನಿಶ್ಚಿತ ಕಾಲಕ್ಕೇ ಆಗಬೇಕಿತ್ತು. ಎಲ್ಲಕ್ಕೂ ಮಿಗಿಲಾಗಿ ಅವರ ತತ್ತ್ವನಿಷ್ಠೆ—ಕಠೋರ ವ್ರತಪಾಲನೆಯ ಜೀವನ ಪಾಠ ಪ್ರಖರವಾಗಿತ್ತು.

ಹುದಲಿಯಲ್ಲಿ ಗಂಗಾಧರರಾಯರ ಮನೆ-ವಾಡೆ-ಇದೆ. ಅವರಿಗೆ ಇಬ್ಬರೂ ಹೆಣ್ಣು ಮಕ್ಕಳೇ ಆದ್ದರಿಂದ ಕಿರಿಯ ಮಗಳೂ, ಅಳಿಯಂದಿರೂ ಮನೆಯಲ್ಲಿ

ಇರುತ್ತಿದ್ದರು. ತನ್ನ ಮೊಮ್ಮಗಳಿಗೆ ಇಂಗ್ಲೀಷ್ ಟ್ಯೂಶನ್ ಕೊಡಿಸುವುದಿತ್ತು ಗಂಗಾಧರರಾಯರಿಗೆ. ದಿನಾಲೂ ಕೆಲವು ಹೊತ್ತು ಮನೆಗೆ ಬಂದು ಇಂಗ್ಲೀಷ್ ಕಲಿಸಲು ನಾಯಕ ಮಾಸ್ತರರಿಗೆ ಆರ್ಡರ ಆಯಿತು. ಇಲ್ಲಿ ಗಂಗಾಧರರಾಯರ ಉದ್ದೇಶವು ಇಂಗ್ಲೀಷ್ ಕಲಿಸಿ "ಮೊಮ್ಮಗಳಿಗೆ ಒಳ್ಳೇ ಗಂಡ ಸಿಗಬೇಕು" ಎಂಬುದಲ್ಲದೆ ಬೇರೆ ಯಾವುದೇ ಹೆಚ್ಚಿನ ವಿಚಾರ ಕಂಡು ಬರಲಿಲ್ಲವಾದ್ದರಿಂದ ನಾಯಕ ಮಾಸ್ತರರು ಇದಕ್ಕೆ ಒಪ್ಪಲಿಲ್ಲ. ಉಚ್ಚ ಧ್ಯೇಯಕ್ಕಾಗಿ ತನ್ನ ಜೀವನವನ್ನೇ ಮುಡಿಪಾಗಿಟ್ಟ ಇವರಿಗೆ ತಮ್ಮ ಸಣ್ಣ ದೊಡ್ಡ ಯಾವತ್ತೂ ಕರ್ಮ–"ಶಂಭೋ ತವಾರಾಧನಮ್" ಆಗ ಬೇಕಾಗಿತ್ತು. ಬೇರೆ ಯಾರಾದರೂ ಆಗಿದ್ದರೆ 'ಕರ್ನಾಟಕಸಿಂಹ ಸಿಟ್ಟಾದಾರು,' ಎಂದು ಹೆದರಿ ಹೇಳಿದಂತೆ ಮಾಡುತ್ತಿದ್ದರು. ಆದರೆ ಈ ಪ್ರಾಮಾಣಿಕ ತತ್ತ್ವ ನಿಷ್ಠ ಸಾಧಕರಿಗೆ ಇಂಥ ಅರ್ಥವಿಹೀನ ಕಾರ್ಯದಲ್ಲಿ ಕಾಲ ಕಳೆಯುವದು ತಾತ್ತ್ವಿಕ ವ್ಯಭಿಚಾರವೆನಿಸಿತು. ಆದ್ದರಿಂದ ಆ ಕೆಲಸವನ್ನು ಸಹಜವಾಗಿಯೇ ಧಿಕ್ಕರಿಸಿ ಬಿಟ್ಟರು.

ಹುದಲಿಯಿಂದ ಒಂದು ಮೈಲು ದೂರದಲ್ಲಿ ಅಡವಿ ಕಡಿದು ಹೊಲ ಮಾಡಿದ ಸ್ಥಳ—ಕುಮ್ರಿಯಲ್ಲಿ ಆಶ್ರಮ ಜೀವನ ಪ್ರಯೋಗ ನಡೆಯಿತು. ಖಾದೀ ಕಾರ್ಯ ಕರ್ತರೂ, ಕೆಲವು ನೂಲು–ನೇಯ್ಗೆ ವಿದ್ಯಾರ್ಥಿಗಳೂ ಕೂಡಿ ಸಾಮೂಹಿಕ ಜೀವನ ಪ್ರಾರಂಭಿಸಿದರು. ಉದ್ಯೋಗ ಹಾಗೂ ಶಿಕ್ಷಣ, ಪ್ರಾರ್ಥನೆ ಹಾಗೂ ಶ್ರಮಕಾರ್ಯ, ಸರಾಗವಾಗಿ ಸಾಗುತ್ತಿದ್ದವು. ಅಸ್ವಾದವ್ರತ ಹಾಗೂ ಮುಂಜಾನೆ ನಾಲ್ಕು ಘಂಟೆಗೆ ಏಳುವುದು ಮುಕ್ಕಾಲುಪಾಲ ಜನರಿಗೆ ಹೊಸದಾಗಿತ್ತು. ಆಶ್ರಮದ ವ್ರತಗಳು ಓದಲು ಕೇಳಲು ಇಷ್ಟವಾದರೂ ಆಚರಣೆಗೆ ಹೊಂದಿಕೊಳ್ಳುವುದು ಅಷ್ಟು ಸುಲಭವಾಗಿರಲಿಲ್ಲ. ಅಸ್ವಾದವ್ರತವು ಸಾಮೂಹಿಕ ಜೀವನದ ರುಚಿಗೆಡಿಸಿ ಬಿಡುತ್ತಿತ್ತು. ಸಾಮೂಹಿಕ ಅಡಿಗೆಯಲ್ಲಿ ಸಪ್ಪನ್ನ ಬೇಳೆ ತಯಾರಿಸುತ್ತಿದ್ದರು. ರೂಢಿಯಿಲ್ಲವವರು ಕೆಲಕಾಲ ಮೇಲಿನಿಂದ ಖಾರ ತಕ್ಕೊಳ್ಳಬಹುದಾಗಿ ನಿಯಮ ಸಡಲಿಸಿದರು. ಆದರೂ ಮೇಲಿನಿಂದ ಖಾರ ಹಾಕಿಕೊಂಡರೆ ರುಚಿಯಾಗುವುದಿಲ್ಲವೆಂಬ ಸಮಸ್ಯೆ ಬರುತ್ತಿತ್ತು. ಎರಡು ಪಾಕ ಮಾಡುವುದೂ ಸರಿಯಾಗುತ್ತಿರಲಿಲ್ಲ. ಆಶ್ರಮದ ಸಮಸ್ಯೆ, ಅನುಭವ ಗಳನ್ನು ಆಚಾರ್ಯ ಕಾಲೇಲಕರಿಗೆ ವರದಿಮಾಡಿ ಅವರ ಸಲಹೆ ಪಡೆಯುವುದು ನಡೆಯುತ್ತಿತ್ತು. ಒಮ್ಮೆ ಅವರು ಸಾತ್ವಿಕಾನ್ನದ ಬಗ್ಗೆ ಬರೆಯುತ್ತಾ "ಅತಿ ಸಾತ್ವಿಕತೆ ಯು ತಾಮಸಿಕ"ವಾಗುತ್ತದೆಂದು ತಿಳಿಸಿದ್ದರು. ಬೇರೆ ಬೇರೆ ಭಾಗದಿಂದ ಬಂದ ವಿಭಿನ್ನ ರುಚಿಯ ಕಾರ್ಯಕರ್ತರಲ್ಲಿ ಸಮರಸತೆ ತರುವ ಜೀವನಕಲೆ ಸಾಧಿಸುವುದು ಮಹಾ ಸಮಸ್ಯೆಯಾಗಿತ್ತು.

ಒಮ್ಮೆ ನಾಯಕ ಮಾಸ್ತರರಿಗೆ ಜ್ವರ ಬರಹತ್ತಿದಾಗ ಕುಡಿಯಲು ಕಷಾಯ ಮಾಡಿಕೊಡಬೇಕಾಗಿತ್ತು. ಇದರಲ್ಲಿ ಜೀರಿಗೆ ವಗ್ಗೈರೆ ಏನೇನು ಹಾಕುತ್ತಾರೆ? ಜೀರಿಗೆ

ಅಷ್ಟ ಮಸಾಲೆಗಳಲ್ಲಿ ಒಂದಲ್ಲವೆ? ಎಂದು ಕೇಳಿ ಕುಡಿಯಲು ಹಿಂಜರಿಯುತ್ತಿದ್ದರು! ಗಾಂಧೀಜಿಯವರ ಸಪ್ತ ಮಹಾವ್ರತಗಳನ್ನು ಓದಿದ ಇವರಿಗೆ ಉತ್ತೇಜಕ ಪದಾರ್ಥ ವೆಂದೆನಿಸಿದ ಖಾರ-ಮಸಾಲೆಗಳು ವರ್ಜ್ಯವಾಗಿದ್ದವು. ಅಸ್ವಾದವ್ರತದ ಆಚಾರ್ಯರಿಗೆ ಜ್ವರ ಬಂದಾಗ ಔಷಧಿ ಎಂದು ಜೀರಿಗೆ ಕಷಾಯ ಕುಡಿಯಲು ಮನಸ್ಸು ಹಿಂಜರಿಯು ತ್ತಿತ್ತು. ಎಂಥ ವ್ರತ! ಎಂಥ ನಿಷ್ಠೆ!

ಹುದಲಿಯಿಂದ ಜಿಲ್ಲೆಗೆ ಬಂದಮೇಲೆ ಕೆಲವುಕಾಲ ಖಾದಿ ಪ್ರಚಾರ, ಹೊತ್ತು ಮಾರುವ ಕೆಲಸ ಮಾಡಿದರು. ಅಸ್ಪೃಶ್ಯತಾ ನಿವಾರಣೆ, ಹರಿಜನ ಸೇವಾಕಾರ್ಯದ ಮಹತ್ವವನ್ನರಿತ ಇವರಿಗೆ ಆ ದಿಶೆಯಲ್ಲಿ ಸೇವೆಸಲ್ಲಿಸಬೇಕೆಂಬ ತಳಮಳ ಉಂಟಾಗಿತ್ತು ಅಂಕೋಲಾ ತಾಲೂಕಿನ ಮೊಗಟ ಎಂಬ ಹಳ್ಳಿಯಲ್ಲಿ ಹರಿಜನಕೇರಿಯಲ್ಲಿ ಮಕ್ಕಳ ಶಾಲೆಯನ್ನು ತೆರೆದು ನಡೆಸಹತ್ತಿದರು. ಅಲ್ಲೇ, ಶಾಲೆಯಲ್ಲಿಯೇ ವಾಸವಾಗಿದ್ದು ಕೊಂಡು "ಹರಿಜನರ ಮಕ್ಕಳಲ್ಲಿ, ಹರಿಜನರ ಹೃದಯದಲ್ಲಿ ಹರಿಯ ಹುಡುಕಿ" ಕಾಣಲು ಹೆಣಗಿದರು. ಗಾಂಧೀಜಿಯವರ ಆಧ್ಯಾತ್ಮಿಕ ಜೀವನದ ಕುರಿತು ಆ ಪಥದಲ್ಲಿ ಸಾಗಿದ ಇವರು ಆ ಕೇರಿಯಲ್ಲಿ ಹೋಗಿ ನೆಲೆಸಿದ್ದು ಕೇವಲ ಹರಿಜನರ ಉದ್ಧಾರಕ್ಕಾಗಿ ಅಲ್ಲ ;

> " ನೂರಾರು ವರ್ಷದಿಂದ-ನೂರಾರು ರೀತಿಯಿಂದ
> ಮೇರೆಯನೆ ಮೀರಿಗೈದ-ಘೋರತರ ಪಾಪಕೀಗ
> ಹರಿಜನರ ಸೇವೆಗೈದು-ಪರಿಶುದ್ಧರಾಗಬೇಕು "

ಎಂಬ ಭಕ್ತಿಭಾವದಿಂದ, ಪರಂಪರಾನುಗತ ರೂಢಿಯಿಂದ ಮಾಡಿದ ಸಾಮೂಹಿಕ ಪಾಪದ ಪ್ರಾಯಶ್ಚಿತ್ತಕ್ಕೆಂದು ಈ ತಪಸ್ಸು !

ಇಂದೂ ಈ ಶಾಲೆಯು ಊರ್ಜಿತವಾಗಿ ನಡೆದಿದೆ.

ಮುಂದೆ ಮಾತೃಭೂಮಿಯ ಕರೆ ಕೇಳಿ ಸಂಗ್ರಾಮದ ಮೈದಾನಕ್ಕೆ ಬರಬೇಕಾ ಯಿತು. ಉಪ್ಪಿನ ಕಾಯಿದೆ ಭಂಗಕ್ಕೆ ಜನಜಾಗೃತಿ ಮಾಡಲು ಅಂಕೋಲೆಗೆ ಬಂದರು. ಮುಂದೆ ಗಾಂಧೀಜಿಯವರು ಹರಿಜನ ಸಮಸ್ಯೆಗಾಗಿ ಆಮರಣ ಉಪವಾಸ, ದಿವ್ಯ ತಪಸ್ಸು ಮಾಡಿದಾಗ ಇವರು ಇನ್ನುಮುಂದೆ ಹರಿಜನ ಸೇವೆಗೆ ಸಂಬಂಧಪಡದ ಯಾವುದೇ ಸಂಸ್ಥೆಯಲ್ಲಿ ತಾನು ಇರಬಾರದೆಂದು ಸಂಕಲ್ಪ ಮಾಡಿದರು. ಹೀಗಿದ್ದರು ಈ ಮಹಾಜೀವಿಗಳು.

ಜಿಲ್ಲಾ ಕಾಂಗ್ರೆಸ್ ಸಂಘಟನೆ ಕೈಕೊಂಡಾಗ ಮತ್ತು ಗಾಂಧೀ-ಇರ್ವಿನ್ ಒಪ್ಪಂದದ ಕಾಲದಲ್ಲಿ ಶಿರ್ಸಿಯಲ್ಲಿ ಇವರ ವಾಸ್ತವ್ಯ. ಚನ್ನಪಟ್ಟಣ ಬಜಾರದ ಒಂದು ಮಾಳಿಗೆಯ ಮೇಲೆ ಇವರ ಆಫೀಸು. ಅಲ್ಲಿಯೇ ಒಂದು ಬದಿಗೆ ಇವರ

ಊಟ ವಸತಿ. ಅಲ್ಲಿ ಒಂದು ಕೊಡ, ಒಂದು ಬಾಲ್ದಿ, ಒಂದು ಶಿಗಡಿ, ಒಂದೆರಡು ಸಾಮಾನ್ಯ ಡಬ್ಬಗಳು, ಲ್ಯಾಂಟಿನ್, ಇತ್ಯಾದಿ, ಇಷ್ಟೇ ಇವರ ಆಸ್ತಿ. ಮಲಗಲಿಕ್ಕೆ ಈಚಲಚಾಪೆ; ಆದೂ ಪೇಟಿಯಲ್ಲಿ ಮಣಸಿನಕಾಯಿ ಅಂಡಿಗೆಗೆ ಸುತ್ತಿ ಬಂದದ್ದು; ಮೈಮೇಲೆ ಉಡಲೊಂದು, ಹೊದಿಯಲೊಂದು ಎರಡು ಉರುಟು ಖಾದಿತುಂಡು. ಬೆಳಿಗ್ಗೆ ಎದ್ದು ಬಾವಿಗೆ ಹೋಗುವಾಗ ಕೊಡ, ಬಾಲ್ದಿ, ತಂಬಿಗೆ ತಕ್ಕೊಂಡು ಹೋದರೆ ಅಲ್ಲೇ ಸ್ನಾನ ತೀರಿಸಿ ನೀರು ತಕ್ಕೊಂಡು ಬರುವರು. ಊಟಕ್ಕೆ ಸಾದಾ ಸಪ್ಪನ್ನ ಕಿಚಡಿ. ಇದರಲ್ಲಿ ಅಕ್ಕಿ, ಬೇಳೆ, ತರಕಾರಿ, ಉಪ್ಪು, ಅರಿಶಿನದ ಹಿಟ್ಟು ಇವೇ ಪಂಚ ಪಕ್ವಾನ್ನವಾಗುವುದು. ಜೊತೆಗೆ ಕೊಬರಿಎಣ್ಣೆ, ಕೊನೆಗೆ ತುಸು ಹಾಲು. ಈ ಸಪ್ತ ವಸ್ತುಗಳನ್ನಲ್ಲದೆ ಮತ್ತೊಂದು ಮುಟ್ಟಿಲ್ಲ; ಮೂಸಿಲ್ಲ. ಹಗಲಿರುಳು ತಾವು ಹಿಡಿದ ಕಾರ್ಯ, ಜನಸೇವೆಯ ಹಂಬಲ, ಚಿಂತನೆಯಲ್ಲಿ ಮಗ್ನರು. ಈ ನಿಸ್ಸಂಗಿ–ಅಸಂಗ್ರಹವ್ರತಧಾರಿಗಳು ಅದೆಷ್ಟೋ ಕಾಲ ಮಣ್ಣಿನ ಬಟ್ಟಲನ್ನೂ ಬಳಸುತ್ತಿದ್ದರು. ಶ್ರೀ ರಾಮಕೃಷ್ಣ ಹೆಗ್ಗಡೆ ಕಡವೆ, ಶ್ರೀ ಪಟವರ್ಧನ ಮುಂತಾದ ದೇಶಾಭಿಮಾನಿ ಸದ್ಗೃಹಸ್ಥರು ಕೆಲವರು ಯಾವಾಗಲು ಸಲಹೆ, ಸಹಚಿಂತನಕ್ಕೆ ಬರುತ್ತಿದ್ದರು. ಜಿಲ್ಲಾ ಕಾಂಗ್ರೆಸ್ ಕಮಿಟಿಯ ಸಂಘಟನೆ ಹಾಗು ಜನಜಾಗೃತಿ ಮಾಡುತ್ತಿರುವ ಇವರು ಕೆಲವು ಕಾಲ ಅಧ್ಯಕ್ಷರು, ಕಲವು ಕಾಲ ಉಪಾಧ್ಯಕ್ಷರು ಆದರೂ ಆಗಲೂ ಸೆಕ್ರೆಟರಿಯ ಕೆಲಸಕ್ಕೂ ಇವರೇ. ಸ್ವಯಂಸೇವಕರು ಡ್ರ್ಯಾಫ್ಟ ಮಾಡುವವರು ಇವರು; ಪ್ರತಿನಕಲು ಮಾಡುವವರಲ್ಲಿ ಬರವಣಿಗೆಯಲ್ಲಿ ಕೂಡ ಅಷ್ಟೇ. ಕಾರ್ಯದರ್ಶಿ ಕೇವಲ ಸಹಾಯಕರಾಗಿರುತ್ತಿದ್ದರು.

ಹಳ್ಳಿಗೆ ಹೋದಾಗ ಬಡ ರೈತರು ಇವರಿಗೆ ಕುಡಿಯುಲು ಎಳನೀರು ಕೊಡುತ್ತೇವೆಂದರೆ ಅದನ್ನು ತಕ್ಕೊಳ್ಳುತ್ತಿರಲಿಲ್ಲ. ಆ ಬಡವರಿಗೆ ಹಾನಿ ಮಾಡ ಬಾರದೆಂದು ನೀರಡಿಕೆಯಾದರೂ ಸಹಿತ ತಡೆದುಕೊಂಡಿರುತ್ತಿದ್ದರು. ಹೀಗೆ ಇವರು ತತ್ತ್ವನಿಷ್ಠ, ತ್ಯಾಗಮಯ ಜೀವನ ಬರೆಯುವದು ಶಕ್ತಿಗೆ ಮೀರಿದ್ದಾಗಿದೆ. ದೇಶ ಕ್ಕಾಗಿ ದುಡಿದವರೂ ಮಡಿದವರೂ ಅದೆಷ್ಟೋ ಜನರಿದ್ದಾರೆ. ಆದರೆ ನಾಯಕ ಮಾಸ್ತರರಂತೆ ಧನ, ಮಾನ, ಅಧಿಕಾರಸ್ಥಾನ ಹಾಗೂ ಕೀರ್ತಿಗಳನ್ನು ಕಡೆಗಣಿಸಿ ನಿರ್ಮಮ, ನಿರಹಂಕಾರೀ, ಅನಿಕೇತರಾಗಿ ದೇಶಧರ್ಮಕ್ಕಾಗಿ ದೇಹ ಸವೆಯಿಸಿ ದವರು ಎಷ್ಟಿದ್ದಾರೆ?

# ಸಮಾಜಸೇವಕ

## ರಮಾನಂದ ರಂಗೈನ

ನಾನು ನನ್ನ ಕಾಲೇಜ ಶಿಕ್ಷಣ ಮುಂದುವರಿಸಲು ಬೆಳಗಾಂವಿಗೆ ಹೋದವನು ಪೂ। ವಿನೋಬಾರ ಭೂದಾನ ವಿಚಾರದಿಂದ ಪ್ರೇರಿತನಾಗಿ ಭೂದಾನ ಮೂಲಕ ಗ್ರಾಮೋದ್ಯೋಗ ಪ್ರಧಾನ ಅಹಿಂಸಕ ಕ್ರಾಂತಿಗೆ ನನ್ನ ಜೀವನ ದಾನಕೊಟ್ಟೆನು. ನಾನು ಶ್ರೀ ರಾಮಕೃಷ್ಣ ಪ್ರಭುರಲ್ಲಿ ಚಂದಗಡದಲ್ಲಿದ್ದೆ. ಅವರೂ ತಮ್ಮ ಜೀವನ ದಾನ ಮಾಡುವ ಸಂಕಲ್ಪ ಮಾಡಿದ್ದರು. ನಾನು ಸಂಕಲ್ಪ ಮಾಡಿದ ನಂತರ ಶ್ರೀ ತಿಮ್ಮಪ್ಪ ನಾಯಕರಿಗೆ ಒಂದು ಪತ್ರ ಬರೆದೆನು. ಜೊತೆಯಲ್ಲಿ ಶ್ರೀ ರಾಮಕೃಷ್ಣ ಪ್ರಭುರವರು ಸಹ ಒಂದು ಪತ್ರವನ್ನು ನನ್ನ ವಿಷಯವಾಗಿ ಶ್ರೀ ನಾಯಕ ಮಾಸ್ತರರಿಗೆ ಬರೆದರು. ಆಗ ಶ್ರೀ ನಾಯಕ ಮಾಸ್ತರರು ಭೂದಾನ ಚಳುವಳಿಯ ಪ್ರಾಂತದ ಸಂಯೋಜಕರಾಗಿದ್ದರು. ಹಾಗೆ ನೋಡಿದರೆ ನನಗೆ ಶ್ರೀ ನಾಯಕ ಮಾಸ್ತರರು ಅಣ್ಣಂದಿರಾಗಬೇಕು. ನನ್ನ ಅಣ್ಣಂದಿರಾದರೂ ಅವರಿಗೆ ನನ್ನ ಪರಿಚಯವಿರಲಿಲ್ಲ. ಶ್ರೀ ರಾಮಕೃಷ್ಣ ಪ್ರಭುರವರು ತಮ್ಮ ಪತ್ರದಲ್ಲಿ ನನ್ನ ಬಗ್ಗೆ ಎಲ್ಲ ಮಾಹಿತಿ ಬರೆದು ನಾನು ಅವರ ಆಫೀಸಿನಲ್ಲಿ ಯೋಗ್ಯ ವಾಗಿ ಕಾರ್ಯವನ್ನು ನಿರ್ವಹಿಸಿಕೊಂಡು ಹೋಗಬಹುದು, ಎಂದು ತಿಳಿಸಿದ್ದರು. ಆಗ ಶ್ರೀ ನಾಯಕ ಮಾಸ್ತರರು ಅವರ ಆಫೀಸ್ ತೂಗಿಸಿಕೊಂಡು ಹೋಗುವವರನ್ನು ಹುಡುಕುತ್ತಲಿದ್ದರು.

ಆದರೆ ಶ್ರೀ ನಾಯಕ ಮಾಸ್ತರರು ಬರೆದ ಉತ್ತರದಿಂದ ಅವರ ವಿಚಾರ ಗಳು ಎಷ್ಟು ಉಚ್ಚ ಮಟ್ಟದಿದ್ದವು, ಎಂಬುದರ ಅರಿವಾಗುತ್ತದೆ. ತಾನು ವಿಚಾರದಿಂದ ಪ್ರೇರಿತನಾಗಿ ಬಂದ ಒಬ್ಬ ಯುವಕನಿಗೆ ಕಾರಕೂನಕಿಯ ಕೆಲಸಕ್ಕೆ ಹಚ್ಚಲು ಬಯಸುವುದಿಲ್ಲ. ಅವನು ವಿಚಾರದಲ್ಲಿ ಪರಿಪಕ್ವನಾಗಿ ಇದೇ ಕಾರ್ಯದಲ್ಲಿ ನಿಷ್ಠೆಯಿಂದ ದುಡಿಯುವಂತೆ ಮಾಡುವದು ತನ್ನ ಕರ್ತವ್ಯ. ಕಾರಣ ಆತನನ್ನು ತನ್ನ ಹತ್ತಿರ ಕಳಿಸಿಕೊಡಲು ತಿಳಿಸಿದರು. ನಿಜವಾಗಿಯೂ ಆ ದಿನಗಳಲ್ಲಿ ಅವರಿಗೆ ಕಾರಕೂನಕಿಯ ಕೆಲಸಕ್ಕಾಗಿ ಒಬ್ಬರ ಅವಶ್ಯಕತೆಯಿತ್ತು. ತಮಗೆ ಎಷ್ಟೇ ತೊಂದರೆ ಗಳಿದ್ದರೂ ತನ್ನ ಅಡಚಣೆಗೋಸ್ಕರ ಇನ್ನೊಬ್ಬರನ್ನು ದುಡಿಯಹಚ್ಚುವುದು ಅವರಿಗೆ ಎಂದಿಗೂ ಸೇರುತ್ತಿರಲಿಲ್ಲ. ಇದು ನಡೆದದ್ದು ೧೯೫೪ರ ಏಪ್ರಿಲ್ ತಿಂಗಳಲ್ಲಿ.

ಅವರು ತನ್ನ ಹತ್ತಿರ ಬರಲು ತಿಳಿಸಿದ ಪ್ರಕಾರನಾನು (೧೯೫೪ರ ಅಕ್ಟೋಬರ್) ಅವರಿದ್ದಲ್ಲಿಗೆ, ಮಾದನಗೇರಿ ಆಶ್ರಮಕ್ಕೆ, ಹೋದೆನು. ಆಗಲೇ ಅವರಿಗೆ ನನ್ನ ಮುಖ ಪರಿಚಯುವಾದದ್ದು. ನಾನು ಈ ವಿಚಾರದಲ್ಲಿ ದೃಢವಾಗಿರುವೆನೇ ಇಲ್ಲವೇ ಎಂಬುದನ್ನು ನೋಡುವುದಕ್ಕಾಗಿ ಹಾಗೂ ಈ ವಿಚಾರದಲ್ಲಿ ನನ್ನ ನಿಷ್ಠೆ ಹೆಚ್ಚಲಿ ಎಂದು ವಿಚಾರಮಾಡಿ ನನ್ನನ್ನು ರಾಮದುರ್ಗ ತಾಲೂಕಿನ ಕಲಹಾಳ ಗ್ರಾಮಕ್ಕೆ ನೀಲಕಂಠ ಗಣಾಚಾರಿಯುವರು ಗ್ರಾಮಸೇವಾ ಕಾರ್ಯ ಮಾಡುತ್ತಿದ್ದಲ್ಲಿ ಕಳಿಸಿದರು. ಅಲ್ಲಿ ೬ ತಿಂಗಳು ಇದ್ದೆ. ಆ ಅವಧಿಯಲ್ಲಿ ಅವರ ಮೊದಲನೇ ಪತ್ರದಲ್ಲಿ ನನಗೆ ಎರಡು ವಿಚಾರಗಳನ್ನು ತಿಳಿಸಿದರು.

೧. ಪರಗುಣ ಪರಮಾಣೂನ ಪರ್ವತೀಕೃತ್ಯ ನಿಜಹೃದಿ ವಿಲಸಂತಿ ಸಂತಃ.

೨. Let us not judge others. ನಾವು ಸಮಾಜದಲ್ಲಿ ಕೆಲಸ ಮಾಡುವಾಗ ಇತರರ ದೋಷಗಳನ್ನು ನೋಡುವುದು ಬಹಳ. ಆದ ಕಾರಣವೇ ಅವರು ೧ನೇಯ ಉಪದೇಶಪರವಾಕ್ಯ ತಿಳಿಸಿದ್ದು. ಅದಕ್ಕೆ ಪೂರಕವಾಗಿ ಏಸುವಿನ ಎರಡನೇ ವಾಕ್ಯವನ್ನು ತಿಳಿಸಿದ್ದರು. ನಂತರದ ಅವರ ೨೦ ವರ್ಷಗಳ ಸಂಪರ್ಕದಲ್ಲಿ ನಾನು, ಅವರು ಇವೆರಡನ್ನೂ ಆತ್ಮಸಾತ್ ಮಾಡಿಕೊಂಡಿದ್ದರೆಂದು ಕಂಡೆನು. ಯಾವದಾದರೊಂದು ಚರ್ಚೆ ನಡೆದಾಗ ಕೊನೆಯ ನಿರ್ಣಯಕ್ಕಾಗಿ ಅವರನ್ನೇ ಕೇಳಲಾಗುತ್ತಿತ್ತು. ಕಾರ್ಯಕರ್ತರೊಳಗಿನೆ ತರ್ಕ–ವಿತರ್ಕಗಳಲ್ಲಿ ಬಾಗವಹಿಸದೆ ಕೊನೆಗೆ ನಿರ್ಣಯ ಅವರ ಬಾಯಿಯಿಂದ ಹೊರ ಬೀಳುತ್ತಲೇ ಎಲ್ಲರಿಗೂ ಸಮಾಧಾನ ವಾಗುತ್ತಿತ್ತು. ಅವರಲ್ಲಿ ಮೇಲೆ ತಿಳಿಸಿದ ಎರಡೂ ವಿಚಾರಗಳು ಆತ್ಮಸಾತ್ ಆಗಿದ್ದರಿಂದಲೇ ಎಲ್ಲರಿಗೂ ಸಮಾಧಾನವಾಗುತ್ತಿತ್ತು, ಎಂದು ನನ್ನ ಗ್ರಹಿಕೆ. ೧೯೫೫ ರಿಂದ ೧೯೫೭ರ ವರೆಗೆ ಅವರ ಜೊತೆಯಲ್ಲಿ ಇರುವ ಭಾಗ್ಯ ನನ್ನ ಪಾಲಿಗೆ ಬಂತು. ಹೀಗೆ ಜೊತೆಯಲ್ಲಿ ಇರಬೇಕಾದರೂ ಪೂರ್ವಜನ್ಮದ ಪುಣ್ಯ ಬೇಕು, ಎಂದು ನನಗೀಗ ತೋರಹತ್ತಿದೆ. ಆ ದಿನಗಳಲ್ಲಿ ಪ್ರತಿದಿನ ಸಾಯಂಕಾಲ ತಿರುಗಾಡಲು ಹೋಗುತ್ತಿದ್ದೆವು. ಏನಾದರು ಚರ್ಚೆ ನಡೆಯುತ್ತಿತ್ತು. ಆಗ ಅವರು ನನಗೆ ಎಚ್ಚರಿಕೆಯ ಮಾತು ಹೇಳಿದ್ದು ನನಗೆ ಚಿಂತನೆಗೆ ದಾರಿಯಾದಂತಾಯಿತು. ಹೀಗೆ ತಿರುಗಲು ಹೋದಾಗ ಮೌನದಿಂದಿರುವುದು ಅವರಿಗೆ ಹೆಚ್ಚಾಗಿ ಸೇರುತ್ತಿತ್ತು. ಇಡೀ ದಿನ ಮಾಡಿದ ಕಾರ್ಯದಲ್ಲಿ ಎಲ್ಲಿ ತಪ್ಪು ಆಗಿದೆ, ಎಲ್ಲಿ ಒಳ್ಳೆಯದು ಆಗಿದೆ, ತಪ್ಪಾದ ಬಗ್ಗೆ ದೇವರೆದುರಿಗೆ ಪಶ್ಚಾತ್ತಾಪ ಹಾಗೂ ಇನ್ನು ಮುಂದೆ ಹಾಗೆ ಆಗದಂತೆ ಜಾಗರೂಕತೆವಹಿಸುವುದು, ಇದಕ್ಕಾಗಿ ಏನೇನು ಮಾಡುವದು, ಎಂಬುದರ ಚಿಂತನೆ ದಿನಾಲೂ ನಡೆಯುತ್ತಿತ್ತು. ಹಾಗೆ ನೋಡಿದರೆ ಅವರ ಮುಖಚರ್ಯೆ ಕಾಯಂ ಚಿಂತನಶೀಲವಾಗಿಯೇ ಇರುತ್ತಿತ್ತು. ಆ ಚಿಂತನದಲ್ಲಿ ಅವರು ತಿರುಗಲು ಹೋದಾಗ ದಾರಿತಪ್ಪುವುದೂ ಇತ್ತು.

ಆ ದಿನಗಳಲ್ಲಿ ನಾನು ಟಾಲ್‌ಸ್ಟಾಯರ ಜೀವನ ಚರಿತ್ರೆ ಓದುತ್ತಲಿದ್ದೆ. ಶ್ರೀ ನಾಯಕ ಮಾಸ್ತರರ ಮೇಲೆ ಟಾಲ್‌ಸ್ಟಾಯ್ ವಿಚಾರದ ಪ್ರಭಾವ ಪ್ರಬಲ ವಾಗಿದೆ, ಎಂದು ತಿಳಿದುಬಂತು. ಟಾಲ್‌ಸ್ಟಾಯರು ೮೦ನೆಯ ವಯಸ್ಸಿನಲ್ಲಿ ಒಕ್ಕಲುತನ ಕೂಲಿಯಾಗಿ ಉಪಜೀವನ ಮಾಡಲು ಒಂದು ಹಳ್ಳಿಗೆ ಹೊರಟಿದ್ದರು. ಆ ವಿಚಾರದಿಂದ ಪ್ರೇರಿತರಾಗಿ ಇವರು ತಮ್ಮ ಆಫೀಸನ್ನು ಸಹ ಒಂದು ಹಳ್ಳಿಯಲ್ಲಿ ಇಟ್ಟುಕೊಂಡು ದಿನಾಲು ೨-೩ ತಾಸು ಶ್ರಮದ ಕೆಲಸ ಮಾಡುತ್ತಿದ್ದರು. ತೆಂಗಿನ ಗಿಡಗಳಿಗೆ ನೀರುಣಿಸುವುದು, ದನಗಳ ಸೆಗಣಿ ತೆಗೆದು ಕೊಟ್ಟಿಗೆ ಸಫಾಯಿ ಮಾಡು ವುದು, ಗಿಡಗಳನ್ನು ಹಚ್ಚುವುದು, ಹೀಗೆ ತಮ್ಮ ಮುಪ್ಪಿನ ಕಾಲದಲ್ಲಿ ಸಹ ದುಡಿಯುವುದನ್ನು ನೋಡಿದಲ್ಲಿ ತಾನರಿತ ವಿಚಾರವನ್ನು ತನ್ನ ಜೀವನದಲ್ಲಿ ಅಳವಡಿಸಲು ಅವರೆಷ್ಟು ಪರಿತಪಿಸುತ್ತಿದ್ದರು, ಎಂಬ ಅರಿವಾಗುತ್ತದೆ. ಇಂಥ ಪ್ರಯೋಗ ಮಾಡಿ ಒಕ್ಕಲುತನದಿಂದಲೇ ಜೀವಿಸಬೇಕೆಂದು ಒಂದು ಹಳ್ಳಿಯಲ್ಲಿ ತಮ್ಮ ತಾರುಣ್ಯದಲ್ಲಿ ತಮ್ಮ ಸಹಕಾರ್ಯಕರ್ತರೊಂದಿಗಿದ್ದು ಪ್ರಯೋಗ ನಡೆಸಿ ಮಹಾತ್ಮಾ ಗಾಂಧಿಯವರೊಂದಿಗೆ ಈ ಪ್ರಯೋಗ ಕುರಿತು ಪತ್ರ ವ್ಯವಹಾರ ಮಾಡಿ ಮಹಾತ್ಮಾ ಗಾಂಧಿಯವರು ಈ ಕುರಿತು "ಹರಿಜನ"ದಲ್ಲಿ ಒಂದು ಲೇಖನ ಬರೆದಿದ್ದ ರೆಂದು ಅವರಿಂದ ತಿಳಿದುಬಂತು. ಬಿ. ಎ. ಪರೀಕ್ಷೆ ಪಾಸ್‌ಮಾಡಿ ಬಂದು ಹಾಯಸ್ಕೂಲ್ ಮಾಸ್ತರರಾಗಿದ್ದಾಗ ಅಸಹಕಾರ ಆಂದೋಲನದಲ್ಲಿ ಧುಮುಕಿ, ನಂತರ ಜೀವನ ಶಿಕ್ಷಣಶಾಲೆ ತೆರೆದು ಆ ವಿದ್ಯಾರ್ಥಿಗಳು ಹಾಗೂ ತಾವು ಕಟ್ಟಿಗೆ ಹೊರೆಗಳನ್ನು ಜಂಗಲದಿಂದ ಹೊತ್ತು ತಂದದ್ದನ್ನು ಕೇಳಿದರೆ ಎಂಥವರಿಗೂ ಮೈ ನವಿರೇಳದೆ ಇರಲಾರದು. ಇದೆಲ್ಲದರಿಂದ ತಿಳಿದುಬರುವದೇನೆಂದರೆ, ಅವರೊಬ್ಬ ಕ್ರಾಂತಿಕಾರರಾಗಿದ್ದರು. ತಮ್ಮ ವಿಚಾರದಲ್ಲಿ ಕ್ರಾಂತಿ ಮಾಡಿಕೊಂಡು ಅದನ್ನು ಜೀವನದಲ್ಲಿ ಅಳವಡಿಸಲು ಹೋಗಿ ಜೀವನಕ್ರಾಂತಿ ಮಾಡಿಕೊಂಡ ಇಂಥ ಜೀವಿಗಳು ಸಮಾಜದಲ್ಲಿ ಹೆಚ್ಚಿ ಕೊನೆಗೆ ಇಡೀ ಸಮಾಜವೇ ಈ ರೀತಿ ಆದರೆ "ಸಮಾಜ ಕ್ರಾಂತಿ" ಆದಂತೆ ಎಂದು ಭಾವಿಸಿದ್ದರು. ಕಾರಣ ತಾವರಿತ ವಿಚಾರ ಗಳನ್ನು ತಮ್ಮ ಜೀವನದಲ್ಲಿ ಇಳಿಸಿ ಜೀವನಕ್ರಾಂತಿ ಮಾಡಿಕೊಂಡವರಲ್ಲಿ ಶ್ರೀ ನಾಯಕ ಮಾಸ್ತರರು ಅಗ್ರಗಣ್ಯರಾಗಿದ್ದರು.

ಟಾಲ್‌ಸ್ಟಾಯರ ಜೀವನ ಚರಿತ್ರೆ ಓದುತ್ತಿರುವ ದಿನಗಳಲ್ಲಿ ಅವರ ಹತ್ತಿರ ಒಮ್ಮೆ ಚರ್ಚೆಗೆ ಕುಳಿತಾಗ, "ಎಷ್ಟೆಲ್ಲ ಮಹಾಪುರುಷರಾಗಿ ಹೋದರು; ಆದರೆ ಸಮಾಜವು ಇದ್ದಲ್ಲಿಗೇ ಇದೆ", ಎಂದೆ. "ಹಾಗೇಕೆನ್ನುತ್ತಿ, ಸಮಾಜದಲ್ಲಿ ಬದಲಾವಣೆ ಆಗಿದೆ"; ಎಂದರು. ನಾನಂದೆ: "Reformation ಆಗಿದೆ, ಕಳ್ಳತನ ಹೋಗಿದೆ, ಎಂದು ಕಂಡರೆ, ಕಳ್ಳಸಾಗಾಟ, Black market ಜೋರಾಗಿದೆ. ಇದೂ ಕಳ್ಳತನವಲ್ಲವೇ?" ಎಂದೆ. ಸ್ವಲ್ಪ ಹೊತ್ತು ಸುಮ್ಮನುಳಿದು, ನಂತರ,

"ಹೌದು. ಸಮಾಜದಲ್ಲಿ ಎಷ್ಟೋ ಪರಿವರ್ತನೆಯಾಗಿದ್ದರೂ ಸ್ವಾರ್ಥ ಮಾತ್ರ ಎಳ್ಳಷ್ಟೂ ಕಡಿಮೆಯಾಗಿಲ್ಲ; ಇನ್ನೂ ಹೆಚ್ಚಿದೆ; ಹೆಚ್ಚಾಗುತ್ತಲಿದೆ; ಇದಕ್ಕಾಗಿ ಹಿಂಜರಿಯುವ ಕಾರಣವಿಲ್ಲ. ತನ್ನ ಜೀವನವನ್ನೇ ಇದಕ್ಕಾಗಿ ಮುಡಿಪಿಡುವದು", ಎಂದರು. ಅವರ ಜೀವನ ಆ ಪ್ರಕಾರವಿದ್ದದ್ದರಿಂದಲೇ ನಾನು ಸುಮ್ಮನಾಗ ಬೇಕಾಯಿತು.

ಅವಗು ಯಾವುದೇ ಕೆಲಸವಿರಲಿ, ಸೇವಾಭಾವನೆ, ಈಶ್ವರಾರ್ಪಣ ಬುದ್ಧಿ ಯಿಂದ ಮಾಡುತ್ತಿದ್ದರು; ಯಾವ ಕಾಯಕವನ್ನೂ ಕೀಳೆಂದು ಬಗೆಯುತ್ತಿರಲಿಲ್ಲ. ಒಮ್ಮೆ ಚರ್ಚೆ ನಡೆದಾಗ, ೧೯೩೦ನೇ ಇಸವಿಯಲ್ಲಿ ಅವರು ಒಂದು ಹರಿಜನ ವಸತಿ ಯಲ್ಲಿ ಹರಿಜನರ ಸೇವಾಕಾರ್ಯದಲ್ಲಿ ನಿರತರಾಗಿದ್ದರೆಂದು, ತಿಳಿದು ಬಂತು. ಅವರು ಹರಿಜನರೊಂದಿಗೆ ಅಲ್ಲೇ ವಸತಿಗಿದ್ದು ಏನೂ ಬೇಧಭಾವವಿಲ್ಲದೆ ಅವರೊಂದಿಗೆ ಸಹಭೋಜನ ಮಾಡುತ್ತಿದ್ದರಂತೆ. ಅವರ ಹತ್ತಿರ ಒಂದು ಹಜಾಮತಿ ಮಾಡಿಕೊಳ್ಳುವ ಮಶೀನು ಇತ್ತು. ಆದರಿಂದ ಹರಿಜನರ ತಲೆಗೂದಲುಗಳನ್ನು ಕತ್ತರಿಸುವ ಕೆಲಸಮಾಡುತ್ತಿದ್ದರು. ಆ ದಿನಗಳಲ್ಲಿ ಸವರ್ಣೀಯರೊಬ್ಬರು (ಇವರ ಬಗ್ಗೆ ಆದರವಿದ್ದವರು) ಇವರನ್ನು ತಮ್ಮ ಮನೆಗೆ ಬರಮಾಡಿಕೊಂಡು ಇವರಿಂದ ತಲೆಕೂದಲುಗಳನ್ನು ಕತ್ತರಿಸಿಕೊಳ್ಳುತ್ತಿದ್ದರು. ಯಾವುದೇ ಸೇವೆ ಮಾಡುತ್ತಿರಲಿ, ಅಹಂಕಾರದಿಂದ ಮಾಡಬಾರದು ಎಂಬುದು ಅವರ ಈ ಭಾವನೆಯಿಂದ ವ್ಯಕ್ತವಾಗುತ್ತದೆ. ಹರಿಜನರಿದ್ದಲ್ಲಿಗೆ ತಾನು ಬಂದು ಹಜಾಮತಿ ಮಾಡಿಕೊಂಡರೆ ತನ್ನ ಘನತೆಗೆ ಧಕ್ಕೆ ಬರುತ್ತದೆ ಎಂದು ತಿಳಿದವರ ಮೇಲೆ ಸಹ ತಮ್ಮ ವಿಚಾರ ಹೇರುವ ವೃತ್ತಿ ನಾಯಕ ಮಾಸ್ತರರ ದಾಗಿರಲಿಲ್ಲ. ಅವರಿಗೆ ತನ್ನ ಬಗ್ಗೆ ಇದ್ದ ಆದರವೇ ಅವರಲ್ಲಿ ವಿಚಾರ ಪರಿವರ್ತನೆಗೆ ಕಾರಣವಾದರೆ ಸಾಕು ಎಂಬ ನಿಲುವು ಅವರದು. ಒಂದು ವೇಳೆ ಹಾಗೆ ಆಗದಿದ್ದರೂ ಅವರಿಗೆ ಚಿಂತೆ ಇರಲಿಲ್ಲ.

ಅವರ ಮನೆತನ ಕಟ್ಟಾ ಮಡಿವಂತರ ಮನೆತನ. ಅವರ ಅಣ್ಣನವರಿಗೆ ಸಿದ್ಧಾಪುರದಲ್ಲಿ 'ಮಡಿ ರಾಮಚಂದ್ರ' ('ಅಣವಾಳೊ ರಾಮಚಂದ್ರ'— 'ಅಣವಾಳೊ', ಇದು ಕೊಂಕಣಿ ಶಬ್ದ, ಅಂದರೆ "ಮಡಿ") ಎಂದು ಕರೆಯು ತ್ತಿದ್ದರು. ಅಂತಹ ಮಡಿವಂತರ ಮನೆತನದಲ್ಲಿ ಹುಟ್ಟಿ ಇಂಥ ಕಾರ್ಯ ಮಾಡ ಬೇಕಾದರೆ ಅವರ ಮನಸ್ಸಿನ ತಯಾರಿ ಎಷ್ಟಾಗಿತ್ತು ಎಂಬುದರ ಅರಿವಾಗುತ್ತದೆ. ಒಮ್ಮೆ ಚರ್ಚೆ ನಡೆದಾಗ ಅವರಿಗೆಂದೆ, "ತಮ್ಮಲ್ಲಿರುವ ಕಟ್ಟಾತನ ಮನೆತನದ ದೇಣಿಗೆ ಎಂದು ಕಾಣುತ್ತದೆ". ಅವರು "ಹೌದು" ಎಂದರು. ಏಕೆಂದರೆ ಒಬ್ಬ ಅಣ್ಣ ಕಟ್ಟಾ "ಮಡಿವಂತ"ನಾದರೆ ಇನ್ನೊಬ್ಬ ಅಣ್ಣ ಕಟ್ಟಾ "ದೇವಭಕ್ತ"ರಿದ್ದರು. ಇವರಂತೂ ಕಟ್ಟಾ "ದೇಶಭಕ್ತ"ರಾದರು.

ಅವರಿಗೆ ಬೆವರಿನ ಅನ್ನ ಬಹಳ ಸೇರುತ್ತಿತ್ತು ಶ್ರಮ ಮಾಡದೆ ಬೆವರು ಸುರಿಸದೆ ಗಳಿಸಿದ ಸಂಪತ್ತು ಕೀಳೆಂದು ತಿಳಿಯುತ್ತಿದ್ದರು. ಅವರು ಗಾಂಧೀ ಸ್ಮಾರಕ ನಿಧಿಯ ಕರ್ನಾಟಕ ಶಾಖೆಯ ಸಂಚಾಲಕ ಹಾಗೂ ಭೂದಾನ ಸಮಿತಿಯ ಸಂಯೋಜಕರಾಗಿದ್ದಾಗ ೧೯೫೪ರಲ್ಲಿ ಕೇವಲ ೩೫ರೂ. ನಿರ್ವಾಹ ವೇತನ ತೆಗೆದುಕೊಳ್ಳುತ್ತಿದ್ದರು. ಅದರಲ್ಲಿ ಅವರು ನೀರುಣಿಸಿ ಬೆಳೆದ ತರಕಾರಿ, ತೆಂಗಿನಕಾಯಿ, ಹಣ್ಣುಹಂಪಲುಗಳಿಗೆ ಹಣವನ್ನು ಸಂಸ್ಥೆಗೆ ಪರತ್ ಜಮಾ ಮಾಡುತ್ತಿದ್ದರು. ಹಣದಿಂದ ಜನತೆಯ ಸೇವೆ ಮಾಡಲಾಗುತ್ತದೆ, ಎಂದು ತಿಳಿದು ಹೆಚ್ಚಿನ ಹಣ ಸಂಸ್ಥೆಗಳಿಂದ ಪಡೆದು ಸೇವಾ ಕಾರ್ಯ ಮಾಡುವುದು ಅವರಿಗೆ ಸೇರಿಕೆಯಿದ್ದಿಲ್ಲ. ಸ್ವತಃ ನೂತ ಬಟ್ಟೆಗಳನ್ನು ತೊಡುತ್ತಿದ್ದರು. ಅಂದರೆ ೩೫ರೂ. ಯಲ್ಲಿ ಉಪಜೀವನ ಮಾಡುವುದಿದ್ದರೂ ತಮ್ಮ ಶ್ರಮದ ಗಳಿಕೆಯನ್ನು ಸಂಸ್ಥೆಗೆ ಜಮಾ ಮಾಡುತ್ತಿದ್ದರು. ನನಗೆ ಸಹ ಉಪ ಜೀವನಕ್ಕಾಗಿ ೩೫ರೂ. ಕೊಡುತ್ತಿದ್ದರು. ನಾನು ಪ್ರವಾಸದಲ್ಲಿದ್ದಾಗ ಊಟದ ಖರ್ಚು ಬೀಳದೆ ೧ ವರ್ಷದಲ್ಲಿ ೮೦ರೂ. ಯಷ್ಟು ಸಂಸ್ಥೆಯಲ್ಲಿ ನನ್ನ ಹೆಸರಿನಲ್ಲೇ ಜಮಾ ಇದ್ದವು. ಆದಿನಗಳಲ್ಲಿ ನನ್ನ ಅಕ್ಕ (ಅಂದರೆ ನಾಯಕ ಮಾಸ್ತರರಿಗೆ ತಂಗಿ ಯಾಗಬೇಕು.) ಕೆಲತಿಂಗಳು ಶ್ರೀ ನಾಯಕ ಮಾಸ್ತರರಲ್ಲಿ ಇರಲಿಕ್ಕೆ ಬಂದಿದ್ದರು. ನಮ್ಮ ಅಕ್ಕ ಹಿಂದೆ ರಾಷ್ಟ್ರೀಯ ಅಂದೋಲನದಲ್ಲಿ ಜೇಲಿಗೆ ಹೋದವಳಿದ್ದುದರಿಂದ ಶ್ರೀ ನಾಯಕ ಮಾಸ್ತರರಿಗೆ ಆಕೆಯ ಪರಿಚಯವಿದ್ದಿತು. ಆ ದಿನಗಳಲ್ಲಿ ಶ್ರೀ ನಾಯಕ ಮಾಸ್ತರರು ಮೂಲವ್ಯಾಧಿಯಿಂದ ಬದುಕುವ ಆಶೆಯನ್ನು ಸಹ ಬಿಟ್ಟವರಿದ್ದರು. ಅವರ ಸೇವೆಗಾಗಿ ಶ್ರೀಮತಿ ಅಮರಾವತಿ ಅಕ್ಕನವರಿದ್ದರೂ ಇನ್ನೊಬ್ಬರ ಅವಶ್ಯಕತೆಯಿದ್ದಿತು. ನಮ್ಮ ಅಕ್ಕ ಬಂದಿದ್ದು ಬಹಳ ಅನುಕೂಲವಾಗಿದ್ದಿತು. ಆಕೆಯ ಖರ್ಚಿನ ಬಗ್ಗೆ ವ್ಯವಸ್ಥೆ ಹೇಗೆ ಮಾಡುವುದು, ಎಂಬ ವಿಚಾರದಲ್ಲಿದ್ದಾಗ ನನ್ನ ೮೦ ರೂ. ಒಂದು ವರ್ಷದಲ್ಲಿ ಶಿಲ್ಕು ಇದ್ದಿದ್ದರ ನೆನಪು ಆಗಿ ಅವರು ಅದನ್ನು ಈ ಬಗ್ಗೆ ಬಳಸಬಹುದೇ ಎಂದು ನನ್ನನ್ನು ಕೇಳಿದರು. ನಾನು ಒಪ್ಪಿಗೆಯನ್ನಿತ್ತೆ. ಒಂದು ಸಂಸ್ಥೆಯ ಸಂಚಾಲಕರಿದ್ದು ತನ್ನ ಬಗ್ಗೆ ಕೇವಲ ೩೫ರೂ. ನಿರ್ವಾಹ ವೇತನ ಪಡೆದು, ತನ್ನ ಶ್ರಮದ ಉತ್ಪನ್ನವನ್ನೆಲ್ಲಾ ಸಂಸ್ಥೆಗೆ ಜಮಾಮಾಡಿ, ಸಂಸ್ಥೆಯಲ್ಲಿ ನಿಷ್ಠೆಯಿಂದ ದುಡಿದು ತಮ್ಮ ತಂಗಿಯ ಖರ್ಚಿನ ಬಗ್ಗೆ (ಅದೂ ತನ್ನ ಸೇವೆಗಾಗಿಯೆ ಬಂದಾಗ) ಆ ಸಂಸ್ಥೆಯಿಂದ ಹಣ ತೆಗೆದುಕೊಳ್ಳುವುದು ಯೋಗ್ಯವಲ್ಲವೆಂದು ತಿಳಿದು ತೆಗೆದುಕೊಳ್ಳದಿರುವುದು ಉಚ್ಚಮಟ್ಟದ ವಿಚಾರ ಸರಣಿಯಲ್ಲವೆ? ಹೀಗೆ ಪ್ರತಿಯೊಂದು ಕೆಲಸಕ್ಕೂ ಪ್ರತೀ ನಿಮಿಷಕ್ಕೂ ಜಾಗರೂಕರಾಗಿದ್ದು ತನ್ನಿಂದ ಅನ್ಯಾಯವಾಗುತ್ತಿಲ್ಲವಷ್ಟೇ ಎಂದು ವಿಚಾರಮಾಡುತ್ತಾ ಜೀವಿಸುವ ವ್ಯಕ್ತಿ ಶ್ರೀ ನಾಯಕ ಮಾಸ್ತರರಾಗಿದ್ದರು.

ಒಮ್ಮೆ ರಾಷ್ಟ್ರಪತಿ ರಾಜೇಂದ್ರ ಪ್ರಸಾದರು ಕುಮಟೆಗೆ ಆಗಮಿಸಿದಾಗ ಶ್ರೀ ಹರಿ ಪೈಯವರೊಂದಿಗೆ ಶ್ರೀ ನಾಯಕ ಮಾಸ್ತರರು ಅವರ ದರ್ಶನಕ್ಕಾಗಿ ಹೋಗಿದ್ದರು. ನೆರೆದ ಜನಸ್ತೋಮದಲ್ಲಿ ತಾವೂ ಒಬ್ಬ ಪ್ರೇಕ್ಷಕರ ಹಾಗೆ

ಕುಳಿತರು. ಡಾ॥ ರಾಜೇಂದ್ರ ಪ್ರಸಾದರು ದೂರದಿಂದ ಇವರನ್ನು ಗುರುತಿಸಿ "ಸದ್ರಿಯವರು ಶ್ರೀ ನಾಯಕ ಮಾಸ್ತರರೆ?" ಎಂದು ಸಮೀಪದಲ್ಲಿದ್ದವರಿಗೆ ವಿಚಾರಿಸಿ, ಅವರು ನಾಯಕ ಮಾಸ್ತರರೆಂದು ತಿಳಿಯುತ್ತಲೇ ಅವರನ್ನು ಕರೆಯಿಸಿ ಕೊಂಡರು. ಇದರ ವರ್ತಮಾನ ಪತ್ರಿಕೆಯಲ್ಲಿ ಬಂದಾಗ ಶ್ರೀ ಸಿದ್ಧವನಹಳ್ಳಿ ಕೃಷ್ಣಶರ್ಮ, ಶ್ರೀ ರಾಮಚಂದ್ರ ವಡವಿ ಹಾಗೂ ಶ್ರೀ ಮಲ್ಲಿಕಾರ್ಜುನಪ್ಪ ಗೌಡ್ರು ಎಣ್ಣೆಕೊಪ್ಪ ಇವರು ನಮ್ಮಲ್ಲಿಗೆ ಬಂದವರು ತಮ್ಮ ತಮ್ಮಲ್ಲಿ ಈ ಸಮಾಚಾರದ ಕುರಿತು ಚರ್ಚಿಸುತ್ತಿದ್ದರು. ಒಬ್ಬರೆಂದರು: ಇನ್ನುಮುಂದೆ ನಾಯಕ ಮಾಸ್ತರರ ಹತ್ತಿರ ಅಧಿಕಾರಿಗಳ ಹತ್ತಿರ ವಶೀಲಿ ಹಚ್ಚಲು ಜನರು ಬರಹತ್ತಬಹುದು. ಇನ್ನೊಬ್ಬರೆಂದರು, " ಡಾ॥ ರಾಜೇಂದ್ರ ಪ್ರಸಾದರು ರಾಷ್ಟ್ರಪತಿಯಾಗಿರದಿದ್ದರೆ ಶ್ರೀ ನಾಯಕ ಮಾಸ್ತರರ ಹಾಗೆ ಜೀವಿಸುತ್ತಿದ್ದರೆಂದು ಕಾಣುತ್ತದೆ". ಮತ್ತೊಬ್ಬರೆಂದರು, "ಡಾ॥ ರಾಜೇಂದ್ರ ಪ್ರಸಾದರು ಶ್ರೀ ನಾಯಕ ಮಾಸ್ತರರನ್ನು ಗುರುತಿಸಿ ತಮ್ಮ ಹತ್ತಿರ ಕರೆದದ್ದರಿಂದ ಇತರ ರಾಜಕಾರಣಿಗಳಿಗೆ ಛೀ ಮಾರಿಯಾಗಿರಬಹುದು". ಈ ಎಲ್ಲ ಚರ್ಚೆಯ ವಿಷಯ ಶ್ರೀ ನಾಯಕ ಮಾಸ್ತರರಿಗೆ ತಿಳಿಸಿದಾಗ ಅವರಿಂದ ಬಂದ ಉತ್ತರವಿದು: ೧೯೪೮ರಲ್ಲಿ ಮಹಾತ್ಮಗಾಂಧಿಯವರು ತೀರಿಕೊಂಡ ಬಳಿಕ ದೇಶದ ಹಿರಿಯ ಗಾಂಧೀ ವಿಚಾರವಂತರು ಸೇವಾಗ್ರಾಮದಲ್ಲಿ ಸೇರಿದ್ದರಂತೆ. ಆ ಸಮ್ಮೇಳನಕ್ಕೆ ಡಾ॥ ರಾಜೇಂದ್ರ ಪ್ರಸಾದರು ಸಹ ಬಂದಿದ್ದರಂತೆ. ಅಲ್ಲಿ ಒಂದು ಸಮಿತಿ ರಚಿಸಲಾಗಿತ್ತಂತೆ. ಆಸಮಿತಿಯಲ್ಲಿ ಯಾವುದೇ ರಾಜಕಾರಣದಲ್ಲಿ ಸೇರದವರು, ತಮ್ಮ ವ್ಯಕ್ತಿತ್ವದ ಪ್ರಭಾವ ಬೇರೆಯವರ ಮೇಲೆ ಬೀರಿ ಕೆಲಸಮಾಡಿಸಿಕೊಳ್ಳದವರು, ಅಧಿಕಾರಿಗಳ ಬೆನ್ನುಬಿದ್ದು ಕಾರ್ಯ ಮಾಡಿಸದವರು, ಮೆಂಬರೆಂದು ತೆಗೆದುಕೊಂಡಿದ್ದರಂತೆ. ಅಂಥ ಆರಿಸಿದ ಕೆಲವೇ ಮೆಂಬರಲ್ಲಿ ಶ್ರೀ ನಾಯಕ ಮಾಸ್ತರರು ಒಬ್ಬರಾಗಿದ್ದರಂತೆ. ಇಂಥ ಮೆಂಬರರ ಸಭೆಯಲ್ಲಿ ಡಾ॥ ರಾಜೇಂದ್ರ ಪ್ರಸಾದರು ಇವರನ್ನು ಕಂಡದ್ದು. ೧೩–೧೪ ವರ್ಷದ ನಂತರ ಪುನಃ ನೆರೆದ ಜನಸ್ತೋಮದಲ್ಲಿ ಇವರನ್ನು ಗುರುತಿಸಿದ್ದನ್ನು ನೋಡಿದರೆ ಡಾ॥ ರಾಜೇಂದ್ರ ಪ್ರಸಾದರ ಸ್ಮರಣಶಕ್ತಿ, ಹಾಗೂ ಶ್ರೀ ನಾಯಕ ಮಾಸ್ತರರ ಘನತೆ ವ್ಯಕ್ತವಾಗುತ್ತದೆ.

ಶ್ರೀ ನಾಯಕ ಮಾಸ್ತರರಿಗೆ ಸಾರ್ವಜನಿಕರಿಂದ ಹಣ ಒಟ್ಟುಗೂಡಿಸಿ ಸಾರ್ವಜನಿಕ ಕೆಲಸ ಮಾಡುವುದು ಸೇರುತ್ತಿರಲಿಲ್ಲ. ತಾವಾಗಿ ವಿಚಾರ ಮಾಡಿ ಜನರು ಸೇವಾಕಾರ್ಯಕ್ಕೆ ಹಣ ಕೊಡಬೇಕು. ಅಂಥ ಹಣದಿಂದಲೇ ಏನಾದರೂ ಕೆಲಸವಾಗುತ್ತದೆ, ಎಂದು ನಂಬಿದ್ದರು. ಇತರ ಸಹಕಾರ್ಯಕರ್ತರ ಆಗ್ರಹದ ಮೇರೆಗೆ ಅವರ ಮೇಲಿನ ಆದರ ಹಾಗೂ ಅವರ ನಿಸ್ವಾರ್ಥ ಸೇವಾಬುದ್ಧಿಗೆ ಮಾರು ಹೋಗಿ ಹಣ ಒಟ್ಟುಗೂಡಿಸಲು ಹೋದದ್ದು ಕಂಡುಬಂದರೂ ಅಂಥಿಂಥವರಿಂದ ಅವರು ಹಣ ಸ್ವೀಕರಿಸುತ್ತಿರಲಿಲ್ಲ. ಹಣ ಒಟ್ಟುಗೂಡಿಸುವಾಗ ಸಹ ಅರ್ಥಶುದ್ಧಿಯನ್ನು ನೋಡುತ್ತಿದ್ದರು.

# ನಿಷ್ಕಲಂಕ ಚರಿತ

## ನರಸಿಂಹ ಗೋವಿಂದ ಶಾನಭಾಗ

ತಿಮ್ಮಪ್ಪನಿಗೂ ನನಗೂ ಪರಿಚಯು ಕುಮಟೆಯ ಮಾಧ್ಯಮಿಕ ಶಾಲೆಯಲ್ಲಿ. ಆಗ ೧೯೧೪ನೇ ಸಾಲು. ನ್ನಾಗ್ಸ್ರು ೧೬ ವರುಷದವ. ತಿಮ್ಮಪ್ಪ ೧೪ ವರುಷದವ, ನನಗಿಂತ ಎರಡು ವರ್ಷಗಳಿಂದ ಕಿರಿಯು. ನಾವಿಬ್ಬರೂ ಹುಟ್ಟಿದ್ದು ಆಷಾಢ ಮಾಸದಲ್ಲಿ. ನಾನು ಕುಮಟೆಯುವ, ತಿಮ್ಮಪ್ಪ ಸಿದ್ದಾಪುರದವ. ನಾವಿಬ್ಬರೂ ಬಡಮನೆತನದವರು. ಆ ಕಾಲದಲ್ಲಿ ನಮ್ಮ ಜಿಲ್ಲೆಯೊಳಗೆ ಎರಡೇ ಮಾಧ್ಯಮಿಕ ಶಾಲೆಗಳು. ಕಾರವಾರದಲ್ಲಿ ಸರಕಾರ ಸ್ಥಾಪಿಸಿದ ಮಾಧ್ಯಮಿಕ ಶಾಲೆ; ಕುಮಟೆಯಲ್ಲಿ ನಗರಸಭೆ ೫ನೇ ಈಯುತ್ತೆಗಳನ್ನಷ್ಟೇ ನಡೆಸುತ್ತಿತ್ತು. ಮೇಲಿನ ೬-೭ ಈಯುತ್ತೆಗಳಿಗಾಗಿ ಕುಮಟೆಯುವರು ಕಾರವಾರಕ್ಕೆ ಹೋಗಬೇಕಾಗಿದ್ದಿತು.

೧೯೦೮ನೇ ಸಾಲಿನಲ್ಲಿ ಕುಮಟೆಯೊಳಗೆ ಒಂದು ತರದ ಚಳವಳಿ ಉಂಟಾಯಿತು. ನಗರಸಭೆಯು ಇಂಗ್ಲಿಷ ಶಾಲೆಯ ಅಧ್ಯಾಪಕರ ವಿಷಯ ಒಂದು ಚೌಕಶಿ ನಡೆಸಿ ಅವರನ್ನು ವಜಾಮಾಡಿತು. ಅದೊಂದು ಅನ್ಯಾಯವೆಂದು ಸಾರ್ವಜನಿಕರ ಗ್ರಹಿಕೆಯಾಗಿ ತಾ. ೪-೬-೧೯೦೮ನೇಗೆ ನ್ಯೂ ಇಂಗ್ಲಿಷ ಸ್ಕೂಲ ಎಂಬ ಹೆಸರಿನಿಂದ ಮೆಟ್ರಿಕ್ಯುಲೇಶನ್ ತನಕ ಕಲಿಸುವ ಮಾಧ್ಯಮಿಕ ಶಾಲೆ ಸ್ಥಾಪನೆ ಹೊಂದಿತು. ಗಿಬ್ ಎಂಬವರು ಆ ಕಾಲದಲ್ಲಿ ವಿಭಾಗಾಧಿಕಾರಿಗಳು. ಅವರು ಶಾಲೆಯ ಚಲಾವಣೆಗೆ ಆತಂಕವನ್ನು ಪರಿಹರಿಸಿ ಶಾಲೆಯ ಮೇಲಣ ಕುತ್ತನ್ನು ನಿವಾರಿಸಿದರೆಂಬ ಕಾರಣದಿಂದ ಶಾಲೆಗೆ ಅವರ ಹೆಸರು ಕೊಡಲಾಗಿತ್ತು. ಗಿಬ್ ಹೈಸ್ಕೂಲು ಎಂಬ ಹೆಸರು ಸ್ವಾತಂತ್ರ್ಯ ದೊರೆತ ಮೇಲೂ ಮುಂದರಿಯುತ್ತ ಬಂದಿದೆ. ಈ ಶಾಲೆಯಲ್ಲಿ ನಾವಿಬ್ಬರೂ ೫ನೇ ಈಯುತ್ತೆಯಿಂದ ಸಹಪಾಠಿಗಳಾಗಿದ್ದೆವು. ತಿಮ್ಮಪ್ಪ ವಸತಿಗೃಹದಲ್ಲಿ ವಾಸಿಸುತ್ತಿದ್ದ. ನಾನು ನನ್ನ ಮನೆಯಲ್ಲಿ. ವರ್ಗದೊಳಗಿನ ದೋಸ್ತಿ ಕಾಲಕ್ರಮೇಣ ಸ್ನೇಹರೂಪದಲ್ಲಿ ಪರಿಣಮಿಸಿತು. ವರ್ಗದಲ್ಲಿ ನಾವಿಬ್ಬರೂ ಮತ್ತು ದಿವಂಗತ ತ್ರಿವಿಕ್ರಮ ಬಾಬ ಶಾನಭಾಗ ಎಂಬ ಹೊನ್ನಾವರದವರೂ ಯಾವಾಗಲೂ ಮೊದಲಿನ ಮೂರು ಕ್ರಮಾಂಕಗಳಲ್ಲಿ ಇರುತ್ತಿದ್ದೆವು. ಹೀಗಾಗಿ ನಮ್ಮ ಗೆಳೆತನ ದಿನೇದಿನೇ ದೃಢವಾಗುತ್ತ ಬಂತು.

ಮೆಟ್ರಿಕ್ಯುಲೇಶನ್ ಪರೀಕ್ಷೆಯಲ್ಲಿ ತೇರ್ಗಡೆಯಾದ ಬಳಿಕ ನಾವಿಬ್ಬರು ಇತರರೊಡನೆ ಪುಣೆಯ ಫರ್ಗ್ಯೂಸನ್ ವಿದ್ಯಾಲಯದಲ್ಲಿ ಸೇರಿದೆವು. ಆ ಕಾಲೇಜು ಬಡವರಿಗೆ ಬಹು ಅನುಕೂಲ. ವಿದ್ಯಾಶುಲ್ಕ ತೀರಕಡಿಮೆ, ಟರ್ಮಿಗೆ ರೂ. ೩೦–೦೦, ಅಂದರೆ ತಿಂಗಳಿಗೆ ರೂ. ೫–೦೦ ಮಾತ್ರ. ಆ ಕಾಲದಲ್ಲಿ ನಮಗೆ ಶಾಲೆಯಲ್ಲಿ ಕಲಿಸುತ್ತಿದ್ದ ದಿವಂಗತ ಮಾಧವ ಮಂಜುನಾಥ ಶಾನಭಾಗ ಇವರು ಎಂ. ಎ. ಅಭ್ಯಾಸಕ್ಕಾಗಿ ಫರ್ಗ್ಯೂಸನ್ ವಿದ್ಯಾಲಯದಲ್ಲಿ ಅಭ್ಯಾಸ ಮಾಡಲು ಹೋಗಿದ್ದರು. ಅವರೇ ಮುಂದಾಗಿ ಒಂದು "ಕ್ಲಬ್" ಏರ್ಪಡಿಸಿ ನಮಗೆಲ್ಲ ಊಟದ ಸೌಕರ್ಯವನ್ನು ಒದಗಿಸಿಕೊಟ್ಟಿದ್ದರು. ಅಭ್ಯಾಸ ಮುಗಿಸಿ ಅವರು ಕುಮಟೆಗೆ ಮರಳಿದ ಬಳಿಕ ನಾವು ಖಾನಾವಳಿ ಸೇರಬೇಕಾಯಿತು. ನನಗೆ ಖಾನಾವಳಿ ಊಟ ಒಗ್ಗುತ್ತಿರಲಿಲ್ಲ. ಹವೆಯು ನನ್ನನ್ನು ಬಾಧಿಸುತ್ತಿತ್ತು. ಹೀಗಾಗಿ ನಾನು ಆಗಿಂದಾಗ ಅಸ್ವಸ್ಥ ಬೀಳುತ್ತಿದ್ದೆ. ಆ ಕಾಲದಲ್ಲಿ ತಿಮ್ಮಪ್ಪ ನನ್ನ ಉಪಚಾರ ಮಾಡುತ್ತಿದ್ದ. ಖಾನಾವಳಿಯನ್ನು ಬಿಟ್ಟು ನಾವು ನಾಲ್ಕು ಮಂದಿ ಬಾರಿ ಮಾಡಿ ಅಡಿಗೆ ಮಾಡಿಕೊಳ್ಳುವ ಕ್ರಮವನ್ನು ಕೈಕೊಂಡೆವು. ಅದರಿಂದ ನಮಗೆ ಖರ್ಚು ಕುಗ್ಗಿ ತಲ್ಲದೆ ಸ್ವಚ್ಛ ಊಟದೊರಕಿ ಆರೋಗ್ಯವೂ ದೊರೆಯಿತು. ಆದರೂ ಹವೆಯ ಪ್ರತಿಕೂಲತೆಯಿಂದಾಗಿ ನಾನು ಪ್ರತಿ ಟರ್ಮಿಗೆ ಎಂಬಂತೆ ಅಸ್ವಸ್ಥನಾಗಿ ಸಸೂನ ಆಸ್ಪತ್ರೆಯಲ್ಲಿ ಸರಾಸರಿ ೩೦ ದಿನ ಉಳಿದು ಪರೀಕ್ಷೆಗೆ ಒಂದು ತಿಂಗಳು ಇರುವಾಗ ಆಸ್ಪತ್ರೆಯಿಂದ ಹೊರಬರುತ್ತಿದ್ದೆ. ಅಶಕ್ತತೆಯಿಂದಾಗಿ ನನ್ನಿಂದ ಆಗ ಅಭ್ಯಾಸ ವಾಗುತ್ತಿರಲಿಲ್ಲ. ಆಗ ತಿಮ್ಮಪ್ಪ ನನಗೆ ನೆರವಾಗುತ್ತಿದ್ದ. ನಾವಿಬ್ಬರೂ ಬಿ. ಎ. ತನಕ ಸ್ವಂತ ಅಡಿಗೆಯಿಂದಲೇ ವಿದ್ಯಾಭ್ಯಾಸವನ್ನು ಮುಗಿಸಿದ್ದೆವು.

ಬಿ. ಎ. ಪರೀಕ್ಷೆಯ ಸಮಯ ತಿಮ್ಮಪ್ಪ ನನಗೆ ಮಾಡಿದ ಉಪಕಾರವನ್ನು ನಾನು ಸ್ಮರಿಸಲೇ ಬೇಕು. ಎಂದಿನಂತೆ ಪರೀಕ್ಷೆಗೆ ಎರಡು ತಿಂಗಳು ಇರುವಾಗ ನಾನು ಅಸ್ವಸ್ಥನಾಗಿ ಸಸೂನ ಆಸ್ಪತ್ರೆ ಸೇರಿದೆ. ಅಲ್ಲಿ ಒಂದು ತಿಂಗಳು ಚಿಕಿತ್ಸೆ ಹೊಂದಿ ಮರಳಿ ಕೋಣೆಗೆ ಬಂದೆ. ಆದರೆ ನಿಶ್ಶಕ್ತಿ. ನನ್ನಿಂದ ಏಳಲಿಕ್ಕೂ ಆಗುತ್ತಿರಲಿಲ್ಲ. ಪರೀಕ್ಷೆಗೆ ಒಂದೇ ತಿಂಗಳು ಉಂಟು. ಅಭ್ಯಾಸ ಮಾಡುವ ತಾಕತ್ತು ನನ್ನಲ್ಲಿ ಇರಲಿಲ್ಲ. ನಮ್ಮ ಜೊತೆಗಾರರು ನನ್ನ ಅವಸ್ಥೆ ನೋಡಿ ಪರೀಕ್ಷೆಗೆ ಕೂರುವದು ಬೇಡವೆಂದರು. ಮನೆಗೆ ಮರಳಲು ತಿಳಿಸಿದರು. ಆದರೆ ಅಪ್ರಕಾರ ಹೇಳದವ ನನ್ನ ದೋಸ್ತ ತಿಮ್ಮಪ್ಪ ಮಾತ್ರ. ನಾನು ಪರೀಕ್ಷೆಗೆ ಕೂರದಿದ್ದಲ್ಲಿ ಭವಿಷ್ಯಕ್ಕೆ ಕೊರತೆ ಬರುವದೆಂದು ಆತನ ಭಾವನೆ. ಅದು ವಸ್ತುಸ್ಥಿತಿಯೇ ಇರುತ್ತಿತ್ತು. ಪುನಃ ಕಾಲೇಜಿಗೆ ಬಂದು ಖರ್ಚು ಮಾಡುವಷ್ಟು ಐಪತ್ತು ನನ್ನದಿರಲಿಲ್ಲವೆಂಬ ಸಂಗತಿ ಆತ ತಿಳಿದಿದ್ದ. ಸ್ನೇಹಿತರಿಗೆ ನಾನು ಹೇಳಿದ್ದೇನೆಂದರೆ: 'ಈಗ ನಾನು ಅಭ್ಯಾಸ ಮಾಡುವಂತಿಲ್ಲ. ಪರೀಕ್ಷೆಗೆ ಕೂರುತ್ತೇನೆ. ಪಾಸಾದರೆ ಸರಿ. ಇಲ್ಲ

ವಾದರೆ ಇಲ್ಲ. ಪರೀಕ್ಷೆಗೆ ಕೂರದಿದ್ದಲ್ಲಿ ಆಗುವ ಪರಿಣಾಮವಿಷ್ಟೇ. ಪರೀಕ್ಷೆಯ ಫೀ ತುಂಬಿದೆಯಲ್ಲ?' ನನ್ನದೊಂದು ಅಭ್ಯಾಸಮಾಡುವ ಪದ್ಧತಿ ಇತ್ತು. ವರ್ಗ ದಲ್ಲಿ ಕಲಿಸಿದ್ದನ್ನು ಅದೇ ದಿನ ಗಟ್ಟಿಮಾಡಿ ನಾನು ನಿತ್ಯದ ಅಭ್ಯಾಸವನ್ನು ನಿತ್ಯ ಮುಗಿಸುತ್ತಿದ್ದೆ. ಟರ್ಮ ಪ್ರಾರಂಭದಿಂದ ನಾಲ್ಕೂ ವರುಷಗಳಲ್ಲಿ ನನ್ನ ಪದ್ಧತಿ ಇದೇ. ಪರೀಕ್ಷೆಯ ಸಮಯ ಮಾತ್ರ ನಿದ್ದೆಗೆಟ್ಟು ಅಪರಾತ್ರಿ ತನಕ ಅಭ್ಯಾಸ ಮಾಡುವ ಆಧುನಿಕ ವಿದ್ಯಾರ್ಥಿಗಳ ಕ್ರಮ ನನ್ನದಿರಲಿಲ್ಲ. ಆದರಿಂದಾಗಿ ನನಗೆ ಅಸ್ವಸ್ಥತೆಯಾದರೂ ನಾನು ಪ್ರತಿ ಪರೀಕ್ಷೆಯಲ್ಲಿ ತೇರ್ಗಡೆಯಾಗುತ್ತ ಬಂದೆ; ವರ್ಗ ಕ್ರಮಾಂಕ ನನಗೆ ಸಿಗಲಿಲ್ಲ. ಅದೇ ರೀತಿ ಬಿ. ಎ. ಪರೀಕ್ಷೆಯಲ್ಲೂ ತೇರ್ಗಡೆ ಯಾಗುವೆನೆಂಬ ವಿಶ್ವಾಸ ನನಗಿತ್ತು. ತಿಮ್ಮಪ್ಪನಿಗೂ ನನ್ನ ಪದ್ಧತಿ ತಿಳಿದಿತ್ತು. ಆದರೂ ಆತನ ಮನಸ್ಸಿಗೊಂದು ಕೊರಗು. ಪರೀಕ್ಷೆಯ ಸಮಯ "ಓನರ್ಸ" ಅಭ್ಯಾಸ ಕ್ರಮವನ್ನೂ ಕೊಂಡಿದ್ದೆ. ರಾಜ್ಯಶಾಸ್ತ್ರ ಮೊದಲಾದ ವಿಷಯಗಳನ್ನು ನಾನು ಅಭ್ಯಾಸಿಸುತ್ತಿದೆ. ಆದರೆ ಪರೀಕ್ಷೆಯ ದಿನ ಹಂಗಾಮಿನಲ್ಲಿ ಅಭ್ಯಾಸ ಮಾಡದೆ ತೇರ್ಗಡೆ ಹೊಂದುವ ಸಂಭವ ನನ್ನ ತಿಮ್ಮಪ್ಪನಿಗೆ ತೋರಲಿಲ್ಲ. ನಾನು ನಾಪಾಸಾಗಬಹುದೆಂದು ವ್ಯಥೆಯಿಂದಾಗಿ ತಿಮ್ಮಪ್ಪ ಒಂದು ಹಂಚಿಕೆಮಾಡಿದ. ನನ್ನಿಂದ ಓದಲಾಗುತ್ತಿಲ್ಲ. ಆ ತಾಕತ್ತು ಕಳೆದುಹೋಗಿತ್ತು. ಅದರಿಂದ ತಿಮ್ಮಪ್ಪ ಓದುವಾಗ ನನಗೆ ಕೇಳುವಂತೆ ಓದತೊಡಗಿದ. ನನ್ನ ವಿಷಯವೂ ಅವನ ವಿಷಯವೂ ಒಂದೇ ಇದ್ದು ನಾವಿಬ್ಬರೂ ಒಂದೇ ವರ್ಗದಲ್ಲಿ ಇರುತ್ತಿದ್ದರಿಂದ ತನ್ನ ಪಾಠ ಕೇಳಿ ನನಗೆ ಸಹಾಯವಾಗಬಹುದೆಂದು ತಿಮ್ಮಪ್ಪನ ಗ್ರಹಿಕೆ. ಆದರೆ ನನ್ನ ಅವಸ್ಥೆಯೇ ಬೇರೆಯಾಗಿತ್ತು. ತಿಮ್ಮಪ್ಪ ಅಪರಾತ್ರಿ ತನಕ ಆಭ್ಯಾಸ ಮಾಡುತ್ತಿದ್ದ. ನಾನು ಕೇಳಬೇಕೆಂದು ದೊಡ್ಡದನಿಯಿಂದ ಓದುತ್ತಿದ್ದ. ಆದರೆ ನನಗೆ ಅದನ್ನು ಕೇಳುವದು ಸಹ ಕಷ್ಟದ್ದಾಗಿತ್ತು. ಈ ಸಂಗತಿಯನ್ನು ನಾನು ಆತನಿಗೆ ಹೇಳಿ ನನ್ನ ಬಗ್ಗೆ ವ್ಯಥೆ ಮಾಡಬಾರದೆಂದು ಹೇಳಿದರೂ ಆತ ಸ್ನೇಹಭಾವದಿಂದ ಪಾಠ ಕೇಳುವಂತೆ ಓದುತ್ತಿದ್ದ. ನನಗೆ ನಿದ್ದೆ ಹತ್ತಿದರೂ ಆತನ ಪಾಠ ನಡೆಯುತ್ತಿತ್ತು. ಮುಂದೆ ಪರೀಕ್ಷೆಯಲ್ಲಿ ನಾವಿಬ್ಬರೂ ತೇರ್ಗಡೆಯಾದೆವು. ಆತನಿಗೆ "ಓನರ್ಸ" ಪದವಿ ಸಿಕ್ಕಿತು. ನಾನು ಪ್ರಶ್ನೆಪತ್ರಿಕೆಗಳಲ್ಲಿ ತೇರ್ಗಡೆಯಾದರೂ ನನಗೆ ಪದವಿಗೆ ಅವಶ್ಯವುಳ್ಳಷ್ಟು ಹೆಚ್ಚುವರಿ ಗುಣಗಳು ದೊರಕದೇ ನಾನು ಸಾಮಾನ್ಯ ಬಿ. ಎ. ಪದವಿಯನ್ನು ಪಡೆದೆ.

ಅಸ್ವಸ್ಥತೆಯ ಮೂಲಕ ನಾನು ಕುಮಟೆಗೆ ಮರಳಿ ಆರು ತಿಂಗಳುಗಳಷ್ಟು ಕಾಲ ವಿಶ್ರಾಂತಿ ಪಡೆದೆ. ಆ ಅವಧಿಯಲ್ಲಿ ತಿಮ್ಮಪ್ಪ ತನ್ನ ಅಭ್ಯಾಸ ಕ್ರಮವನ್ನು ಮುಂದುವರಿಸಿದ. ವಕೀಲಿಯ ಅಭ್ಯಾಸವನ್ನೂ ಮಾಡುತ್ತಿದ್ದ. ನಮ್ಮ ಜೊತೆ ಆಗ ಭಿನ್ನವಾದದ್ದು ಕೊನೆತನಕವೂ ಭಿನ್ನವಾಗಿಯೇ ಉಳಿಯಿತು. ಆದರೆ

ನಮ್ಮಿಬ್ಬರೊಳಗಿರುವ ಸ್ನೇಹಭಾವಕ್ಕೆ ಯಾವುದೊಂದು ಕೊರತೆ ಬರಲಿಲ್ಲ. ನನ್ನ ಬಗ್ಗೆ ತಿಮ್ಮಪ್ಪನಲ್ಲಿ ನೆಲೆಗೊಂಡಿದ್ದ ಪ್ರೀತ್ಯಾದರಗಳು ಮಾತ್ರ ಕೊನೆತನಕ ಬಾಳಿದವು. ೧೯೪೭ನೇ ಸಾಲಿನಲ್ಲಿ ಮುಂಬಯಿ ಸರಕಾರ ಆಹಾರ ಸಲಹೆಗಾರ ಮಂಡಳಿಯನ್ನು ಸಂಘಟಿಸಿತ್ತು. ಅದಕ್ಕೆ ಜಿಲ್ಲೆಯ ಪರವಾಗಿ ಒಬ್ಬರನ್ನು ಕಳಿಸಬೇಕಾಗಿತ್ತು. ನಾನು ಆಗ ಕಾಂಗ್ರೆಸ ಸಮಿತಿಯಲ್ಲಿರಲಿಲ್ಲ. ೧೯೪೨ನೇ ಸಾಲಿನಲ್ಲಿ ಮಹಾತ್ಮರಾದಿ ಮಹಾನಾಯಕರನ್ನು ಸೆರೆಹಿಡಿದಾಗ ನಾನು ಕಾಂಗ್ರೆಸ ಸಭಾಸದನಾಗಿದ್ದೆ. ಅನಂತರ ನಾನು ಕಾಂಗ್ರೆಸ ಸಭಾಸದನಿರಲಿಲ್ಲ. ಕಾಂಗ್ರೆಸಿನಿಂದ ಅಲಿಪ್ತನೆಂದೇ ಹೇಳಬೇಕು. ಆದರೂ ಕಾಂಗ್ರೆಸಿನವರು ತನ್ನವನೆಂದು ನನ್ನನ್ನು ಮನ್ನಿಸಿ, ಜಿಲ್ಲೆಯ ಆಹಾರ ಸಲಹಾ ಸಮಿತಿಯಲ್ಲಿ ನನ್ನನ್ನು ನೇಮಿಸಿದ್ದರು. ಪ್ರಾಂತಿಕ ಸಭೆಗೆ ಇಸಮನ್ನು ನೇಮಿಸುವ ಕುರಿತು ಸಮಿತಿ ಪ್ರಮುಖರು ಒಂದು ಸಭೆಯನ್ನು ಕರೆದಿದ್ದರು. ಆ ಸಭೆಗೆ ನನ್ನನ್ನು ನಿಮಂತ್ರಿಸಲಾಗಿತ್ತು. ಸರ್ವಾನುಮತದಿಂದ ಒಬ್ಬರನ್ನು ನೇಮಿಸಬೇಕೆಂದು ಕೂಡಿದವರೆಲ್ಲ ಅಭಿಪ್ರಾಯಪಟ್ಟರು. ಘಟ್ಟದ ಕೆಳಗಿನವರನ್ನು ನೇಮಿಸಬೇಕೆಂದು ಒಂದು ವಾದ, ಘಟ್ಟದ ಮೇಲಿನವರನ್ನು ನೇಮಿಸಬೇಕೆಂದು ಪ್ರತಿವಾದ. ಆ ಕಾಲದಲ್ಲಿ ಜಿಲ್ಲಾ ಕಾಂಗ್ರೆಸ ಕಾರ್ಯಕರ್ತರಲ್ಲಿ ಶಿರಸಿಯ ದಿವಂಗತ ಶ್ರೀ ಶೇಷಗಿರಿರಾವ ಕೇಶವೈನ್‌ರ ಪ್ರಭಾವವಿತ್ತು. ಸಭೆಯಲ್ಲಿ ಚರ್ಚೆಯಾಗುವಾಗ, ನಾನು “ಕಾನಡಾ ವೃತ್ತ” ವಾರಪತ್ರಿಕೆ ಮುಖಾಂತರ ರೇಶನ್ ಮನ್ವಂತರದಲ್ಲಿ ಮಾಡಿದ ಸೇವೆಯನ್ನು ಕೇಶವೈನರು ಸ್ಮರಿಸಿದರು. ವಿಧಾನ ಸಭೆಯ ೧೯೩೭ನೇ ಸಾಲಿನ ಚುನಾವಣೆಯಲ್ಲಿ ಕಾಂಗ್ರೆಸಿನ ಪರವಾಗಿ ನಾನು ಮಾಡಿದ ಪ್ರಚಾರವನ್ನೂ ಶೇಷಗಿರಿರಾಯರು ನೆನಪಿಸಿದರು. ಆದರೆ ಕೇಶವೈನರು ಇಸಮಿನ ನಾಮನಿರ್ದೇಶಮಾಡಲಿಲ್ಲ. ಈ ಸಭೆಯಲ್ಲಿ ತಿಮ್ಮಪ್ಪನಿಗೂ ನಿಮಂತ್ರಿಸಿತ್ತು. ಇಸಮಿನ ನಿರ್ಣಯವನ್ನು ತಿಮ್ಮಪ್ಪನೇ ಮಾಡಬೇಕೆಂದೂ ಅದನ್ನು ಸರ್ವರೂ ಸರ್ವಾನುಮತದಿಂದ ಒಪ್ಪಬೇಕೆಂದೂ ಕೇಶವೈನರು ಸೂಚಿಸಿದ್ದನ್ನು ಸಭೆ ಮನ್ನಿಸಿತು. ಆಗ ತಿಮ್ಮಪ್ಪ ನಿಸ್ಪೃಹ ಜನಸೇವೆಯಿಂದ ಪ್ರಮುಖರ ಮಾನ್ಯತೆಯನ್ನು ಗಳಿಸಿದ್ದ. ಕರ್ನಾಟಕದ ಗಾಂಧಿ ಎಂಬ ಹೆಸರು ಆತನಿಗೆ ಒಪ್ಪುತ್ತಿತ್ತು. ಆದರಿಂದ ಕೇಶವೈನರ ಸೂಚನೆಯನ್ನು ಎಲ್ಲರೂ ಮನ್ನಿಸಿ ಸರ್ವಾಧಿಕಾರವನ್ನು ತಿಮ್ಮಪ್ಪನಿಗೆ ಒಪ್ಪಿಸಿದರು. ನನ್ನ ಹೆಸರನ್ನು ತಿಮ್ಮಪ್ಪನು ಸೂಚಿಸಿದ. ಅದನ್ನು ಸಕಲರೂ ಮನ್ನಿಸಿದ ಮೇರೆಗೆ ನಾನು ಮುಂಬಯಿ ಪ್ರಾಂತಿಕ ಸಲಹೆಗಾರ ಮಂಡಳದ ಸಭಾಸದನಾಗಿ ೨-೩ ವರುಷ ಕೆಲಸಮಾಡಿದೆ.

ಅನಂತರ ನನಗೂ ತಿಮ್ಮಪ್ಪನಿಗೂ ಪ್ರತ್ಯಕ್ಷ ಭೇಟಿಯಾದದ್ದು ೧೯೬೫ನೇ ಸಾಲಿನಲ್ಲಿ ಮಾದನಗೇರಿಯ ಆಶ್ರಮದಲ್ಲಿ. ಮೈಸೂರು ರಾಜ್ಯ ಮದ್ಯಪಾನ

ಪುರಸ್ಕಾರ ಮಾಡಿದ ಕಾರಣ ತಿಮ್ಮಪ್ಪ ಮಾದನಗೇರಿಯ ಆಶ್ರಮದಲ್ಲಿ ನಿರಶನ ಉಪವಾಸ ಕೈಗೊಂಡಿದ್ದ. ಆತನ ಪ್ರಕೃತಿ ದಿನೇದಿನೇ ಕ್ಷೀಣವಾಗುತ್ತದೆಂದು ನನಗೆ ತಿಳಿದು ಬಂತು. ಆಗ ನಾನು ಮಾದನಗೇರಿಗೆ ಹೋಗಿ ತಿಮ್ಮಪ್ಪನನ್ನು ಕಂಡೆ. ಬಹು ಕ್ಷೀಣವಾಗಿದ್ದ, ಆತನಿಗೆ ಮಾತಾಡುವದೂ ಕಷ್ಟದ್ದಾಗಿತ್ತು. ಸರಕಾರದ ಮದ್ಯಪಾನ ಪುರಸ್ಕಾರದಿಂದ ಆತ ವ್ಯಥಿತನಾಗಿದ್ದ. ಆದಕ್ಕಾಗಿ ತಿಮ್ಮಪ್ಪ ಉಪವಾಸ ಮಾಡಿ ದುರ್ನೀತಿಯನ್ನು ಸರಿಪಡಿಸಲು ಪ್ರಯತ್ನಿಸುತ್ತಿದ್ದ. ಗಾಂಧೀ ತತ್ವದಿಂದ ಕೊಂಗ್ರೇಸ ಸರ್ಕಾರ ಚ್ಯುತವಾಗುತ್ತದೆಂದು ಆತನ ಮನವರಿಕೆಯಾಗಿ ತನ್ನ ಮಟ್ಟಿಗೆ ವಿಧಾಯಕ ಕೆಲಸಮಾಡಿ ಜನವೃದ್ಧಿ ಸಾಧಿಸಬೇಕೆಂಬ ಉದ್ದೇಶದಿಂದ ಅಂಕೋಲೆಯಲ್ಲಿ ಗ್ರಾಮಸೇವಾ ಸಮಿತಿಯನ್ನು ನಡಿಸಿದ್ದಲ್ಲದೆ ಸಕಲ ಪ್ರಜೆಗಳಲ್ಲಿ ಏಕರಾಷ್ಟ್ರಭಾವನೆಯನ್ನು ಉಂಟುಮಾಡಬೇಕೆಂಬ ಉದ್ದೇಶದಿಂದ ಗ್ರಂಥಗಳನ್ನು ಬರೆದ. ದುರ್ದೈವದಿಂದ, ಗ್ರಾಮಸೇವಾ ಸಮಿತಿಯಲ್ಲಿ ತಿಮ್ಮಪ್ಪನನ್ನು ಕಾಣಬೇಕೆಂಬ ಇಚ್ಛೆ ನನ್ನದಿದ್ದರೂ ಆ ಯೋಗ ಕೂಡಿ ಬರಲಿಲ್ಲ. ಬೆಳಗಾವಿ ಬಳಿ ಅವನಿಗೆ ಅಪಘಾತವಾದ ಸುದ್ದಿ ಕೇಳಿದೊಡನೆ ನಾನು ಅವನ ಆಶೆ ಬಿಟ್ಟೆ. ಇನ್ನು ತಿಮ್ಮಪ್ಪ ಬದುಕುವುದಿಲ್ಲವೆಂದು ನನ್ನ ಮನದಟ್ಟಾಯಿತು. ಆದರೂ ಕೊನೆಯ ದರ್ಶನ ಪಡೆಯುವ ಯೋಗ ನನಗಿರಲಿಲ್ಲ. ಅದೇ ನನಗೆ ವ್ಯಥೆ. ನನಗಿಂತ ತಿಮ್ಮಪ್ಪ ಎರಡು ವರುಷಗಳಿಂದ ಕಿರಿಯನಾದರೂ ನಿಷ್ಕಲಂಕ ಚಾರಿತ್ರ್ಯದಿಂದಾಗಿ ಆತ ನನಗೆ ಹಿರಿಯನೇ ಸರಿ.

ಒಂದು ನೆನಪನ್ನು ನಮೂದಿಸಲೇಬೇಕು. ತಿಮ್ಮಪ್ಪ ಪದವೀಧರನಾದರೂ ಸರಳಜೀವಿ, ನಿರಾಡಂಬರ ಜೀವಿ. ತಾನೊಬ್ಬ ಪದವೀಧರನೆಂಬ ಅಹಂಕಾರ ಆತನಿಗೆಂದೂ ಸೋಂಕಲಿಲ್ಲ. ನಾವು ಪುಣೆಯಲ್ಲಿ ಇರುವಾಗ ೧೯೧೪ ಜುಲೈ ತಿಂಗಳಲ್ಲಿ ಲೋಕಮಾನ್ಯ ಟಿಳಕರು ಮಂಡಾಲೆ ಸೆರೆಮನೆಯಿಂದ ಮುಕ್ತರಾಗಿ ಬಂದಿದ್ದರು. ಅವರ ನಂತರ ೧೯೧೫ನೇ ಫೆಬ್ರುವರಿ ತಿಂಗಳಲ್ಲಿ ಮಹಾತ್ಮರು ದಕ್ಷಿಣಾಫ್ರಿಕೆಯಿಂದ ನಾಮದಾರ ಗೋಪಾಳಕೃಷ್ಣ ಗೋಖಲೆಯವರ ದರ್ಶನಕ್ಕಾಗಿ ಪುಣೆಗೆ ಬಂದಿದ್ದರು. ನಾನು, ತಿಮ್ಮಪ್ಪ ಹಾಗೂ ನಮ್ಮ ಸಂಗಡಿಗರು ಭಾರತ ಸೇವಕ ಸಂಘದಲ್ಲಿ ಅವರನ್ನು ಕಾಣಹೋಗಿದ್ದೆವು. ಅನಂತರ ೧೯೨೧ನೇ ಸಾಲಿನಲ್ಲಿ ಮಹಾತ್ಮರ ಅಸಹಕಾರ ಪ್ರಾರಂಭವಾಯಿತು. ಆ ಅಂದೋಲನದಲ್ಲಿ ತಿಮ್ಮಪ್ಪ ಧುಮುಕಿದ. ಆತನಷ್ಟು ಸಾಹಸಮಾಡುವ ಪರಿಸ್ಥಿತಿ ನನ್ನದಿರಲಿಲ್ಲ. ನಾನು ೧೯೧೧ನೇ ಸಾಲಿನಲ್ಲಿ ಅಂದರೆ ೧೭ ವರುಷದವನಾಗಿದ್ದಾಗಲೇ ಮದುವೆಯಾಗಿದ್ದೆ. ಆತ ಒಂಟಿ, ಕೊನೆ ತನಕ ಒಂಟಿಯಾಗಿಯೇ ಜೀವನವಿಡೀ ಸವೆಸಿದ. ಆದರೂ ಮಳಲ ಸೇವೆಯೆಂದು ನಾನು ಮಹಾತ್ಮರ ಆದೇಶಕ್ಕನುಸರಿಸಿ ಒಂದು ವರುಷ ಮಾತ್ರ ವಕೀಲಿ ವಿದ್ಯಾಲಯವನ್ನು ಬಹಿಷ್ಕರಿಸಿದ್ದೆ. ತಿಮ್ಮಪ್ಪ ಮಹಾತ್ಮರ ಅನುಯಾಯಿಯಾಗಿ ಗ್ರಾಮ

ಸೇವೆಗೆ ತನ್ನನ್ನು ಅರ್ಪಿಸಿಕೊಂಡ. ೧೯೨೩ನೇ ಸಾಲಿನಲ್ಲಿ ಶ್ರೀ ಗೋಕರ್ಣಕ್ಷೇತ್ರದಲ್ಲಿ ಶ್ರೀ ಭಾರತೀಕೃಷ್ಣತೀರ್ಥ ಸ್ವಾಮೀಜಿಯವರ ಅಧ್ಯಕ್ಷತೆಯಲ್ಲಿ ಪ್ರಾಂತಿಕ ರಾಜಕೀಯ ಪರಿಷತ್ತು ಸೇರಿತ್ತು. ಆ ಪರಿಷತ್ತಿನ ಸಮಯ ತಿಮ್ಮಪ್ಪ ಎಂಜಲು ಎಲೆ ತೆಗೆಯುವ ಕೆಲಸ ಮಾಡುತ್ತಿದ್ದದ್ದನ್ನು ನಾನು ನೋಡಿ ಅವಕ್ಕಾದೆ. ತಾನು ಕಲಿತವ, ದೊಡ್ಡವ ಎಂಬ ಭಾವನೆಗೇ ಆತನಿಗಿರಲಿಲ್ಲ. ನಿರಹಂಕಾರ ಪ್ರತ್ಯಕ್ಷ ವಾಗಿ ನಾನು ನೋಡಿದೆ. ಇದೇ ನಮೂನೆಯಿಂದ ಆತನು ಮರಣ ಪರಿಯಂತ ನಡಕೊಂಡದ್ದಿದೆ. ಅದೇ ಕಾರಣ ಇಂದಿಗೆ ಆತ ಕೀರ್ತಿವಂತನಾಗಿದ್ದಾನೆ. ಕರ್ನಾಟಕದ ಗಾಂಧಿಯೆಂದು ಜನ ಆತನನ್ನು ಹರಸುವಂತಾಗಿದೆ.

ತಿಮ್ಮಪ್ಪನ ಸ್ಮರಣೆ ಮಾಡುವವರು ಆತನ ಸರಳ ಜೀವನವನ್ನು ಮೈಯ್ಯುಗೆಸಿ ಕೊಂಡು ನಿರಾಡಂಬರದಿಂದಲೂ ನಿರಹಂಕಾರದಿಂದಲೂ ಜನಸೇವೆ ಮಾಡುವಂತಾ ದಲ್ಲಿ ಅದೇ ಆತನ ಜೀವಂತ ಸ್ಮಾರಕವಾಗುವದೆಂದು ನಾನು ತಿಳಿಯುತ್ತೇನೆ. ಆ ಪ್ರಕಾರ ವಿಶಾಲ ಸಮಾಜ ನಡಕೊಳ್ಳುವಂತಾದರೆ ರಾಷ್ಟ್ರಪವಿತ್ರವಾಗಿ ಸುಸಂಸ್ಕೃತ ವಾಗಿ, ಚಾರಿತ್ರ್ಯವಂತ ಜನಾಂಗವೆಂದು ಲೋಕಹರಸುವದು.

# ಗಾಂಧೀನಿಷ್ಠ ಕರ್ಮಯೋಗಿ

ರಾಮಚಂದ್ರ ವಡವಿ

೧೯೨೫ ಅಥವಾ ೧೯೨೬ ಎಂದು ಸರಿಯಾಗಿ ಜ್ಞಾಪಕವಿಲ್ಲ. ಆಗ ನಾನು ಕುಮರಿ ಆಶ್ರಮದಲ್ಲಿ ಖಾದಿಕಾರ್ಯದ ವ್ಯವಸ್ಥಾಪಕನಾಗಿದ್ದೆ. ಅದೇ ಕಾಲಕ್ಕೆ ತಿಮ್ಮಪ್ಪ ನಾಯಕರು ಆಶ್ರಮದಲ್ಲಿರಲು ಬಂದಿದ್ದರು. ಅನಂತರ ಅವರು ಕೆಲವು ದಿವಸ ಹುದಲಿಯಲ್ಲಿ ನಡೆದಿದ್ದ ರಾಷ್ಟ್ರೀಯ ಶಾಲೆಯಲ್ಲಿ ಪ್ರಾಧ್ಯಾಪಕರೆಂದು ಕೆಲಸ ಮಾಡುತ್ತಿದ್ದರು. ಆಗಿನಿಂದಲೇ ನನಗೆ ಅವರ ಗಾಢ ಪರಿಚಯವಾಯಿತು. ಮೊಳಕಾಲ ಕೆಳಗೆ ಬರುವಂತಹದೊಂದು ಪಂಚೆ, ಒಂದು ಮೊಂಡುಶರ್ಟು ಇವೇ ಅವರ ಉಡುಪಾಗಿದ್ದವು. ಅವರನ್ನು ನೋಡಿದರೆ ಅವರು ಹೆಚ್ಚು ಕಲಿತವರೆಂದು ಯಾರಿಗೂ ಅನಿಸುತ್ತಿರಲಿಲ್ಲ. ಅವರು ಬಿ. ಎ. ಪಾಸುಮಾಡಿ ಒಂದು ಹಾಯ–ಸ್ಕೂಲಿನ ಹೆಡ್‌ಮಾಸ್ತರರಿದ್ದರು ಎಂಬುದು ಎಷ್ಟೋ ದಿವಸ ಹುದಲಿಯ ಜನರಿಗೂ ಗೊತ್ತಿರಲಿಲ್ಲ. ಅವರ ಪ್ರೇಮಳ ಸ್ವಭಾವ, ಸರಳಜೀವನ ನನ್ನನ್ನು ಮುಗ್ಧಗೊಳಿಸಿದವು. ಅವರ ಬಗ್ಗೆ ಆದರ ಉಂಟುಮಾಡಿದವು.

ತಿಮ್ಮಪ್ಪ ನಾಯಕರು ಕೇವಲ ಗಾಂಧೀವಾದಿಗಳಾಗಿರಲಿಲ್ಲ. ಗಾಂಧೀ ನಿಷ್ಠರೂ ಆಗಿದ್ದರು. ಗಾಂಧೀ ನಿಷ್ಠೆ ಅಂದರೆ ಗಾಂಧೀಜಿಯ ಬಗ್ಗೆ ಕೇವಲ ಅಂಧಶ್ರದ್ಧೆ ಅಥವಾ ಅಂಧಾನುಕರಣವಲ್ಲ. ಗಾಂಧೀಜಿಯವರು ಹೇಳಿದ ತತ್ತ್ವಗಳನ್ನು ಚೆನ್ನಾಗಿ ಅಭ್ಯಸಿಸಿ, ಮನನಮಾಡಿ ಅವುಗಳನ್ನು ತಮ್ಮ ಜೀವನದಲ್ಲಿ ಕಾಯಾ, ವಾಚಾ, ಮನಸ್ಸಿನಿಂದ ತರಲು ಪ್ರಯತ್ನಿಸುವದು. ಈ ರೀತಿ ಆಚರಣೆ ಮಾಡಿದವರಲ್ಲಿ ಕರ್ನಾಟಕದಲ್ಲಿ ತಿಮ್ಮಪ್ಪ ನಾಯಕರು ಅಗ್ರಗಣ್ಯರಾಗಿದ್ದರೆಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ. ಗಾಂಧೀಜಿಯವರ ತತ್ತ್ವಗಳಲ್ಲಿ ಅವರಿಗೆ ದೃಢವಾಗಿ ನಂಬಿಕೆ ಇತ್ತು. ಆ ತತ್ತ್ವಗಳ ಆಚರಣೆ ಅಂದರೆ ಆತ್ಮೋದ್ಧಾರದ ಸಾಧನವೆಂದೂ ಅವರು ತಿಳಿದಿದ್ದರು.

ಗಾಂಧೀಜಿಯವರು ಬೋಧಿಸಿದ ಹನ್ನೊಂದು ವ್ರತಗಳನ್ನು ಶ್ರೀ ನಾಯಕರು ಸಂಪೂರ್ಣವಾಗಿ ತಮ್ಮ ಆಚರಣೆಯಲ್ಲಿ ತಂದಿದ್ದರು. ನಾಯಕರಂತೆ ಈ ವ್ರತಗಳನ್ನು ಆತ್ಮಸಾತ್ ಮಾಡಿಕೊಂಡು ಆಚರಣೆಯಲ್ಲಿ ತಂದವರು ಅಪರೂಪ.

ಗಾಂಧೀಜಿಯುವರ ವಿಚಾರದಲ್ಲಿ ಸತ್ಯ ಮತ್ತು ಅಹಿಂಸೆ ಎರಡೂ ಒಂದೇ ನಾಣ್ಯದ ಎರಡು ಮುಖಗಳಾಗಿದ್ದವು. ಅಹಿಂಸೆಯನ್ನು ಬಿಟ್ಟು ಸತ್ಯವನ್ನು ಪಾಲಿಸುತ್ತೇನೆ ಎಂದು ಹೇಳುವದು ಡಾಂಭಿಕತನ, ಅದರಂತೆ ಸತ್ಯವನ್ನು ಬಿಟ್ಟು ಅಹಿಂಸೆಯನ್ನು ಪಾಲಿಸುತ್ತೇನೆಂದು ಹೇಳುವದು ಭ್ರಮೆ, ಎಂದು ಗಾಂಧೀಜಿ ಅನ್ನುತ್ತಿದ್ದರು.

ಗಾಂಧೀಜಿಯುವರ ವಿಚಾರದಲ್ಲಿ ಹೊಡೆಯುವದು, ಕೊಲ್ಲುವದು ಮುಂತಾದ ದೈಹಿಕ ಹಿಂಸೆ ಮಾತ್ರ ಹಿಂಸೆಯಾಗಿರಲಿಲ್ಲ. ಇವಂತೂ ಹಿಂಸೆ ಸರಿಯೇ. ಕಪಟ, ವಂಚನೆ ಇತರರಿಗೆ ನೋವಾಗುವಂತೆ ಮಾತಾಡುವದು ಇವು ಸಹ ಹಿಂಸೆಯಲ್ಲಿ ಬರುತ್ತವೆಂದು ಗಾಂಧೀಜಿ ಅನ್ನುತ್ತಿದ್ದರು.

ಗಾಂಧೀಜಿಯುವರ ಸತ್ಯದ ವ್ಯಾಖ್ಯೆಯೂ ಅಷ್ಟೇ ಕಠೋರವಾಗಿತ್ತು. ಸುಳ್ಳು ಮಾತಾಡದಿರುವುದಷ್ಟೇ ಸತ್ಯವಾಗಿರಲಿಲ್ಲ. ಅದಂತೂ ಸತ್ಯ, ಆದರೆ ಇತರರಿಗೆ ಪತ್ರ ಬರೆಯುವಾಗ ಅವರಿಗೆ ತಪ್ಪು ಅರ್ಥವಾಗುವಂತೆ ಶಬ್ದ ಪ್ರಯೋಗ ಮಾಡುವದು ಇತರರು ಬರೆದ ಪತ್ರಗಳನ್ನು ಬರೆದವರ ಅಭಿಪ್ರಾಯ ಆ ರೀತಿ ಇಲ್ಲದಿದ್ದರೂ ತಮಗೆ ಬೇಕಾದಂತೆ ಅವುಗಳ ಅರ್ಥಮಾಡುವದು, ಮಾತಾಡುವಾಗ ಇತರರಿಗೆ ತಪ್ಪು ತಿಳಿವಳಿಕೆ ಆಗುವಂತೆ ಮಾತಾಡುವದು ಮುಂತಾದವೆಲ್ಲವೂ ಸತ್ಯ ವ್ರತದ ಭಂಗ ಎಂದು ಗಾಂಧೀಜಿ ಹೇಳುತ್ತಿದ್ದರು. ಆದ್ದರಿಂದಲೇ ತಿಮ್ಮಪ್ಪ ನಾಯಕರು ಯಾರಿಗಾದರೂ ಪತ್ರ ಬರೆಯುವಾಗ ಪ್ರತಿಯೊಂದು ಶಬ್ದ ವಿಚಾರ ಮಾಡಿ ಹಾಕುತ್ತಿದ್ದರು. ತಮ್ಮ ಬರಹದಿಂದ ಇತರರಿಗೆ ತಪ್ಪು ಅರ್ಥವಾಗ ಬಾರದೆಂಬುದರ ಕಡೆಗೆ ಅವರು ವಿಶೇಷ ಲಕ್ಷ್ಯಕೊಡುತ್ತಿದ್ದರು. ಇತರರು ಅವರಿಗೆ ಪತ್ರ ಬರೆದಾಗಲೂ ಅಷ್ಟೆ. ಯಾರಾದರೂ ಪತ್ರ ಬರೆದರೆ ಆ ಪತ್ರದಲ್ಲಿ ಸಂದಿಗ್ಧ-ವಾದ ಶಬ್ದ ಅಥವಾ ವಾಕ್ಯವಿದ್ದರೆ ಅದನ್ನು ತಮಗೆ ಬೇಕಾದಂತೆ ಅರ್ಥ ಮಾಡಿ ಕೊಳ್ಳುತ್ತಿರಲಿಲ್ಲ. ಪತ್ರ ಬರೆದವರಿಗೆ 'ನಿಮ್ಮ ಪತ್ರದಲ್ಲಿಯ ಈ ಶಬ್ದ ಅಥವಾ ವಾಕ್ಯದ ಅರ್ಥ ಹೀಗೆ ಇರಬೇಕಲ್ಲವೇ ಅಥವಾ ಇದಕ್ಕೆ ಬೇರೆ ಅರ್ಥವಾಗಿದ್ದರೆ ಅದನ್ನು ಬರೆದು ತಿಳಿಸಿರಿ' ಎಂದು ಬರೆದು ಕೇಳಿ ಸ್ಪಷ್ಟ ಮಾಡಿಕೊಳ್ಳುತ್ತಿದ್ದರು. ಈ ರೀತಿ ಬರೆದು ನನಗೆ ಸ್ಪಷ್ಟೀಕರಣ ಕೇಳಿದ ಅವರ ಪತ್ರಗಳು ನನ್ನಲ್ಲಿವೆ. ಹಾಗೆಯೆ ಯಾರ ಮನಸ್ಸಿಗೂ ನೋವಾಗುವಂತೆ ಅಥವಾ ಅವರಿಗೆ ತಪ್ಪು ಅರ್ಥ ವಾಗುವಂತೆ ಎಂದೂ ಮಾತಾಡುತ್ತಿರಲಿಲ್ಲ.

ನಾಯಕರ ಸತ್ಯವ್ರತದ ಕಲ್ಪನೆ ಅತಿ ಸೂಕ್ಷ್ಮವಾಗಿತ್ತು. ಪ್ರತಿಯೊಂದು ಕಾರ್ಯವನ್ನೂ ಅವರು ಸತ್ಯದ ಒರೆಗಲ್ಲಿಗೆ ಹಚ್ಚಿ ಕೆಲಸ ಮಾಡುತ್ತಿದ್ದರು.

ಒಂದು ದೃಷ್ಟಾಂತ ಹೀಗಿದೆ: ನಾನು ಗಾಂಧೀ ಸ್ಮಾರಕ ನಿಧಿಯ ಕಾರ್ಯದರ್ಶಿ ಇದ್ದಾಗ ಕರ್ನಾಟಕದಲ್ಲಿ ಹದಿನೈದು ಗ್ರಾಮಸೇವಾ ಕೇಂದ್ರಗಳಿದ್ದವು. ಅವುಗಳಲ್ಲಿ ಹನ್ನೆರಡು ಕೇಂದ್ರಗಳನ್ನು ಗಾಂಧೀ ಸ್ಮಾರಕ ನಿಧಿ ನೇರವಾಗಿ ನಡೆಸುತ್ತಿತ್ತು. ಮೂರು ಕೇಂದ್ರಗಳು ಸಹಾಯಕ ಕೇಂದ್ರಗಳಾಗಿದ್ದವು. ಸಹಾಯಕ ಕೇಂದ್ರಗಳಲ್ಲಿ ತಿಮ್ಮಪ್ಪ ನಾಯಕರದು ಒಂದಾಗಿತ್ತು. ಸಹಾಯಕ ಕೇಂದ್ರವೆಂದರೆ ಗಾಂಧೀಜಿಯವರ ವಿಚಾರದಂತೆ ಯಾರಾದರೂ ಸ್ವಯಂಸ್ಫೂರ್ತಿಯಿಂದ ಗ್ರಾಮಸೇವಾ ಕಾರ್ಯ ಮಾಡುತ್ತಿದ್ದರೆ ಅವರ ಖರ್ಚಿನಲ್ಲಿ ಕೆಲವೊಂದು ಅಂಶ ಆರ್ಥಿಕ ಸಹಾಯ ಗಾಂಧೀ ಸ್ಮಾರಕ ನಿಧಿಯಿಂದ ಕೊಡಲಾಗುತ್ತಿತ್ತು. ಅವರ ಮೇಲೆ ಇಂತಿಷ್ಟೇ ಕೆಲಸ ಮಾಡಬೇಕು, ಇಂತಹ ಕೆಲಸವನ್ನೇ ಮಾಡಬೇಕು, ಎಂಬ ಮುಂತಾದ ನಿರ್ಬಂಧಗಳೇನೂ ಇರಲಿಲ್ಲ. ಅವರು ಪ್ರತಿತಿಂಗಳು ತಮ್ಮ ಕಾರ್ಯದ ವರದಿ ಮತ್ತು ಗಾಂಧೀ ಸ್ಮಾರಕನಿಧಿ ಕೊಟ್ಟ ಹಣದ ಲೆಕ್ಕ ತಲುಪಿಸಿದ್ದರೆ ಆಯಿತು. ಆದರೆ ತಿಮ್ಮಪ್ಪ ನಾಯಕರು ತಮ್ಮ ಕೇಂದ್ರದ ವರದಿ ಮತ್ತು ಗಾಂಧೀ ಸ್ಮಾರಕ ನಿಧಿ ಕೊಟ್ಟ ಹಣದ ಲೆಕ್ಕ ಕಳಿಸುವಾಗ ತಮ್ಮ ಕೇಂದ್ರದ ಯಾವತ್ತು ಲೆಕ್ಕ ಕಳುಹಿಸುತ್ತಿದ್ದರು. ನಾನು ಅವರಿಗೆ ಒಂದೆರಡು ಸಾರೆ, ನಿಮ್ಮ ಕೇಂದ್ರದ ಯಾವತ್ತು ಲೆಕ್ಕ ಕಳಿಸುವ ಆವಶ್ಯಕತೆಯಿಲ್ಲ. ಯಾಕೆಂದರೆ ನಿಮ್ಮ ಕೇಂದ್ರದ ಎಲ್ಲ ಲೆಕ್ಕ ಗಾಂಧೀ ಸ್ಮಾರಕ ನಿಧಿಯ ಲೆಕ್ಕದಲ್ಲಿ ಸಮ್ಮಿಲಿತವಾಗುವದಿಲ್ಲ. ನಿಧಿಯು ನಿಮಗೆ ಕೊಟ್ಟ ಹಣದ ಬಗ್ಗೆ ಲೆಕ್ಕ ಕಳುಹಿಸಿದರೆ ಸಾಕು, ಎಂದು ಪತ್ರ ಬರೆದೆ. ಆದರೂ ಅವರು ಮೊದಲಿನಂತೆಯೆ ಎಲ್ಲ ಲೆಕ್ಕ ಕಳಿಸುತ್ತಲೇ ಇದ್ದರು. ಅವರು ಒಮ್ಮೆ ಭೆಟ್ಟಿಯಾದಾಗ ಈ ಬಗ್ಗೆ ಅವರನ್ನು ನಾನು ವಿಚಾರಿಸಿದೆ. ಅದಕ್ಕೆ ಅವರು ಹೇಳಿದರು, "ಲೆಕ್ಕವನ್ನು ಸರಿಯಾಗಿ ಇಡದಿರುವುದು ಮಾತ್ರ ಸತ್ಯವ್ರತದ ಭಂಗವಲ್ಲ, ನಾವು ಯಾರಿಂದ ಆರ್ಥಿಕ ಸಹಾಯ ಪಡೆಯುತ್ತೇವೆಯೋ ಅವರಿಗೆ ನಮ್ಮ ಆದಾಯ ಎಷ್ಟು, ವೆಚ್ಚ ಎಷ್ಟು ನಮ್ಮ ಕಾರ್ಯಕ್ಕೆ ಇಂತಿಷ್ಟು ಕೊರತೆ ಬೀಳುತ್ತದೆ ಎಂಬುದನ್ನು ಸರಿಯಾಗಿ ತೋರಿಸದೆ ಅವರಿಂದ ಆರ್ಥಿಕ ಸಹಾಯ ಪಡೆಯುವದು ಸಹ ಸತ್ಯವ್ರತದ ಭಂಗ" ಎಂದು.

ಸತ್ಯ–ಅಹಿಂಸೆಗಳಂತೆ ಅಸ್ತೇಯ-ಅಸಂಗ್ರಹಗಳೂ ಒಂದನ್ನೊಂದು ಅವಲಂಬಿಸಿವೆ. ತಿಮ್ಮಪ್ಪ ನಾಯಕರಲ್ಲಿ ಅಸ್ತೇಯ–ಅಸಂಗ್ರಹ ವ್ರತಗಳ ಪಾಲನೆ ಚರಮ ಸೀಮೆ ಮುಟ್ಟಿತ್ತು. ಸ್ತೇಯ ಅಂದರೆ ಕಳವು ಮಾಡುವದು. ಅಸ್ತೇಯ ಅಂದರೆ ಕಳವು ಮಾಡದೆ ಇರುವದು. ಗಾಂಧೀಜಿಯವರ ಅಸ್ತೇಯ ಮತ್ತು ಅಸಂಗ್ರಹ ವ್ರತಗಳ ಅರ್ಥ ಬಹಳ ಸೂಕ್ಷ್ಮವಾಗಿದೆ. ಯಾರದಾದರೂ ವಸ್ತುಗಳನ್ನು ಅವರನ್ನು ಕೇಳದೆ ತೆಗೆದುಕೊಳ್ಳುವದು, ತೆಗೆದುಕೊಂಡ ವಸ್ತುವನ್ನು ಅವರಿಗೆ ತಿರುಗಿಕೊಡದೆ ಇರುವದು ಇವೆಲ್ಲ ಕಳವಿನಲ್ಲಿ ಬರುತ್ತವೆ. ಇಷ್ಟೇ ಏಕೆ ಅಡಿಗೆ

ಮನೆಯಲ್ಲಿಯ ಬೆಲ್ಲವನ್ನು ಯಾರನ್ನೂ ಕೇಳದೆ ಒಂದು ಚೂರು ಬಾಯಲ್ಲಿ ಹಾಕಿಕೊಳ್ಳುವದೂ ಕಳವಾಗುತ್ತದೆ. ಅದರಂತೆ ತಮ್ಮ ಅವಶ್ಯಕತೆಗಿಂತ ಹೆಚ್ಚಾಗಿ ಸಂಗ್ರಹ ಮಾಡುವದೂ ಸ್ತೇಯವಾಗುತ್ತದೆ, ಎಂದು ಹೇಳುತ್ತಿದ್ದರು ಗಾಂಧಿಜಿ.

ತಿಮ್ಮಪ್ಪ ನಾಯಕರ ಅಸ್ತೇಯ–ಅಸಂಗ್ರಹ ವ್ರತಗಳ ಪಾಲನೆಯ ರೀತಿ ಹೀಗಿತ್ತು. ಗಾಂಧೀ ಸೇವಾ ಸಂಘದ ಕಾಲದ ಮಾತು. ಗಾಂಧೀ ಸೇವಾ ಸಂಘದಲ್ಲಿ ಗಾಂಧೀಜಿಯವರ ಸಿದ್ಧಾಂತದಲ್ಲಿ ವಿಶ್ವಾಸವಿದ್ದವರೇ ಅದರ ಸದಸ್ಯರಾಗುತ್ತಿದ್ದರು. ಇಡಿ ದೇಶದಿಂದ ನೂರು ನೂರಿಪ್ಪತ್ತೈದು ಜನರು ಮಾತ್ರ ಅದರ ಸದಸ್ಯರಿದ್ದರು. ಕರ್ನಾಟಕದಿಂದ ಎಂಟು ಹತ್ತು ಜನರಿದ್ದರು. ಅವರಲ್ಲಿ ತಿಮ್ಮಪ್ಪ ನಾಯಕರೂ ಒಬ್ಬರಿದ್ದರು. ಈ ಸಂಘದ ಜನರೆಲ್ಲ ಒಂದೇ ಕುಟುಂಬದ ಜನರಂತೆ ವರ್ತಿಸುತ್ತಿದ್ದರು. ಪ್ರತಿಯೊಬ್ಬರೂ ತಮ್ಮ ಖರ್ಚಿಗೆ ಜೀವನ ನಿರ್ವಹಣಕ್ಕೆ ಎಷ್ಟು ಬೇಕು ಎಂಬುದನ್ನು ತಾವೇ ಹೇಳಿ ಗಾಂಧೀನಿಧಿಯಿಂದ ಅಷ್ಟು ಹಣ ಪಡೆಯುತ್ತಿದ್ದರು. ಅಲ್ಲಿ ಹೆಚ್ಚು ಕಲಿತವರಿಗೆ ಹೆಚ್ಚು, ಕಡಿಮೆ ಕಲಿತವರಿಗೆ ಕಡಿಮೆ ಎಂಬ ಭೇದಭಾವವಿರಲಿಲ್ಲ. ಆದರೆ ಯಾರೂ ಎಪ್ಪತ್ತೈದು ರೂಪಾಯಿಗಳಿಗಿಂತ ಹೆಚ್ಚು ತೆಗೆದುಕೊಳ್ಳಬಾರದೆಂಬ ನಿಯಮವಿತ್ತು. ತಿಮ್ಮಪ್ಪ ನಾಯಕರು ನನಗೆ ಜ್ಞಾಪಕವಿದ್ದಂತೆ ಹದಿನೈದು ರೂಪಾಯಿ ತೆಗೆದುಕೊಳ್ಳುತ್ತಿದ್ದರು. ಆ ಹದಿನೈದು ರೂಪಾಯಿಗೆ ಲೆಕ್ಕವಿಟ್ಟು ಅವುಗಳಲ್ಲಿ ನಾಲ್ಕಾರು ರೂಪಾಯಿ ಉಳಿದವೆಂದು ಗಾಂಧೀನಿಧಿಗೆ ತಿರುಗಿ ಕಳುಹಿಸುತ್ತಿದ್ದರು!

ಅವರ ಅಸಂಗ್ರಹದ ವ್ರತವೂ ಇದೇ ರೀತಿಯದಾಗಿತ್ತು. ಅವರ ಆಸ್ತಿ ಅಂದರೇನು? ಉಟ್ಟ ಪಂಚೆ, ತೊಟ್ಟ ಮೊಂಡಶರ್ಟ, ಒಂದು ಕೈಚೀಲದಲ್ಲಿ ಮತ್ತೊಂದು ಪಂಚೆ, ಒಂದು ಶರ್ಟ, ಒಂದು ಹೊದ್ದುಕೊಳ್ಳುವದು, ಓದಲು ಒಂದು ಪುಸ್ತಕ, ಕೈಯಲ್ಲಿ ಒಂದು ರಾಟೆ. ಇವೇ ಅವರ ಆಸ್ತಿಯಾಗಿದ್ದವು.

ಸತ್ಯ–ಅಹಿಂಸೆ, ಅಸ್ತೇಯ–ಅಸಂಗ್ರಹಗಳಂತೆ ಅಸ್ವಾದ–ಬ್ರಹ್ಮಚರ್ಯಗಳೂ ಒಂದನ್ನೊಂದು ಆಶ್ರಯಿಸಿವೆ. ತಿಮ್ಮಪ್ಪ ನಾಯಕರದು ನೈಷ್ಠಿಕ ಬ್ರಹ್ಮಚರ್ಯೆ ಆಗಿತ್ತು. ಅದರ ಪಾಲನೆಗಾಗಿ ಅವರು ಅಸ್ವಾದ ವ್ರತವನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಿದ್ದರು. ಅವರು ಖಾರ, ಮಸಾಲೆ, ಅಥವಾ ಕರಿದ ಪದಾರ್ಥಗಳನ್ನು ಎಂದೂ ತಿನ್ನುತ್ತಲೇ ಇರಲಿಲ್ಲ. ಕೆಲವೊಂದು ದಿವಸ ಉಪ್ಪು ತಿನ್ನುವುದನ್ನೂ ಬಿಟ್ಟಿದ್ದರು.

ಶ್ರೀ ನಾಯಕರು ತಮ್ಮ ಸ್ವಂತ ಪರಿಶ್ರಮದ ಮೇಲೆಯೇ ಜೀವಿಸಬೇಕೆಂದು ಕೆಲವೊಂದು ದಿವಸ ಸ್ವಲ್ಪ ಹೊಲ ತೆಗೆದುಕೊಂಡು ತಮ್ಮ ಸಹಕಾರಿಗಳೊಂದಿಗೆ ತಾವೇ ಅದರಲ್ಲಿ ದುಡಿಯುತ್ತಿದ್ದರು. ಅದರಲ್ಲಿ ಬಂದ ಉತ್ಪನ್ನದಿಂದಲೇ ಜೀವಿಸುತ್ತಿದ್ದರು.

ಆದರೆ ಈ ಕಾರ್ಯದಲ್ಲಿ ಅವರಿಗೆ ಅನೇಕ ತೊಂದರೆ ಬಂದವು. ಅದನ್ನು ಅವರು ಗಾಂಧೀಜಿಗೆ ಬರೆದು ತಿಳಿಸಿದರು. ಈ ವಿಷಯದ ಕುರಿತು ಗಾಂಧೀಜಿ 'ಹರಿಜನ'ದಲ್ಲಿ ಒಂದು ಲೇಖ ಬರೆದಿದ್ದಾರೆ. ಆ ಲೇಖ ಕನ್ನಡದಲ್ಲಿ 'ಗಾಂಧೀ ಮತ್ತು ಕರ್ನಾಟಕ' ಎಂಬ ಗಾಂಧೀ ಸ್ಮಾರಕ ನಿಧಿಯ ಪ್ರಕಾಶನದಲ್ಲಿ ಪ್ರಸಿದ್ಧವಾಗಿದೆ.

ಶ್ರೀ ತಿಮ್ಮಪ್ಪ ನಾಯಕರು ಅಂಕೋಲೆಯ ಹತ್ತಿರ ಮಾದನಗೇರಿ ಎಂಬಲ್ಲಿ ಹರಿಜನ ಮತ್ತು ಬಡಜನರ ವಸತಿಯ ಹತ್ತಿರವೇ ಒಂದು ಚಿಕ್ಕ ಆಶ್ರಮ ಮಾಡಿ ಕೊಂಡು ಇರುತ್ತಿದ್ದರು. ಗಾಂಧೀ ಸ್ಮಾರಕ ನಿಧಿಯ ಕಾರ್ಯಕರ್ತಿನಿಯರಾದ ಅಕ್ಕಾ ಎಂಬವರು ಅಲ್ಲಿಯೇ ಇರುತ್ತಿದ್ದರು. ಆಶ್ರಮದ ಮೇಲ್ವಿಚಾರಣೆಯನ್ನು ಅವರೇ ನೋಡುತ್ತಿದ್ದರು. ಗಾಂಧೀ ಸ್ಮಾರಕ ನಿಧಿಯ ನೆರವಿನಿಂದ ಹರಿಜನ ಮಕ್ಕಳಿಗೂ ಬಡಜನರ ಮಕ್ಕಳಿಗೂ ಒಂದು ಬಾಲವಾಡಿ, ಔಷಧೋಪಚಾರ ಮುಂತಾದ ಕೆಲಸ ನಡೆಯುತ್ತಿದ್ದವು. ಶ್ರೀ ನಾಯಕ ಮಾಸ್ತರರು ಸ್ವತಃ ಔಷಧೋಪಚಾರ ಮಾಡುತ್ತಿದ್ದರು. ಅಕ್ಕಾ ಅವರು ಹರಿಜನ ಮಕ್ಕಳಿಗೆ ಕಲಿಸು ವುದು, ಬಾಲವಾಡಿ ನಡೆಸುವದು ಮಾಡುತ್ತಿದ್ದರಲ್ಲದೆ ಅವರಿಗೆ ಸೂಲಗಿತ್ತಿತನವೂ ಬರುತ್ತಿತ್ತು. ಬಡ ಹರಿಜನ ಹೆಣ್ಣುಮಕ್ಕಳು ಪ್ರಸೂತಿಗೆಂದು ಬಂದರೆ ಆಶ್ರಮದಲ್ಲಿ ಕಟ್ಟಿದ ಒಂದು ಚಿಕ್ಕ ಕೊಟ್ಟಿಗೆಯಲ್ಲಿ ಅವರ ಹೆರಿಗೆ ಮಾಡಿಸಿ ಹತ್ತುದಿವಸ ಪುಕ್ಕಟೆ ಬಾಣಂತಿತನ ಮಾಡಿ ಕಳಿಸುತ್ತಿದ್ದರು.

ಶ್ರೀ ನಿಜಲಿಂಗಪ್ಪ ಮತ್ತು ಶ್ರೀ ರಾಮಕೃಷ್ಣ ಹೆಗಡೆಯವರ ಮಂತ್ರಿ ಮಂಡಳದ ಕಾಲಕ್ಕೆ ಪಾನ ಪ್ರತಿಬಂಧ ಕಾನೂನಿನ ಸಡಲಿಕೆಯಾಯಿತು. ಅದು ಪ್ರಸಿದ್ಧವೂ ಆಯಿತು. ಅದನ್ನು ಓದಿದ ಕೂಡಲೇ ತಿಮ್ಮಪ್ಪ ನಾಯಕರಿಗೆ ಅತ್ಯಂತ ಕಸಿವಿಸಿಯಾಯಿತು. ಅವರು ಒಮ್ಮೆಲೇ ಹದಿನಾಲ್ಕು ದಿವಸಗಳ ಉಪವಾಸ ಕೈಕೊಂಡರು. ಅದು ವೃತ್ತಪತ್ರಗಳಲ್ಲಿ ಪ್ರಸಿದ್ಧವಾದ ಕೂಡಲೇ ಇಡೀ ಪ್ರಾಂತ ದಲ್ಲಿ ಪಾನಪ್ರತಿಬಂಧ ಕಾನೂನು ಸಡಲಿಕೆಯ ವಿರುದ್ಧ ಉಪವಾಸ ಸತ್ಯಾಗ್ರಹ ಪ್ರಾರಂಭವಾಯಿತು. ಈ ಸತ್ಯಾಗ್ರಹ ಅಂದೋಲನ ಮುಗಿದ ಮೇಲೆ ನಾನು ನಾಯಕ ಮಾಸ್ತರರನ್ನು ಭೆಟ್ಟಿಯಾದಾಗ ವಿಚಾರಿಸಿದೆ: "ನೀವು ಒಮ್ಮೆಲೆ ಹದಿನಾಲ್ಕು ದಿವಸ ಉಪವಾಸದ ಉಗ್ರ ಕ್ರಮ ಏಕೆ ಕೈಗೊಂಡಿರಿ?" ಎಂದು. ಅದಕ್ಕೆ ಅವರು ಹೇಳಿದರು "ಸರಕಾರ ಗಾಂಧೀತತ್ತ್ವಭಂಗ ಮಾಡಿತೆಂದು ನನಗೆ ಅಷ್ಟೊಂದು ದುಃಖ ವಾಗಲಿಲ್ಲ. ಸರಕಾರ ಎಲ್ಲ ಗಾಂಧೀತತ್ತ್ವಗಳನ್ನೂ ಪಾಲಿಸಬೇಕೆಂದು ಯಾರೂ ಹೇಳರು. ಆದರೆ ಈ ಪಾನಪ್ರತಿಬಂಧ ಕಾನೂನಿನ ಸಡಿಲಿಕೆ, ಇತರ ತತ್ತ್ವಗಳಂತೆ ಅಲ್ಲ. ಇದರಿಂದ ಸಹಸ್ರಾರು ಬಡಕುಟುಂಬಗಳು ಹಾಳಾಗುತ್ತವೆ. ಪಾನ ಪ್ರತಿಬಂಧ ಕಾನೂನು ಬರುವುದಕ್ಕಿಂತ ಮೊದಲು ಈ ಬಡಕುಟುಂಬಗಳು ಕೂಲಿ ಯಿಂದ ಬಂದ ದುಡ್ಡನ್ನು ಕುಡಿತಕ್ಕೆ ಹಾಕಿ ಹೊಟ್ಟೆಗಿಲ್ಲದೆ ಒದ್ದಾಡುತ್ತಿದ್ದವು.

ದಿನಾಲು ಹೊಡೆದಾಟ ಬಡಿದಾಟ ನಡೆಯುತ್ತಿದ್ದವು. ಈ ಕಾನೂನು ಜಾರಿಯಲ್ಲಿ ಬಂದ ಮೇಲೆ ಅವೇ ಕುಟುಂಬಗಳು ಎರಡು ಹೊತ್ತು ಹೊಟ್ಟೆ ತುಂಬ ಊಟ ಮಾಡಿ ನೆಮ್ಮದಿಯಿಂದಿವೆ. ಈ ಎರಡೂ ಚಿತ್ರಗಳನ್ನು ನಾನು ಕಣ್ಣಾರೆ ಕಂಡಿದ್ದೇನೆ. ಪಾನಪ್ರತಿಬಂಧ ಕಾನೂನಿನ ಸಡಿಲಿಕೆಯಿಂದ ಮತ್ತೆ ಈ ಕುಟುಂಬಗಳು ಮೊದಲಿನ ಸ್ಥಿತಿಗೆ ಹೋಗುತ್ತವೆಯಲ್ಲ! ಇಡೀ ಪ್ರಾಂತಾದ್ಯಂತ ಇಂಥ ಎಷ್ಟೋ ಕುಟುಂಬಗಳು ನಾಶವಾಗುತ್ತಿವೆಯಲ್ಲ! ಎಂಬ ಕರಾಳ ಚಿತ್ರ ನನ್ನ ಕಣ್ಣಮುಂದೆ ನಿಂತಿತು. ಇದಕ್ಕೆ ಅಹಿಂಸಾತ್ಮಕ ರೀತಿಯಿಂದ ವಿರೋಧ ವ್ಯಕ್ತಮಾಡುವುದಕ್ಕೆ ನನ್ನಂಥವನಿಗೆ ಉಪವಾಸದ ಹೊರತು ಬೇರೆ ಸಾಧನವೇನಿದೆ?" ಎಂದರು. ಅಂದರೆ ಅವರಿಗೆ ಆ ಬಡಜನರ ದುರವಸ್ಥೆಯ ದಾರುಣ ಚಿತ್ರ ಸಹನ ಮಾಡಿಕೊಳ್ಳುವದಾಗಲಿಲ್ಲ. ಬಡಜನರ ಜೀವನದೊಂದಿಗೆ ಅವರು ಅಷ್ಟೊಂದು ತಾದಾತ್ಮ್ಯ ಹೊಂದಿದ್ದರು.

ತಿಮ್ಮಪ್ಪ ನಾಯಕರು ಗಾಂಧೀಜಿಯವರ ತತ್ತ್ವಗಳನ್ನು ನಿಷ್ಠೆಯಿಂದ ಅನುಷ್ಠಾನದಲ್ಲಿ ತಂದು ಸುಮ್ಮನೇ ಕೂತಿರಲಿಲ್ಲ. ಗಾಂಧೀಪ್ರಣೀತ ಖಾದಿ, ಗ್ರಾಮೋದ್ಯೋಗ, ಹರಿಜನಸೇವೆ, ಬಡಜನರ ಸೇವೆ, ಗಾಂಧೀ ತತ್ತ್ವಗಳ ಪ್ರಚಾರ ಮುಂತಾದ ವಿಧಾಯಕ ಕಾರ್ಯಗಳಲ್ಲಿ ನಿಷ್ಕಾಮ ಬುದ್ಧಿಯಿಂದ ನಿರತರಾಗಿದ್ದರು. ಅವರು ಕೆಲವೊಂದು ದಿವಸ ಕರ್ನಾಟಕ ಗಾಂಧೀಸ್ಮಾರಕ ನಿಧಿಯ ಕಾರ್ಯದರ್ಶಿಯಾಗಿ ಕೆಲಸ ಮಾಡಿದರು.

ತಿಮ್ಮಪ್ಪ ನಾಯಕರ ದೇಶಭಕ್ತಿ ಉಜ್ವಲವಾಗಿತ್ತು. ರಾಷ್ಟ್ರ ಸ್ವಾತಂತ್ರ್ಯದ ಎಲ್ಲ ಆಂದೋಲನಗಳಲ್ಲಿ ಅವರು ಭಾಗವಹಿಸಿದ್ದರು. ಯಾವ ಅಧಿಕಾರದ ವ್ಯಾಮೋಹವಿಲ್ಲದೆ ಅವರು ರಾಷ್ಟ್ರಕಾರ್ಯದಲ್ಲಿಯೇ ತಮ್ಮ ಜೀವನ ಸವೆಸಿದರು.

ಅವರು ಕಾರ್ಯಕರ್ತರೊಂದಿಗೂ ತಮ್ಮ ಸಹಕಾರಿಗಳೊಂದಿಗೂ ಅತ್ಯಂತ ಆತ್ಮೀಯತೆಯಿಂದ ನಡೆದುಕೊಳ್ಳುತ್ತಿದ್ದರು. ಕಠಿಣ ಪ್ರಸಂಗಗಳಲ್ಲಿ ಕಾರ್ಯಕರ್ತರಿಗೆ ಯೋಗ್ಯಸಲಹೆ ಸೂಚನೆಗಳನ್ನು ಕೊಟ್ಟು ಅವರಿಗೆ ಸಹಾಯ ಮಾಡುತ್ತಿದ್ದರು.

ಈ ರೀತಿ ತಿಮ್ಮಪ್ಪ ನಾಯಕರು ಗಾಂಧೀತತ್ತ್ವನಿಷ್ಠ ಕರ್ಮಯೋಗಿಯಾಗಿದ್ದರು.

# ನೈತಿಕ ಶಕ್ತಿ

## ರಮಾಕಾಂತ ಮಾಡಗಾಂವಕರ

ನಾನು ಚಿಕ್ಕವನಿದ್ದಾಗ ನಮ್ಮಲ್ಲಿ ಬಿಳಗಿಗೆ ಆಗಾಗ ನಾಯಕ ಮಾಸ್ತರರು ಬರುತ್ತಿದ್ದರು. ಅವರನ್ನು ನೋಡಿದಾಗಲೇ ಯಾರೋ ಸಾಧು ಸಂತರು ಎಂಬ ಭಾವನೆ ಅವರ ಮುಖಭಾವ, ಆವರ ಬೆಳೆದ ಗಡ್ಡದಿಂದ ಕಂಡು ಬರುತ್ತಿತ್ತು. ಹೀಗಾಗಿ ನಾವು ಮೊದಲು ಅವರ ಹತ್ತಿರ ಹೋಗಲು ಸಂಕೋಚಪಡುತ್ತಿದ್ದೆವು. ಅವರು ನಮ್ಮ ಮಾಳಿಗೆಯ ಮೇಲೆ ಕೂತು ಸತತ ನೂಲುತ್ತಾ ನಮ್ಮ ಹಿರಿಯರ ಹತ್ತಿರ ಬೇರೆ ಬೇರೆ ವಿಷಯ ಚರ್ಚಿಸುತ್ತಿದ್ದರು. ಅವರು ಉಪ್ಪು, ಖಾರ, ಸಕ್ಕರೆ ತಿನ್ನುತ್ತಿದ್ದಿಲ್ಲ. 'ಉಪ್ಪು, ಖಾರ ತಿನ್ನುವದಿಲ್ಲ; ಸಪ್ಪೆ ಹ್ಯಾಗೆ ತಿನ್ನುತ್ತಾರೋ' ಎನ್ನುವದು ನಮ್ಮ ಮನೆಯಲ್ಲಿ ಇವರ ಬಗ್ಗೆ ಚರ್ಚೆಯ ವಿಷಯವಾಗುತ್ತಿತ್ತು.

ಒಮ್ಮೆ ಗಾಂಧೀ ಜಯಂತಿ ಕಾಲಕ್ಕೆ ನೂಲುವ ಸಪ್ತಾಹ ನಮ್ಮಲ್ಲಿ ಪ್ರಾರಂಭಿಸಿದ್ದರು. ಅದರ ಪ್ರಾರಂಭ ನಾಯಕ ಮಾಸ್ತರರಿಂದ ಜರಗಿತು. ಅವರ ಸಂಗಡ ಕೃಷ್ಣ ಎನ್ನುವ ಹುಡುಗನನ್ನು ಕರೆತಂದಿದ್ದರು. ಆತನು ಅವರನ್ನು ನೆರಳಿನಂತೆ ಅನುಸರಿಸುತ್ತಿದ್ದ. ನಮಗೆಲ್ಲ ಧನುಷ್‌ತಕಲಿಯ ಮೇಲೆ ನೂಲುವದನ್ನು ಅವನೇ ಹೇಳಿ ಕೊಡುತ್ತಿದ್ದ. ಆತನು ಹರಿಜನನೆಂದು ನಾಯಕ ಮಾಸ್ತರರು ಆತನನ್ನು ನೋಡಿಕೊಳ್ಳುತ್ತಿದ್ದಾರೆ ಎಂಬುದನ್ನು ಹಿಂದಿನಿಂದ ತಿಳಿದೆವು. ಆಗಿನದು ಅಸ್ಪೃಶ್ಯತಾ ಭಾವನೆಯ ತೀವ್ರಕಾಲ. ಹೀಗಿದ್ದರೂ ನಮ್ಮ ಊರಲ್ಲಿ ಆತನು ಎಲ್ಲರೊಂದಿಗೂ ಹೊಂದಿಹೋಗಿದ್ದನು.

ಗ್ರಾಮಸೇವಾ ಸಮಿತಿಯ ಖಾದಿ ಕೇಂದ್ರ ಮೊದಲಾಗಿ ಬಿಳಗಿಯಲ್ಲಿ ನಮ್ಮ ಮನೆಯಲ್ಲಿ ಪ್ರಾರಂಭವಾಯಿತು. ನಾನು ನೂಲುವ ಹಾಗೂ ನೇಯ್ಗೆಯ ಮೊದಲನೇ ಪಾಠ ನಮ್ಮ ಊರಲ್ಲಿ ಕಲಿತೆನು. ನಂತರ ಮುಂಬೈ ಸರಕಾರದ ಸರ್ವೋದಯ ಯೋಜನೆಯ ಪ್ರಾರಂಭಕ್ಕೆ ಶ್ರೀ ನಾಯಕ ಮಾಸ್ತರರ ಕೋರಿಕೆಯ ಮೇರೆಗೆ ನಮ್ಮಲ್ಲಿಂದ ಸರ್ವೋದಯ ಯೋಜನಾ ವಿದ್ಯಾಲಯಕ್ಕೆ ವಿದ್ಯಾರ್ಥಿಯಾಗಿ ನಾನು ಆರಿಸಲ್ಪಟ್ಟೆ. ಆ ವಿದ್ಯಾಲಯದ ಸಂಚಾಲಕರೂ ನಾಯಕ ಮಾಸ್ತರರೇ ಇದ್ದುದರಿಂದ ಅವರ ನಿಕಟ ಸಂಬಂಧ ಬರುವ ಅನುವು ದೊರೆಯಿತು.

ಆಶ್ರಮ ಜೀವನದ ನಿಯಮಿತತನ, ಸರಳ ಜೀವನ ಹಾಗೂ ರಾಷ್ಟ್ರೀಯ ದೃಷ್ಟಿ, ಗಾಂಧೀವಿಚಾರದೀಕ್ಷೆ ಅವರಿಂದಲೇ ನನಗೆ ದೊರೆಯಿತು. ಪ್ರತಿದಿನ ಬೆಳಗ್ಗೆ

ಐದು ಘಂಟೆಗೆ ಎದ್ದು ಪ್ರಾರ್ಥನೆ, ಅಡಿಗೆಯಿಂದ ಹಿಡಿದು ಎಲ್ಲ ಕೆಲಸ ಕಾರ್ಯ ಸ್ವಾವಲಂಬನ ಪದತಿಯಿಂದಲೇ ನಡೆಯುತ್ತಿತ್ತು. ಅವರೊಂದಿಗೆ ಕಳೆದ ವರ್ಷಗಳು ನನ್ನ ಜೀವನದಲ್ಲಿ ನೆನಪಿಡುವಂಥ ಹಾಗೂ ಮಹತ್ವದ ದಿನಗಳೆಂದು ನಾನು ಪರಿಗಣಿಸುತ್ತೇನೆ. ಅವರ ಸಾತ್ವಿಕ ಜೀವನ ನನ್ನ ಜೀವನದಲ್ಲಿ ಸಾಕಷ್ಟು ಪರಿಣಾಮ ಬೀರಿದೆ. ಅವರ ಸ್ವಭಾವದಲ್ಲಿ ಒಂದೇ ದೋಷವೆಂದರೆ ಶೀಘ್ರಕೋಪ. ಆದರೆ ಅದು ಕೂಡಲೇ ಹಿಮದಂತೆ ಕರಗಿ ಅವರು ಪಶ್ಚಾತ್ತಾಪಪಡುತ್ತಿದ್ದರು. ಯಾವಾಗಲೂ ಬೇರೆಯವರ ಭಾವನೆಗಳ ಬಗ್ಗೆ ಚಿಂತಿಸುತ್ತಿದ್ದರು. ತನ್ನಿಂದ ಯಾರಿಗೂ ನೋವಾಗಬಾರದು, ಎಂದು ಜಾಗ್ರತೆವಹಿಸುತ್ತಿದ್ದರು. ಏನಾದರೂ ಸಂಘರ್ಷವಾದರೆ ಅವರಾಗಿ ಬಂದು ಸಾಂತ್ವನದ ಮಾತು ಹೇಳುತ್ತಿದ್ದರು. ಹಾಗೂ ಎಲ್ಲರನ್ನು ಸರಿಸಮಾನರಾಗಿ ಕಾಣುತ್ತಿದ್ದರು. ಅವರ ಸಾರ್ವಜನಿಕ ಪ್ರಜ್ಞೆ ಯಾವಾಗಲೂ ನೆನಪು ಮಾಡುವಂಥಹದೇ. ಅಸೌಖ್ಯವಾದ ಪ್ರಸಂಗಗಳಲ್ಲಿ ಸಹ ಅವರಿಗೆ ಬೇಕಾದ ಔಷಧೋಪಚಾರದ ಖರ್ಚು ಮೊದಲಾಗಿ ಚರ್ಚಿಸಿ ನಂತರವೇ ಉಪಚಾರದ ನಿರ್ಣಯ ಕೈಕೊಳ್ಳುತ್ತಿದ್ದರು. ಅವರ ಬರವಣಿಗೆ ಸಹ ಬಹಳ ಸಮತೋಲದ್ದಿರುತ್ತಿತ್ತು.

ಅವರ ಸರಳ ಸ್ವಭಾವದ ಕುರಿತು ಹೇಳಬೇಕೆಂದರೆ, ನಾವು ಗೌರವ ಸೂಚಕವಾಗಿ, ಅವರೆದುರಿಗೆ ಕೂಡ್ರಲು ಇಚ್ಛಿಸುತ್ತಿದ್ದಿಲ್ಲ. ಅವರೇ ಸ್ವತಃ ಎದ್ದು ಹೋಗಿ ಚಾಪೆತಂದು ಹಾಸಿ ಮೊದಲು ಕೂಡ್ರಲು ಹೇಳುತ್ತಿದ್ದರು. ಕಳೆದ ಮೂರು ವರ್ಷಗಳಿಂದ ಅವರು ಸಮಿತಿಯಲ್ಲಿಯೇ ವಾಸಮಾಡುತ್ತಿದ್ದರು. ನಮ್ಮನ್ನೆಲ್ಲ ಬಹು ಅಕ್ಕರೆಯಿಂದ ನೋಡುತ್ತಿದ್ದರು. ಏನಾದರೂ ಅವರ ಕೆಲಸವಿದ್ದಲ್ಲಿ ಒಮ್ಮೆಯೂ ತಾವಿದ್ದಲ್ಲಿ ನನ್ನನ್ನು ಕರೆಯದೇ ತಾವೇ, ಕೈಲಾಗದಿದ್ದರೂ ಮಾಳಿಗೆ ಮೆಟ್ಟಲು ಏರಿ ಬರುತ್ತಿದ್ದರು. ನಾನು "ಮಹಾ ಕೆಲಸ"ದಲ್ಲಿರುತ್ತೇನೆ, ನನಗೆ ತ್ರಾಸನೀಡಬಾರದು, ಎನ್ನುವ ಭಾವನೆಯಿಂದ, ತಾವೇ ತೊಂದರೆ ಪಟ್ಟುಕೊಳ್ಳುತ್ತಿದ್ದರು.

ನಾಯಕ ಮಾಸ್ತರರು ನಮ್ಮೊಡನೆ ಇದ್ದುದು ಒಂದು ನೈತಿಕಶಕ್ತಿಯಾಗಿತ್ತು. ಅವರ ನಾಮಬಲದಿಂದಲೇ ನಮ್ಮ ಎಷ್ಟೋ ಕೆಲಸಗಳು ಸುಗಮವಾಗುತ್ತಿದ್ದವು. ಸಮಿತಿಯ ಎಲ್ಲ ಕಾರ್ಯಕರ್ತರ ವೈಯಕ್ತಿಕ ಗುಣದೋಷಗಳು ಅವರಿಗೆ ತಿಳಿದಿದ್ದವು. ಏನಾದರೂ ಅಹಿತ ಘಟನೆ ನಡೆದಲ್ಲಿ, ಮತಭೇದಗಳಾದಲ್ಲಿ ಅದರ ಮೋಕ್ಷ ನಾಯಕ ಮಾಸ್ತರರ ಕಡೆಯಿಂದಲೇ ಆಗುತ್ತಿತ್ತು. ಯಾವುದೂ ವಿಕೋಪಕ್ಕೆ ಹೋಗುತ್ತಿದ್ದಿಲ್ಲ. ಅವರ ಅಭಿಪ್ರಾಯ ಎಲ್ಲರಿಗೂ ಮಾನ್ಯವಾಗುವಂತಿರುತ್ತಿತ್ತು. ಅವರು ಸಾರಾಸಾರ ವಿಚಾರಿಸಿ ಎಲ್ಲರಿಗೂ ಸರಿದೋರುವ ನಿರ್ಣಯ, ಅಭಿಪ್ರಾಯ ತಿಳಿಸುತ್ತಿದ್ದರು.

ತಮ್ಮ ಸಲುವಾಗಿ ಸಾರ್ವಜನಿಕ ಸಂಸ್ಥೆಯಿಂದ ಖರ್ಚುಮಾಡುವದು ಅವರಿಗೆ ಒಪ್ಪುತ್ತಿದ್ದಿಲ್ಲ. ಇಂಥ ಹಲವಾರು ಉದಾಹರಣೆಗಳು ಪ್ರತಿದಿನ ನಮ್ಮ ಲಕ್ಷ್ಯಕ್ಕೆ ಬರುತ್ತಿದ್ದವು. ಅವರ ನಿವಾಸ ವ್ಯವಸ್ಥಿತಗೊಳಿಸಲು ಅವರೊಂದಿಗೆ ಹಲವಾರು ಸಾರಿ ವಿಚಾರ ವಿನಿಮಯ ಮಾಡಬೇಕಾಯ್ತು. ಸೆಕೆಯು ಕಾಲದಲ್ಲಿ ಒಂದು ಪಂಖಾ ಹಾಕಿಕೊಡಲು ಅನುಮತಿ ದೊರೆಯಲು ಹಲವು ದಿನಗಳೇ ಕಳೆದವು. ಅವರ ಪೆನ್ನಿನ ನಿಬ್ಬು ಮುರಿದಾಗ ಒಳ್ಳೆ ಕಿಮ್ಮತ್ತಿನ ಹೊಸ ನಿಬ್ಬನ್ನು ಹಾಕಿದ್ದಕ್ಕಾಗಿ ಅವರು ಆ ಪೆನ್ನನ್ನು ಬಳಸುವುದನ್ನೇ ಬಿಟ್ಟುಬಿಟ್ಟರು. ಮಿತವ್ಯಯ, ಸಾರ್ವಜನಿಕ ಹಣದ ಪ್ರಜ್ಞೆ ಅವರಿಂದಲೇ ಕಲಿಯಬೇಕಾದ ಗುಣಗಳು.

ಅಹಿಂಸಾ ಸತ್ಯಮಸ್ತೇಯ ಬ್ರಹ್ಮಚರ್ಯ ಅಸಂಗ್ರಹ, ।
ಶರೀರಶ್ರಮ ಅಸ್ವಾದ ಸರ್ವತ್ರ ಭಯವರ್ಜನ॥
ಸರ್ವಧರ್ಮೀಸಮಾನತ್ವ ಸ್ವದೇಶಿ ಸ್ಪರ್ಶಭಾವನಾ।
ಹೀಂ ಏಕಾರ್ದ ಸೇವಾವಿ ನಮ್ರತ್ವೇ ವ್ರತ ನಿಶ್ಚಯೇಂ॥

ಎಂಬ ಉಕ್ತಿಯ ಸಾಕಾರ ಮೂರ್ತಿಯೇ ನಾಯಕ ಮಾಸ್ತರರಾಗಿದ್ದರು. ಗ್ರಾಮ ಸೇವಾ ಸಮಿತಿಯು ಮೊದಲ ೮–೧೦ ವರ್ಷಗಳಲ್ಲಿ ಅವರೇ ಅದರ ಅಧ್ಯಕ್ಷತೆಯ ಹೊಣೆ ವಹಿಸಿದ್ದರು. ಮೂವತ್ತೊಂದು ವರ್ಷಗಳಲ್ಲಿ ಸಮಿತಿಯು ಹಲವು ಏರಿಳಿತಗಳನ್ನು ಕಂಡಿದೆ. ಯುಕ್ತ ಪ್ರಸಂಗಗಳಲ್ಲಿ ಸಮಿತಿಗೆ ನಾಯಕ ಮಾಸ್ತರರ ಮಾರ್ಗದರ್ಶನವೇ ಮಿಗಿಲಾಗಿರುತ್ತಿತ್ತು. ಸಮಿತಿಯ ಸರ್ವತೋಮುಖ ನೈತಿಕ ಅಭಿವೃದ್ಧಿಯನ್ನು ಅವರು ಬಯಸುತ್ತಿದ್ದರು.

# ಮುಮುಕ್ಷು

ದಯಾನಂದ ಪ್ರಭು ಶಿರೂರ್‌ಕರ್

೧೯೭೪ರಲ್ಲಿ ಶ್ರೀ ನಾಯಕ ಮಾಸ್ತರರು ದಿವಂಗತರಾದರು. ದಿವಂಗತರಾಗುವ ೨-೩ ವರ್ಷ ಪೂರ್ವದಂದು ಆದ್ಯಾತ್ಮದ ತಿರುಳನ್ನು ಪೂರ್ಣವಾಗಿ ತಿಳಕೊಂಡು ಆದರ ಪ್ರತ್ಯಕ್ಷ ಅನುಭವ ಪಡೆಯುವ ಪ್ರಯತ್ನದಲ್ಲಿದ್ದರು. ೧೯೨೧ ರಲ್ಲಿ ಶಿಕ್ಷಕ ವೃತ್ತಿಗೆ ರಾಜೀನಾಮೆಯಿತ್ತು ಸ್ವಾತಂತ್ರ್ಯ ಹೋರಾಟದಲ್ಲಿ ಪ್ರವೇಶಿಸಿದಂದಿನಿಂದ ಮನೆ ಬಿಟ್ಟವರು ದೇಶಸೇವೆ, ಸ್ವಾತಂತ್ರ್ಯ ಸಂಗ್ರಾಮ ಇವನ್ನೇ ಮುಖ್ಯ ಗುರಿಯಾಗಿಟ್ಟುಕೊಂಡರು. ಗಾಂಧೀಜಿಯವರ ಮಾರ್ಗದರ್ಶನದ ರೀತಿ ವಿಧಾಯಕ ಕಾರ್ಯಕ್ರಮ, ಸರ್ವೋದಯ, ಭೂದಾನ ಕಾರ್ಯಕ್ರಮಗಳಲ್ಲಿ ಭಾಗವಹಿಸಿದ ಅವರು ಸ್ವರಾಜ್ಯ ಸರಕಾರಗಳ ನಡೆಯನ್ನು ನೋಡಿ ಉದಾಸೀನರಾದರು. ಕೊನೆಯ ಹಂತದಲ್ಲಿ ಆತ್ಮ ನಿರೀಕ್ಷಣೆಯೇ ಜೀವನದಲ್ಲಿಯ ಮುಖ್ಯ ಉದ್ದೇಶ ಎಂದು ಮನವರಿಕೆ ಮಾಡಿಕೊಂಡು ಮುಮುಕ್ಷು ಜೀವನ ಸಾಗಿಸುತ್ತ ತಮ್ಮ ದೇಹವನ್ನು ಬಿಟ್ಟು ಹೋದರು.

ನಾನು ಹೈಸ್ಕೂಲು ವಿದ್ಯಾರ್ಥಿ ದೆಸೆಯಿಂದಲೇ ಗಾಂಧೀಜಿಯವರ ಆದೇಶದಂತೆ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ್ದೆ. ಗಾಂಧೀಜಿಯವರ ಪ್ರತ್ಯಕ್ಷ ದರ್ಶನವು ನಮಗೆ ಆ ಕಾಲಕ್ಕೆ ಆಗಿದ್ದಿಲ್ಲ. ಆದರೆ ಗಾಂಧೀಜಿಯವರ ಯೋಗ್ಯತೆಯ ಅರಿವು ನಮಗೆ ಸ್ಥಳೀಯ ನಾಯಕರಿಂದ ಆಗಿತ್ತು. ಅವರಲ್ಲಿ ಶ್ರೀ ನಾಯಕ ಮಾಸ್ತರರು ಪ್ರಮುಖರು. ಶ್ರೀ ನಾಯಕ ಮಾಸ್ತರರ ವರ್ತನೆ, ಅವರ ಜೀವನ, ಅವರ ಪೋಷಾಕು, ಮಾತು ಎಲ್ಲವೂ ಗಾಂಧೀಜಿಯವರಂತೆಯೇ ಇತ್ತು. ಆಕಾಲದಲ್ಲಿ ನಮಗೆ ವೈಯಕ್ತಿಕವಾಗಿ ಶ್ರೀ ನಾಯಕ ಮಾಸ್ತರರ ಸಂಪರ್ಕವಿದ್ದಿಲ್ಲ. ಅವರ ಪರಿಚಯು ನಮಗೆ ಹಿಂದಿನಿಂದ ಆಯಿತು. ಅಲ್ಲಿಂದ ಕಾಲೇಜ ಅಭ್ಯಾಸ ಮುಗಿಸಿಕೊಂಡು ಬರುವವರೆಗೆ ಸ್ವಾತಂತ್ರ್ಯ ಸಂಗ್ರಾಮದ ಸಂಪರ್ಕ ತಪ್ಪಿಹೋಯಿತು. ಶ್ರೀ ನಾಯಕ ಮಾಸ್ತರರ ಸಂಪರ್ಕ ಬೆಳೆಸಿಕೊಳ್ಳುವ ಪ್ರಸಂಗ ಬಂದಿದ್ದಿಲ್ಲ. ಆದಾಗ್ಯೂ ಗಾಂಧೀಜಿಯವರ ಬಗ್ಗೆ ನಾವು ಹೇಗೆ ಕೇಳುತ್ತಿದ್ದೆವೋ ಅದೇ ಪ್ರಕಾರ ಶ್ರೀ ನಾಯಕ ಮಾಸ್ತರರ ಬಗ್ಗೆ ಕೇಳುತ್ತಿದ್ದೆವು. ಹೀಗಾಗಿ ನಮ್ಮ ಮನಸ್ಸಿನಲ್ಲಿ ಗಾಂಧೀಜಿ ಮತ್ತು ನಾಯಕ ಮಾಸ್ತರರ ಬಗ್ಗೆ ಭಕ್ತಿ ಬೆಳೆಯುತ್ತ ಇತ್ತು. ದೇಶವೆಂದರೆ ಗಾಂಧೀಜಿ, ಗಾಂಧೀಜಿ ಎಂದರೆ ದೇಶ ಎಂಬಂತೆ ನಮಗೆ ಅನಿಸುತ್ತಿತ್ತು.

ಅದೇ ಪ್ರಕಾರ ಗಾಂಧೀಜಿಯವರ ಆಶ್ರಮವಾಸಿಗಳಾಗಿ ಬಂದ ಶ್ರೀ ನಾಯಕ ಮಾಸ್ತರರು ನಮಗೆಲ್ಲರಿಗೆ ಕರ್ನಾಟಕದಲ್ಲಿ ಆದರ್ಶರಾಗಿ ಬೆಳೆದುನಿಂತರು.

ನನ್ನ ವೈಯಕ್ತಿಕ ಸಂಪರ್ಕ ೧೯೪೨ರ ಕೆಲಸಮಯ ಪೂರ್ವದಲ್ಲಿ ಶ್ರೀ ನಾಯಕ ಮಾಸ್ತರರ ಕೂಡ ಆಗಿತ್ತು. ಆದರೆ ಅವರ ವಿಶ್ವಾಸಕ್ಕೆ ಪಾತ್ರನಾಗುವಂತೆ ನನ್ನಿಂದ ಯಾವ ಕೃತಿಯೂ ಆಗಿದ್ದಿಲ್ಲ. ನಾನೊಬ್ಬ ಶ್ರೀಮಂತ ಮನೆಯ ಹುಡುಗ. ಮನೆಯ ಬಂಧನಗಳನ್ನು ತೊರೆದು ದೇಶ ಸೇವೆಗೆ ನಿಲ್ಲುವ ತಾಕತ್ತಿನ ಕುರುಹು ನನ್ನಲ್ಲಿ ಅವರಿಗೆ ಕಂಡಿರಲಾರದು. ನನಗೂ ಅಲ್ಲಿಯ ತನಕ ಅಂಥ ಆತ್ಮವಿಶ್ವಾಸ ಇದ್ದಿಲ್ಲ. ಆದರೆ ೧೯೪೨ರಲ್ಲಿ ಎಲ್ಲ ನಾಯಕರಿಗೆ ಜೈಲಿಗೆ ಹೋಗುವ ಪ್ರಸಂಗ ಬಂದಿದ್ದರಿಂದ ಚಳವಳಿಯ ನೈತಿಕ ಹೊಣೆ ನನ್ನ ಮೇಲೆ ಬಂದೊದಗಿತು. ನಾನು ನಿರ್ಧಾರ ಮಾಡಿ ಕಾರ್ಯಪ್ರವೃತ್ತನಾದೆ. ಗಾಂಧೀಜಿಯವರ ಆದೇಶ, ಶ್ರೀ ನಾಯಕ ಮಾಸ್ತರರ ಆದರ್ಶ ಮತ್ತು ಇತರ ನಾಯಕರ ಅಪೇಕ್ಷೆ ಇವೇ ಕಾರಣ ಗಳಿಂದ ನಾನು ಸಂಗ್ರಾಮದಲ್ಲಿ ಭಾಗವಹಿಸಿದೆ. ಜೇಲಿನಿಂದ ಬಿಡುಗಡೆಯಾದ ನಂತರ ಶ್ರೀ ನಾಯಕ ಮಾಸ್ತರರ ವಿಶ್ವಾಸಕ್ಕೆ ಪಾತ್ರನಾದೆ.

ಶ್ರೀ ನಾಯಕ ಮಾಸ್ತರರ ಹೆಸರು ಇಡೀ ಕರ್ನಾಟಕದಲ್ಲಿ ಜನರಿಗೆ ಗೊತ್ತಾಗಿ ಹೋಗಿತ್ತು. ವಿಶೇಷವಾಗಿ ಉತ್ತರ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಅವರ ಬಗ್ಗೆ ಭಕ್ತಿ, ಆದರ ಬೆಳೆದಿತ್ತು. ಆ ಕಾಲ (೧೯೪೨–೪೪ರ ಸಮಯ) ನಾನು ಭೂಗತನಾಗಿದ್ದ ಕಾಲ. ಶ್ರೀ ನಾಯಕ ಮಾಸ್ತರರಿಗೆ ಮೊದಲೇ ಜೇಲಿನಿಂದ ಬಿಡುಗಡೆಯಾಗಿತ್ತು. ನಮ್ಮ ಜಿಲ್ಲೆಯ ಮುಂಬೈ ರಹವಾಸಿಗಳಲ್ಲಿಯ ಕೆಲವು ಪ್ರಮುಖರು ಮುಂದಾಗಿ ಶ್ರೀ ನಾಯಕ ಮಾಸ್ತರರ ಚಾಲಕತ್ವದಲ್ಲಿ ನಮ್ಮ ಜಿಲ್ಲೆ ಯಲ್ಲಿಯ ಕಾರ್ಯಕರ್ತರನ್ನು ಒಟ್ಟುಗೂಡಿಸಿ ವಿಧಾಯಕ ಕೆಲಸಗಳನ್ನು ಸಂಘಟಿಸಲು ಯೋಜನೆ ಮಾಡಿ ಹಣವನ್ನು ಕೂಡಿಸಿದರು. ಆ ಪ್ರಯತ್ನಗಳೇ ನಮ್ಮ ಜಿಲ್ಲೆ ಯಲ್ಲಿ ವಿಧಾಯಕ ಕೆಲಸ ಮಾಡುತ್ತಿರುವ ಗ್ರಾಮಸೇವಾ ಸಮಿತಿಯನ್ನು ಸ್ಥಾಪಿಸಲು ಕಾರಣವಾಯಿತು. ಆ ಸಂಸ್ಥೆಯಲ್ಲಿ ಶ್ರೀ ನಾಯಕ ಮಾಸ್ತರರ ಜೊತೆಗೆ ಶ್ರೀ ಹೊದಿಕೆ ಮಾಸ್ತರ, ಗೋಪಾಳ ಕಿಣಿ, ಶ್ರೀಧರ ಕಿಣಿ, ಮಡಗಾಂವಕರ ಬಂಧು ಗಳು, ಗಂಗಾಧರ ಶಾನಭಾಗ ಮತ್ತು ಅವರ ಪತ್ನಿ ಶಾರದಾ, ಹರಿಪೈ ಮುಂತಾದ ಹಲವಾರು ಜನರು ಸಂಘಟಿತರಾದರು. ಇಷ್ಟೇ ಅಲ್ಲ, ಈ ವಿಧಾಯಕ ಕಾರ್ಯ ಕರ್ತರ ಒಟ್ಟುಗೂಡುವಿಕೆಯೇ ಮುಂದೆ ಸರ್ವೋದಯ ಕಾರ್ಯವನ್ನು ಕೈಕೊಳ್ಳಲು ಕಾರಣವಾಯಿತು. ಸರ್ವೋದಯವೇ ಭೂದಾನ ಕಾರ್ಯಕ್ರಮಕ್ಕೆ ಚಾಲನೆ ಕೊಟ್ಟಿತು. ಹೀಗೆ ಶ್ರೀ ನಾಯಕ ಮಾಸ್ತರರು ಸ್ವರಾಜ್ಯದೊಳಗಿನ ೨೫ ವರ್ಷಗಳ ಕಾಲ ಒಂದಿಲ್ಲೊಂದು ವಿಧಾಯಕ ಕಾರ್ಯದಲ್ಲಿ ತೊಡಗಿಸಿದ್ದರಲ್ಲದೆ ಜಿಲ್ಲೆಯ ಕಾರ್ಯಕರ್ತರಲ್ಲಿ ಗಾಂಧೀ ತತ್ತ್ವಜ್ಞಾನದ ಅರಿವನ್ನು ಜಾಗೃತ ಇಟ್ಟರು.

ಶ್ರೀ ನಾಯಕ ಮೊಸ್ತರರು ತತ್ತ್ವನಿಷ್ಠರಿದ್ದರು. ಆದರೆ ವ್ಯವಹಾರ ಅವರಿಗೆ ಗೊತ್ತೇಇರಲಿಲ್ಲ. ಅವರ ತತ್ತ್ವನಿಷ್ಠುರತನ ಒಮ್ಮೊಮ್ಮೆ ಕಾರ್ಯಕರ್ತರಲ್ಲಿ ವಿಮಂಚನೆ ಉತ್ಪನ್ನ ಮಾಡುತ್ತಿತ್ತು. ಅವರು ದಯೆ, ದಾಕ್ಷಿಣ್ಯ ಬಿಟ್ಟು ತತ್ವನಿಷ್ಠುರ ತನಕ್ಕೆ ಕಾರ್ಯಕರ್ತರನ್ನು ಬಲಿಕೊಡುತ್ತಿದ್ದರು. ಹೀಗಾಗಿ ಎಷ್ಟೋ ಕಾರ್ಯಕರ್ತರು ಅವರನ್ನು ಅಗಲಿ ಉಳಿಯುವ ಪ್ರಸಂಗ ಬರುತ್ತಿತು. ಹೀಗಿದ್ದರೂ ಅವರ ಬಗ್ಗೆ ಆದರ ಯಾರಿಗೂ ಕಡಿಮೆಯಾಗುತ್ತಿರಲಿಲ್ಲ. ಅವರ ಕರ್ತವ್ಯ ಬುದ್ಧಿ, ತತ್ತ್ವನಿಷ್ಠೆ, ಶಿಸ್ತು, ತ್ಯಾಗ, ಸೇವಾಮನೋಭಾವ ಮುಂತಾದ ಗುಣಗಳಿಂದ ಅವರ ಬಗ್ಗೆ ಆದರ ಬೆಳೆದೇಇತ್ತು. ತತ್ವನಿಷ್ಠುರ ತನದಿಂದ ಜನರ ಕೂಡ ಅವರ ಸಂಪರ್ಕ ಬೆಳೆಯುತ್ತಿರ ಲಿಲ್ಲ. ಸರ್ವೋದಯ ಕಾರ್ಯ ಮುಗಿದ ನಂತರ ಶ್ರೀ ನಾಯಕ ಮಾಸ್ತರರು ಹಿರೇಗುತ್ತಿಯಲ್ಲಿ ಉಳಕೊಂಡರು. ಅವರ ಸೇವೆ ಮಾಡಲು ಶ್ರೀಮತಿ ಅಮರಾವತಿ ಗಜೇಂದ್ರ ಪೈ ಎಂಬ ನಿಷ್ಠಾವಂತ ಆದರ್ಶ ಗೃಹಿಣಿ, ವಿಧಾಯಕ ಕೆಲಸ ಮಾಡುವಲ್ಲಿ ಯಶಸ್ವಿಯಾಗಿದ್ದವಳು, ಹಿರೇಗುತ್ತಿಯಲ್ಲಿ ಗೋಸೇವಾ, ಜನಸೇವಾ, ಹರಿಜನ ಸೇವಾ, ಸ್ತ್ರೀಸೇವಾ ಮಾಡಲು ಶ್ರೀ ನಾಯಕ ಮಾಸ್ತರರಿಗೆ ಅನುವಾಗಿ ನಿಂತರು. ಈ ದೊಡ್ಡ ಅವಧಿ, ಅಂದರೆ ೩೦ ವರ್ಷ ಕಾಲ, ಶ್ರೀ ನಾಯಕ ಮಾಸ್ತರರಿಗೆ ಬಡ ಕುಟುಂಬಗಳ ಜೀವನ ದರ್ಶನವಾಯಿತು. ಜನಸಂಪರ್ಕ, ವ್ಯವಹಾರದ ಮಹತ್ವ ಕೆಲ ಮಟ್ಟಿಗೆ ತಿಳಿಯಿತು. ಅವರ ಜೀವನದಲ್ಲಿ ಈ ಕ್ರಾಂತಿ ಆಗುವದಕ್ಕೆ ಶ್ರೀಮತಿ ಅಮರಾವತಿ ಅಕ್ಕನವರು ಬಹು ಮಟ್ಟಿಗೆ ಕಾರಣರು. ಗಾಂಧೀಜಿಯವರು ಎಷ್ಟು ತತ್ವನಿಷ್ಠರಿದ್ದಿದ್ದರೋ ಅಷ್ಟೇ ವ್ಯವಹಾರ ತಜ್ಞರಿದ್ದರು; ಅಷ್ಟೇ ಮಾನವ ಪ್ರೇಮಿಗಳಿದ್ದರು; ಅಷ್ಟೇ ರಾಜಕಾರಣಿಗಳಿದ್ದರು. ಗಾಂಧೀಜಿಯವರ ನಿರ್ಲಿಪ್ತತೆ, ರಾಜಕಾರಣ ಮತ್ತು ವ್ಯವಹಾರದ ಮಟ್ಟಿಗೆ ಶ್ರೀ ನಾಯಕ ಮಾಸ್ತರರಲ್ಲಿ ಬೇರೂರಿದ್ದಿರಲಿಲ್ಲ.

ಅವರು ರಾಜಕಾರಣದಿಂದ, ರಾಜಾಶ್ರಯದಿಂದ ಯಾವಾಗಲೂ ಹಿಂದೆ ಸರಿಯುತ್ತಿದ್ದರು. ರಾಜಕೀಯವೆಂಬ ವೃತ್ತಿ ಅವರಿಗೆ ಎಂದೂ ಸೇರುತ್ತಿರಲಿಲ್ಲ. ಗಾಂಧೀಜಿಯವರು ಇರುವತನಕ ಅವರ ಭಕ್ತರಾಗಿ ಉಳಿದರು. ಅವರ ನಂತರ ವಿನೋಬಾಜಿ ಪ್ರಣೀತ ಗಾಂಧೀ ತತ್ತ್ವಜ್ಞಾನದ ಭಕ್ತರಾದರು. ಗಾಂಧೀ ತತ್ತ್ವ ಜ್ಞಾನದ ಉನ್ನತ ಮಟ್ಟದ ಪ್ರಚಾರವಾಗಲಿಕ್ಕೆಂದು "ಗಾಂಧೀಜಿಯವರ ಆಧ್ಯಾತ್ಮಿಕ ವಿಚಾರ" ಎಂಬ ಪುಸ್ತಕವನ್ನು ಬರೆದರು. ಇಷ್ಟು ಉತ್ತಮವಾಗಿ ಗಾಂಧೀಜಿಯವರ ಆಧ್ಯಾತ್ಮಿಕ ವಿಚಾರಗಳನ್ನು ಪುಸ್ತಕ ರೂಪದಲ್ಲಿ ಸಂಕಲನ ಮಾಡಿದವರು ಕನ್ನಡ ಭಾಷೆ ಯಲ್ಲಿ ಬೇರೊಬ್ಬರಿಲ್ಲ. ಅವರ ಆ ಪುಸ್ತಕದಿಂದ ಗಾಂಧೀಜಿಯವರ ಮಹಾತ್ಮೆಯ ಗೂಢ ನಮ್ಮಂಥವರಿಗೆ ಗೊತ್ತಾಯಿತಲ್ಲದೆ, ಶ್ರೀ ನಾಯಕ ಮಾಸ್ತರರ ಜೀವನದ ಉದ್ದಿಶ್ಯವೂ ಗೊತ್ತಾಯಿತು. ಅವರ ಈ ಸಂಕಲನವೇ ಮುಂದೆ ಅವರನ್ನು ಪೂರ್ಣ ವಾಗಿ ಆದ್ಯಾತ್ಮದ ಕಡೆಗೆ ಎಳೆಯಿತು.

ನಮಗೆ ಗಾಂಧೀಜಿ ಎಂಬ ಹೆಸರು ಬುಡದಿಂದಲೂ ಪ್ರಿಯವಾಗಿತ್ತು. ಅವರು ಮಾಡಿದ ಭಾಷಣಗಳ ಸಾರ, ಲೇಖನಗಳಲ್ಲಿಯ ವಿಚಾರ ನಾವು ಓದುತ್ತಿದ್ದಾಗ್ಯೂ ಅವರ ಅಪಾರ ಮಹಾತ್ಮೆಯ ಅರಿವು ನಮಗೆ ಆಗಿದ್ದಿಲ್ಲ. ಗಾಂಧೀಜಿಯವರ ದೊಡ್ಡಸ್ತಿಕೆಯ ರಹಸ್ಯವನ್ನು ನಾವು ಶ್ರೀ ನಾಯಕ ಮಾಸ್ತರರಿಂದ ತಿಳಿದೆವು. ಗಾಂಧೀಜಿಯವರ ಆದ್ಯಾತ್ಮಿಕ ಹಿನ್ನಲೆಯೇ ಅವರ ರಾಜಕಾರಣಕ್ಕೆ, ದೇಶದ ಅಭಿವೃದ್ಧಿಪರ ಯೋಜನೆಗಳಿಗೆ, ವಿಧಾಯಕ ಕಾರ್ಯಕ್ರಮಗಳಿಗೆ ಕಾರಣವಾಗಿತ್ತೆಂದು ಮನವರಿಕೆಯಾಯಿತು. ಶ್ರೀ ನಾಯಕ ಮಾಸ್ತರರ ಜೀವನದ ಕೊನೆಯ ಹಂತದಲ್ಲಿ ಗಾಂಧೀಜಿಯವರ ನಿಜವಾದ ಕಲ್ಪನೆ ನನಗೆ ಅವರಿಂದ ಆಯಿತು. ಗಾಂಧೀಜಿಯವರ ಅದ್ಯಾತ್ಮಿಕ ವಿಚಾರಗಳ ಬಗ್ಗೆ ದೇಶದಲ್ಲಿ ಬಹಳ ವಿರಳವಾಗಿ ಕಾಣುವ ಆದರ, ಭಕ್ತಿ, ನಿಷ್ಠೆ, ತಿಳುವಳಿಕೆ ನಾನು ಶ್ರೀ ನಾಯಕ ಮಾಸ್ತರರಲ್ಲಿ ಮಾತ್ರ ಪೂರ್ಣವಾಗಿ ಬಿಂಬಿತವಾದುದ್ದನ್ನು ಕಂಡೆ. ಹೀಗಿದ್ದರೂ ತಾನು ಯಾವ ವಿಷಯದಲ್ಲಿಯೂ "ಆಧಿಕಾರಿ" ಎಂತ ಅವರು ಎಂದಿಗೂ ಎಣಿಸಿರಲಿಲ್ಲ. ತಮ್ಮ ಮುಪ್ಪಿನ ಕೊನೆಯ ೪–೫ ವರುಷಗಳಲ್ಲಿ ಎಲ್ಲಾ ಚಟುವಟಿಕೆಗಳಿಂದ ನಿರ್ಲಿಪ್ತರಾಗಿ ಸಾಮಾನ್ಯ ಮನುಷ್ಯರಂತೆ ಉಳಕೊಂಡರು. ಆ ಕಾಲದಲ್ಲಿ ಅವರು 'ತಾನು ಯಾರು ? ತನ್ನಿಂದ ಏನಾಗಬೇಕು ?' ಎಂಬ ಶೋಧನೆಯಲ್ಲಿ ತೊಡಗಿದ್ದರು. ಈ ಅರಿವು, ಸ್ಫೂರ್ತಿಯಿಂದ "ಸರ್ವ ಧರ್ಮ ಸಮನ್ವಯ" ಮತ್ತು "ಶಿವಶರಣರ ಸಾಧನಾ ಪಥ" ಎಂಬ ಪುಸ್ತಕಗಳನ್ನು ಬರೆದು ಮುಗಿಸಿ ತಮ್ಮ ಇಹ ಜನ್ಮದ ಸಾರ್ಥಕ ಮಾಡಿಕೊಂಡರು.

ಶ್ರೀಮತಿ ಅಮರಾವತಿ ಅಕ್ಕನವರು ಸ್ವರ್ಗಸ್ಥರಾದ ಮೇಲೆ ಶ್ರೀ ನಾಯಕ ಮಾಸ್ತರರಿಗೆ ತಾಯಿಯಿಲ್ಲದ ಮಗುವಿನ ರೀತಿ ನೆಲೆಯಿಲ್ಲದಂತೆ ಆಯಿತು. ಈ ಭಾವನೆಯನ್ನು ಶ್ರೀ ನಾಯಕ ಮಾಸ್ತರರು ನನ್ನ ಸೌಭಾಗ್ಯವತಿಯವರ ಹತ್ತಿರ ವ್ಯಕ್ತಮಾಡಿದ್ದರು. ಶ್ರೀ ನಾಯಕ ಮಾಸ್ತರರ ಜೀವನಕ್ರಮ, ಅವರ ನಡವಳಿಕೆಯ ತತ್ತ್ವಗಳು, ಅವರ ಆರೋಗ್ಯ, ಅವರ ಪ್ರಕೃತಿಯ ಗರಜುಗಳನ್ನು ಪೂರ್ಣವಾಗಿ ತಿಳಕೊಂಡ ಅಮರಾವತಿ ಅಕ್ಕನವರು ತೀರಿಕೊಂಡ ಮೇಲೆ, ಮುಂದೇನು ? ಎಂಬ ವಿಚಾರದಲ್ಲಿ ವಿವಂಚಿತರಾಗಿದ್ದಾಗ, ಗ್ರಾಮಸೇವಾ ಸಮಿತಿಯ ಸಂಚಾಲಕರಾದ ಶ್ರೀ ಹರಿಪೈ, ಶ್ರೀ ಮಡಗಾಂವಕರ ಮುಂತಾದವರು ಸಮಿತಿಯ ವತಿಯಿಂದ ಶ್ರೀನಾಯಕ ಮಾಸ್ತರರನ್ನು ಅಂಕೋಲಾದಲ್ಲಿ ಕರೆತಂದು ಸಮಿತಿಯ ಆವಾರದಲ್ಲಿ ಸಮಿತಿಯ ಮನೆಯಲ್ಲಿ ನಿಲ್ಲಿಸಿದರು. ಸಮಿತಿಯ ಮೂಲ ಸಂಸ್ಥಾಪಕರೂ, ಅದರ ಶ್ರೇಷ್ಠ ಕಾರ್ಯಕರ್ತರೂ ಆದ ಶ್ರೀ ನಾಯಕ ಮಾಸ್ತರರು ಸಮಿತಿಯ ಸಮೀಪದಲ್ಲಿಯೇ ನೆಲೆಸಿದ್ದನ್ನು ನೋಡಿದವರೆಲ್ಲರಿಗೂ ಸಂತೋಷವಾಯಿತು. ಹಿರೇಗುತ್ತಿಯಲ್ಲಿದ್ದಾಗ ಮಾಡುತ್ತಿದ್ದ ನಿತ್ಯಕ್ರಮ ಕೆಲ ದಿವಸಗಳ ನಂತರ ಸುರುವಾಯಿತು. ಪ್ರತಿನಿತ್ಯ ಸಂಜೆ, ಮುಂಜಾನೆ ತಿರುಗಾಡುವದು (೪–೫ ಮೈಲುಗಳವರೆಗೆ), ಊಟ

ತೀಡಿಗಳಿಗಿಂತ ಹೆಚ್ಚಿನ ಅಗತ್ಯದ ಸಂಗತಿ ಎಂಬಂತೆ ಕಾಣುತ್ತಿತ್ತು. ರುಚಿಯಿಲ್ಲದ ಆಹಾರ, ಅನುಪಾನ, ಮಿತವ್ಯಯದ ಜೀವನ, ಓದುವದು, ಬರೆಯುವದು, ಹೀಗೆ ನಿತ್ಯಕ್ರಮ ಶುರುವಾಯಿತು. ಎಲ್ಲವೂ ನಡೆದು ಬಂದ ರೀತಿ ರಿವಾಜಿನಂತೆ, ಅನುಸರಿಸಿ ಬಂದ ತತ್ತ್ವಗಳಂತೆ. ಅತಿನಿಷ್ಠಾವಂತರಾದ, ಶ್ರೀ ನಾಯಕ ಮಾಸ್ತರರ ಮೇಲೆ ಭಕ್ತಿಯಿದ್ದ, ತ್ಯಾಗಿ ಜೀವನ ಸಾಗಿಸಿದ ಕಾರ್ಯಕರ್ತರಾದ ಶ್ರೀ ರಾಮಚಂದ್ರ ಭಟ್ಟರು ಶ್ರೀ ನಾಯಕ ಮಾಸ್ತರರ ಎಲ್ಲಾ ಕೆಲಸಗಳನ್ನೂ ಮಾಡಲು ಉದ್ಯುಕ್ತರಾಗಿ ನಿಂತರು. ಇವರ ಸಹಾಯ, ಸಹಕಾರ, ಪ್ರೇಮಗಳಿಂದಾಗಿ ಶ್ರೀ ನಾಯಕ ಮಾಸ್ತರರು ತಮ್ಮ ಆರೋಗ್ಯವನ್ನು ಕಾಪಾಡಿಕೊಂಡರಲ್ಲದೆ ಪುಸ್ತಕ ಬರೆಯುವ ತಮ್ಮ ಕೆಲಸಗಳನ್ನು ಸಹಾ ಪೂರ್ತಿಮಾಡಿಕೊಂಡರು.

ತಮ್ಮ ಆಧ್ಯಾತ್ಮಿಕ ಚಿಂತನೆಯನ್ನು ಸರಿಪಡಿಸಿಕೊಂಡು ಸ್ಥಿರಗೊಳಿಸಲಿಕ್ಕೆಂಬಂತೆ ಜೀವನದಲ್ಲಿ ಸಮಗ್ರತೆ, ಸಮನ್ವಯತೆ, ಸಮತ್ವದ ವಿಚಾರಗಳನ್ನು ಅವರು ಬೆಳೆಸಿಕೊಂಡು ಬಂದಿದ್ದರು. ಇವೇ ಅವರ ಕೊನೆಯ ಪುಸ್ತಕ "ಶಿವಶರಣರ ಸಾಧನಾ ಪಥ"ದಲ್ಲಿ ಪ್ರತಿಬಿಂಬಿತವಾಗಿದ್ದನ್ನು ಕಾಣುತ್ತೇವೆ. ಈ ಪುಸ್ತಕ ಮುಗಿಸಿ, ಮುದ್ರಿಸಿಕೊಕೊಳ್ಳುವದಕ್ಕೆ ಅವರು ಪಟ್ಟ ಶ್ರಮ ನೋಡಿದರೆ ಅದೊಂದು ಉಚ್ಚ ಮಟ್ಟದ ಸಾಧನೆಯೇ ಆಗಿತ್ತೆಂದು ನನಗೆ ಅವರ ಪುಸ್ತಕ ಓದಿದ ನಂತರ ಮನವರಿಕೆಯಾಯಿತು. ಶ್ರೀ ನಾಯಕ ಮಾಸ್ತರರು ಆಧ್ಯಾತ್ಮಿಕ ಸಾಧನ ಪಥದಲ್ಲಿದ್ದು ಇಷ್ಟೊಂದು ವೋಹದಿಂದ ಪುಸ್ತಕಗಳನ್ನು ಬರೆದು ಯಾವ ಹೊಸ ಉದ್ದಿಶ್ಯಗಳನ್ನು ಸಾಧಿಸಿದರು ಎಂದು ಅವರನ್ನು ಪ್ರಶ್ನಿಸಿದ್ದೆ. ಎಷ್ಟೋ ಜನರು ಪುಸ್ತಕಗಳನ್ನು ಬರೆದಿದ್ದರು. ಆದರೆ ಶ್ರೀ ನಾಯಕ ಮಾಸ್ತರರು ಈ ತತ್ತ್ವಗಳನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡಿದಂತೆ, ಶಿವಶರಣರ ಅನುಯಾಯಿಗಳಲ್ಲಿ ಬಹಳ ಜನ ಮಾಡಿಕೊಂಡಿರಲಿಕ್ಕಿಲ್ಲವೇನೋ. ಮಹಾತ್ಮಾ ಬಸವಣ್ಣನವರ ರಾಜಕಾರಣ, ವಿಚಾರ ಪ್ರಣಾಲಿಕೆ ಮತ್ತು ಮಹಾತ್ಮಾಗಾಂಧೀಜಿಯವರ ರಾಜಕಾರಣ ಮತ್ತು ವಿಧಾಯಕ ಕಾರ್ಯಕ್ರಮಗಳ ಹಿನ್ನೆಲೆಗೆ ಯಾವ ಅಂತರವೂ ಇಲ್ಲ. ಯಾಕೆಂದರೆ ನಮ್ಮ ಸಂಸ್ಕೃತಿಯ ಬೇರುಗಳು ಆದ್ಯಾತ್ಮಿಕ ತತ್ತ್ವಗಳಿಂದಲೇ ಪುಷ್ಠಿಹೊಂದಿವೆ. ಆದ್ದರಿಂದಲೇ ಶಿವರಣರಲ್ಲಿ ಕಂಡ ಸಮಗ್ರತೆ, ಸಮನ್ವಯಗಳ ಬಗ್ಗೆ ಶ್ರೀ ನಾಯಕ ಮಾಸ್ತರರಿಗೆ ಆಕರ್ಷಣೆಯಾಗಿ ತಮ್ಮ ವಿಶಿಷ್ಟ ದೃಷ್ಟಿಕೋನದಿಂದ ಪುಸ್ತಕವನ್ನು ಆಸ್ಥೆಯಿಂದ ಬರೆದು ಮುಗಿಸಿ ತಮ್ಮ ಆದ್ಯಾತ್ಮಿಕ ಸಾಧನಾ ಪಥದಲ್ಲಿ ಅವರು ಬಹಳ ಮುಂದೆ ಸಾಗಿಸಿದರು.

ಹೀಗಿದ್ದಾಗ್ಯೂ 'ನಾನು ಯಾರು? "ನಾನು" ಎಂಬುದು ಏನು?' ಎಂತು ಪೂರ್ಣವಾಗಿ ತನಗೆ ತಿಳಿದಿಲ್ಲವೆಂದು ಅವರು ಹೇಳುತ್ತಿದ್ದರು. ಈ ಅವಧಿಯಲ್ಲಿ

ನಮ್ಮ ಮನೆಗೆ, ನನ್ನ ಹತ್ತಿರ ಮತ್ತು ನನ್ನ ಸೌಭಾಗ್ಯವತಿಯ ಹತ್ತಿರ ಚರ್ಚೆ ಮಾಡಿ ವಿಷಯಗಳನ್ನು ತಿಳಿದುಕೊಳ್ಳಲಿಕ್ಕೆ ಬರುತ್ತಾ ಇದ್ದರು. 'ನಾವೇ ನೀವಿರುವಲ್ಲಿಗೆ ಬರುತ್ತೇವೆ; ಒಂದು ಕರೆ ಕಳುಹಿಸಿದರೆ ಸಾಕು' ಎಂದು ಹೇಳಿದರೂ ನಮ್ಮಲ್ಲಿಗೆ ತಾವಾಗಿ ನಡೆದುಕೊಂಡು ಬರುತ್ತಿದ್ದರು. ಮುಪ್ಪಿನ ಅಶಕ್ತ ಅವಸ್ಥೆಯಲ್ಲಿ ಸಹ ನಮ್ಮಲ್ಲಿಗೆ ಬಂದುಹೋಗುವುದನ್ನು ಕೊನೆಯವರೆಗೆ ಬಿಡಲಿಲ್ಲ. ಅವರು ಚರ್ಚೆಮಾಡಬೇಕೆಂಬ ವಿಚಾರಗಳ ಬಗ್ಗೆ ನಾವೂ ಸಹ ಅವರ ಕೂಡ ಆಸ್ಥೆಯಿಂದ ಸಹಭಾಗಿಗಳಾಗುವುದನ್ನು ನೋಡಿ ಅವರಿಗೆ ನಮ್ಮಲ್ಲಿ ವಿಶ್ವಾಸ, ಪ್ರೇಮ ಬೆಳೆದಿತ್ತು. ಬಸವಣ್ಣ, ಅಲ್ಲಮ ಪ್ರಭು, ಅಕ್ಕಮಹಾದೇವಿ ಮುಂತಾದ ಶಿವಶರಣ ತತ್ತ್ವಜ್ಞಾನದ ಆದ್ಯ ಪುರಸ್ಕರ್ತರ ಬಗ್ಗೆ ನಾನು ಕೆಲಮಟ್ಟಿಗೆ ಅಭ್ಯಾಸ ಮಾಡಿದ್ದರಿಂದ ಅವರು ಮಾಡಿದ ಚರ್ಚೆಗಳಲ್ಲಿ ನನಗೆ ಭಾಗವಹಿಸಲು ಅನುಕೂಲವಾಗುತ್ತಿತ್ತು. ನಾನು ಆಧ್ಯಾತ್ಮಿಕ ವಿಚಾರಗಳಲ್ಲಿ ಭಗವಾನ್ ರಮಣ ಮಹರ್ಷಿಗಳ ವಿಚಾರಗಳಿಂದ ಪ್ರಭಾವಿತನಾಗಿದ್ದೆ. ಭ॥ ಪ್ರಭುದೇವರ ಮತ್ತು ಭ॥ ರಮಣ ಮಹರ್ಷಿಯವರ ಉಪದೇಶಗಳಲ್ಲಿ ಬಹುಮಟ್ಟಿನ ಸಾಮ್ಯವಿದ್ದದ್ದರಿಂದ ಶ್ರೀ ನಾಯಕ ಮಾಸ್ತರರ ಕೂಡ ಯಾವುದೇ ಚರ್ಚೆಯಲ್ಲಿ ಭಾಗವಹಿಸಲಿಕ್ಕೆ ನನಗೆ ಶಕ್ಯವಾಗುತ್ತಿತ್ತು. ನನ್ನ ಪತ್ನಿಯವರು ಸಹ ಭ॥ ರಮಣ ಮಹರ್ಷಿಗಳ ತತ್ತ್ವಜ್ಞಾನವನ್ನು ತಿಳಿದುಕೊಂಡಿದ್ದರು. ಆ ತತ್ತ್ವಗಳ ಹಿನ್ನೆಲೆಯಲ್ಲಿ ಸಂಸಾರದಲ್ಲಿ, ವ್ಯವಹಾರದಲ್ಲಿ ಬರುವ ಅಡಚಣೆಗಳನ್ನು ಹೇಗೆ ಸರಿಪಡಿಸಿಕೊಳ್ಳಬೇಕೆಂಬುದರ ಬಗ್ಗೆ ನನ್ನ ಸೌಭಾಗ್ಯವತಿಯನ್ನು ಕೇಳುತ್ತಿದ್ದರಲ್ಲದೇ ಕೆಲವು ವಿಷಯಗಳ ಬಗ್ಗೆ ನನ್ನ ಸೌಭಾಗ್ಯವತಿ ಹೇಳಿದ ವಿಚಾರಗಳಿಂದ ಸಮಾಧಾನ ಪಡುತ್ತಿದ್ದರು. ಹೀಗೆ ಕೊನೆಯ ಹಂತದಲ್ಲಿ ಅವರು ನಮ್ಮ ಕೂಡ ಬಹಳ ಆತ್ಮೀಯತೆ ಹೊಂದಿದ್ದರು.

ಶ್ರೀ ನಾಯಕ ಮಾಸ್ತರರು ಸರಳ ಮತ್ತು ಶುದ್ಧಜೀವಿ. ರಾಜಕಾರಣದ ಮತ್ತು ಸಮಾಜ ಸಂಪರ್ಕದ ಹೊಲಸು ತಗಲುವುದೆಂಬ ಅಂಜಿಕೆಯಿಂದ ಯಾವ ಸಹಕಾರಿ ಸಂಘಟನೆ, ಟ್ರಸ್ಟ್ ಚಟುವಟಿಕೆಗಳಲ್ಲಿ ಅವರು ಭಾಗವಹಿಸಲಿಲ್ಲ. ಗ್ರಾಮ ಸೇವಾಸಮಿತಿ ಅವರ ಹಿರಿತದಲ್ಲಿ ಸ್ಥಾಪನೆಯಾದ ಸಂಸ್ಥೆ. ಅಲ್ಲಿಂದಲೂ ತಮ್ಮ ಸಂಬಂಧ ಕಡಿದುಕೊಂಡಿದ್ದರು. ಕಾರಣವೇನೆಂದರೆ ಸರಕಾರದ ಆಶ್ರಯ ಮತ್ತು ಅದಕ್ಕಾಗಿ ಆಗುವ ನಡವಳಿಯ ಶ್ರಮ ಅವರಿಗೆ ಒಪ್ಪಿಗೆಯಾಗುತ್ತಿದ್ದಿಲ್ಲ. ದೇಶದಲ್ಲಿಯ ಬಡತನ, ಆರ್ಥಿಕಾಭಿವೃದ್ಧಿಯ ಬಗೆಗೆ ಸರಕಾರದ ಅನಾಸ್ಥೆ, ದುರಾಡಳಿತ, ಆಳುವ ಪಾರ್ಟಿಯಲ್ಲಿಯ ಜನರ ದರ್ಪದ, ಡೋಂಗಿನ ನಡವಳಿಕೆ ಇವೆಲ್ಲ ನೋಡಿ ಬಹಳ ವ್ಯಥೆಪಡುತ್ತಿದ್ದರು. ಗಾಂಧೀಜಿಯವರ ಹನ್ನೊಂದು ವ್ರತಗಳನ್ನು ಪೂರ್ಣವಾಗಿ ಆಚರಿಸಿದ ಅತಿ ಕಡಿಮೆ ಮಹಾನುಭಾವರಲ್ಲಿ ಶ್ರೀ ನಾಯಕ ಮಾಸ್ತರರು ಶ್ರೇಷ್ಠರಾಗಿದ್ದರು, ದೇಶಸೇವೆ, ಸಮಾಜಸೇವೆ, ಹರಿಜನಸೇವೆ ವಿಧಾಯಕ ಕಾರ್ಯಕ್ರಮ

ಮದ್ಯಪ್ರತಿಬಂಧ ಹೀಗೆ ಎಲ್ಲಾತರದ ಸಮಾಜಹಿತಪರ ಚಟುವಟಿಕೆಗಳಲ್ಲಿ ೫೦ ವರುಷಕಾಲ ತಮ್ಮ ದೇಹ, ಪ್ರಾಣಗಳನ್ನು ಸವೆದು ಕೊನೆಗೆ ಆಧ್ಯಾತ್ಮದ ಕಡೆಗೆ ಪೂರ್ಣವಾಗಿ ಒಲಿದರು. ಅವರ ಕೊನೆಯ ೧–೨ ವರುಷಗಳು "ಮುಮುಕ್ಷು" ಅವಸ್ಥೆಯಲ್ಲಿ ಹೋದವು. ಈ ಅವಧಿಯಲ್ಲಿ "ನಾನುಯಾರು?" ಎಂಬುದನ್ನು ತಿಳಿದು ಕೊಳ್ಳಲು ಬಹಳ ಪ್ರಯತ್ನಪಟ್ಟರು. ಈ ಸಂದರ್ಭದಲ್ಲಿ ಶ್ರೀ ರಮಣ ಮಹರ್ಷಿ ಯವರ ಅಧಿಕಾರೀ ಭಕ್ತರೊಬ್ಬರು ನಮ್ಮಲ್ಲಿಗೆ ಬಂದಾಗ ಅವರಕೂಡ ಚರ್ಚೆ ಮಾಡಿದರು. ಅವರು ಹೇಳಿದ್ದು ತನಗೆ ಬುದ್ಧಿಯಿಂದ ತಿಳಿದಿಲ್ಲವೆಂತ ಶ್ರೀ ನಾಯಕ ಮಾಸ್ತರರು ಹೇಳುತ್ತಿದ್ದರು. ಇದೇ "ಮುಮುಕ್ಷು" ಅವಸ್ಥೆಯಲ್ಲಿ, ಸಾಧನಾಪಥ, ಸಮಗ್ರ ಜೀವನ, ಸಮನ್ವಯದೃಷ್ಟಿ ಈ ವಿಚಾರಗಳಲ್ಲಿ ಭಕ್ತಿ ಬೆಳಸಿಕೊಂಡು ತಮ್ಮ ದೇಹವನ್ನು ಬಿಟ್ಟು ಅಗಲಿದರು

ನಮ್ಮ ದೇಶದಲ್ಲಿ ಶ್ರೀ ನಾಯಕ ಮಾಸ್ತರರಿಗಿಂತ ದೊಡ್ಡ ದೊಡ್ಡ ವ್ಯಕ್ತಿ ಗಳೆಷ್ಟೋ ಆಗಿಹೋಗಿದ್ದಾರೆ. ಇನ್ನೂ ಅಂಥಾ ಪ್ರಭಾವಿ ವ್ಯಕ್ತಿಗಳು ನಮ್ಮ ದೇಶದಲ್ಲಿದ್ದಾರೆ. ಆದರೆ ಆದ್ಯಾತ್ಮದ ತಕ್ಕಡಿಯಲ್ಲಿ ಗಾಂಧೀಜಿಯವರು ಪುರಸ್ಕರಿಸಿದ ಹನ್ನೊಂದು ವ್ರತಗಳ ಆಚರಣೆಯಲ್ಲಿ ತೂಗಿನೋಡಿದರೆ ಇವರಂಥ ಸಾಧಕ ಸೇವಕರು ಕಾಣುವುದು ಬಹಳ ವಿರಳ. ಇವರು ಸಣ್ಣ ಕ್ಷೇತ್ರದಲ್ಲಿ ಸಾಮಾನ್ಯ ಮನುಷ್ಯನಂತೆ ಮಾಡಿದ ಕಾರ್ಯವೇ ಅವರ ಪೂರ್ಣತೆಯ ದರ್ಶನವಾಗಿದೆ. ನಾವೆಲ್ಲ ಅವರ ಅನು ಯಾಯಿಗಳು ಅವರಿಗೆ ಸದಾ ಋಣಿ ಇದ್ದೇವೆ. ಅವರ ಆತ್ಮಜ್ಯೋತಿ ನಮಗೆ ಬೆಳಕು ಕೊಡುತ್ತಿರಲಿ ಎಂತ ನಮ್ಮ ಪ್ರಾರ್ಥನೆ.

# ಜ್ಞಾನತೃಷ್ಣ ಘನವಂತ

**ಸುನಂದಾ ದಯಾನಂದ ಪ್ರಭು**

ನನ್ನ ಆರನೆಯ ವರ್ಷದಿಂದಲೂ ನನಗೆ ಶ್ರೀ ನಾಯಕ ಮಾಸ್ತರರ ಪರಿಚಯ ವಿತ್ತು. ನಮ್ಮ ತಂದೆ ಶ್ರೀ ಕೆ. ಎನ್. ಗಾಯತೊಂಡೆ ಅವರು ಅವರ ಮಿತ್ರರಾಗಿದ್ದು ಮುಂಬೈಗೆ ಬಂದಾಗಲೆಲ್ಲ ಮಾಸ್ತರರು ಅವರ ಜೊತೆಯೇ ಉಳಿಯು ತ್ತಿದ್ದರು. ಅವರಿಗೆ ಬೇಕಾಗುವ ಪಥ್ಯದ ಆಹಾರ ನಮ್ಮಲ್ಲಿ ಅವರಿಗಾಗಿ ಸದಾ ಸಿದ್ಧವಾಗಿರುತ್ತಿತ್ತು. ಅಲ್ಲದೆ ಅವರು ಉತ್ತರ ಕನ್ನಡ ಜಿಲ್ಲೆಯಲ್ಲಿ ಇರುತ್ತಿದ್ದಾಗ ಅವರಿಗೆ ಬೇಕಾದ ಒಣಗಿದ ಕಪ್ಪು ದ್ರಾಕ್ಷೆಯನ್ನು ನಮ್ಮ ತಂದೆಯವರೇ ಕಳುಹಿಸಿ ಕೊಡುತ್ತಿದ್ದರು. ಅವರಿಗೆ ಬೇಕಾದ ಪುಸ್ತಕಗಳನ್ನೂ ನಾವೇ ಮುಂಬೈಯಿಂದ ಪಡೆದು ಕಳುಹಿಸುತ್ತಿದ್ದೆವು.

ಅವರು ಹಿರೇಗುತ್ತಿ ಬಿಟ್ಟು ಅಂಕೋಲೆಗೆ ಬಂದಾಗ ನಮ್ಮಲ್ಲಿ ಇಲ್ಲವೇ ಶ್ರೀ ಹರಿ ಪೈಗಳಲ್ಲಿ ಊಟಕ್ಕೆ ಬರುತ್ತಿದ್ದರು. ನಮ್ಮಲ್ಲಿ ಅವರು ತೀರ ಆತ್ಮೀಯತೆ ಯಿಂದ ಇರುತ್ತಿದ್ದರಲ್ಲದೆ ನಾವು ಬೇಯಿಸಿಕೊಟ್ಟ ಸಪ್ಪೆ ತರಕಾರಿಯನ್ನೇ ತೀರ ರುಚಿಯಿಂದ ತಿನ್ನುತ್ತಿದ್ದರು. ನಮ್ಮ ತಂದೆಯವರ ಆಧ್ಯಾತ್ಮಿಕ ವೃತ್ತಿಯ ಕಾರಣದಿಂದಾಗಿ ಶ್ರೀ ಮಾಸ್ತರರಿಗೆ ಅವರಲ್ಲಿ ಭಾರೀ ಸ್ನೇಹವಿತ್ತು. ತಮ್ಮ ಕೊನೆಯ ಕಾಲದಲ್ಲಿ ನಮ್ಮ ತಂದೆ ತೀರ ಬಡತನದ ಸ್ಥಿತಿಗೆ ಮುಟ್ಟಿದ್ದು, ಸಂಸಾರದ ಜವಾಬ್ದಾರಿಗಳು ಬೇಕಾದಷ್ಟು ಇದ್ದರೂ ಅವರು ತೀರ ಶಾಂತಚಿತ್ತದಿಂದ ಇಹಯಾತ್ರೆ ಮುಗಿಸಿದ್ದರು. ಅವರ ಬಡತನದ ವಿಚಾರ ಶ್ರೀ ಮಾಸ್ತರರಿಗೆ ತಿಳಿದಿರಲಿಲ್ಲವಷ್ಟೇ ಅಲ್ಲ, ನಮ್ಮ ತಂದೆಯವರ ಜೀವನ ವಿಧಾನದಿಂದಾಗಿ ಅವರು ತೀರ ಅಚ್ಚರಿಪಟ್ಟರು. ನಮ್ಮ ತಂದೆಯವರಿಂದ ನನಗೆ ದೇಣಿಗೆಯಾಗಿ ಬಂದ ಆಧ್ಯಾತ್ಮಿಕ ವಿಚಾರಗಳ ಚರ್ಚೆಗೆ ಅವರು ಆಗಾಗ ನಮ್ಮ ಮನೆಗೆ ಬರುತ್ತಲಿದ್ದರು. ಸಂಸಾರಸ್ಥರ ಆಧ್ಯಾತ್ಮಿಕ ಸಾಧನೆ ಬ್ರಹ್ಮಚಾರಿಗಳ ಸಾಧನೆಗೂ ದೊಡ್ಡದೆಂದು ನಾನು ಅವರಿಗೆ, ಸಂತ ತುಕಾರಾಮ, ಕಬೀರದಾಸ, ಏಕನಾಥ ಮುಂತಾದ ಸಂಸಾರಸ್ಥರ ಉದಾಹರಣೆ ನೀಡಿ ಹೇಳುತ್ತಲಿದ್ದೆ. ಕೊನೆಕೊನೆಗೆ ನನ್ನ ವಿಚಾರ ಗಳು ಅವರಿಗೆ ಪಟಾಯಿಸುತ್ತಲಿದ್ದವು.

ಎಂದಿಗೂ ಚಿಲ್ಲರೆ, ಕ್ಷುಲ್ಲಕ ವಿಷಯಗಳ ಕಡೆ ಅವರ ಲಕ್ಷ್ಯವಿರುತ್ತಿರಲಿಲ್ಲ. ಸದಾ ಉಚ್ಚ ವಿಚಾರಗಳ ಕಡೆ ಅವರ ಗಮನ. ಮಾನಾಪಮಾನಗಳ ಕಡೆ ಅವರ ಗಮನವಿರುತ್ತಿರಲಿಲ್ಲ. ಅಪಮಾನದ್ದೆನಿಸಬಹುದಾದ ಪ್ರಸಂಗಗಳಲ್ಲೂ ಅವರು ಶಾಂತವೃತ್ತಿಯನ್ನು ಬಿಟ್ಟವರಲ್ಲ. ಒಮ್ಮೊಮ್ಮೆ ಅವರು ನಮ್ಮ ಮನೆಗೆ ಬಂದಾಗ ನಮ್ಮಲ್ಲಿ ನೆಂಟರಿಷ್ಟರು ತುಂಬಿರಲು ಅವರ ಜೊತೆ ಮಾತನಾಡಲು ನನಗೆ ವೇಳೆ ಸಿಗದ ಪ್ರಸಂಗಗಳುಂಟು. ಆದರೆ ಆ ಬಗ್ಗೆ ಅಸಮಾಧಾನಪಟ್ಟವರಲ್ಲ.

"ಸೇವೆ" ಮತ್ತು "ನಿಷ್ಕಾಮ ಕರ್ಮ" ಎಂಬ ವಿಚಾರಗಳ ಬಗ್ಗೆ ನನಗೂ ಅವರಿಗೂ ಸದಾ ವಾದವಿವಾದ. "ನಿಷ್ಕಾಮ ಕರ್ಮ" ಎನ್ನುವಲ್ಲಿ ಹಿನ್ನೆಲೆಯಾಗಿ 'ಅಹಂ' ಇರುತ್ತದೆ; ಹೀಗಾಗಿ ಸೇವೆ ಎಂಬ ಕಲ್ಪನೆ ಶ್ರೇಷ್ಠವಾದದ್ದು, ಎಂದು ಅವರ ಹೇಳಿಕೆ. ಆದರೆ ಸಂಸಾರಸ್ಥರಾದ ನಮಗೆ ನಿಷ್ಕಾಮಕರ್ಮದ ಕಲ್ಪನೆಯೇ ಸರಿಹೊಂದುವಂಥದ್ದು, ಅದೇ ಗೃಹಸ್ಥರಿಗೆ ಸರಿಯಾದ ದಾರಿ, ಎಂಬುದು ನನ್ನ ವಾದ. ಸಾಕಷ್ಟು ಓದಿಕೊಂಡವರಾದ ಅವರು, ತ್ಯಾಗ, ಸೇವೆ, ನಿಷ್ಕಾಮಕರ್ಮ ಗಳನ್ನು ನಡೆಸಿ ಸಾಕಷ್ಟು ಪ್ರಸಿದ್ಧರಾದ ಈ ವ್ಯಕ್ತಿ, ನನ್ನಂಥ ಸಾಮಾನ್ಯ ಗೃಹಿಣಿಯಲ್ಲಿ ಚರ್ಚೆ ನಡೆಸಿ ನನ್ನ ಅನುಭವ (ಅದನ್ನು "ಜ್ಞಾನ" ಎನ್ನಲಾರೆ)ಗಳನ್ನು ತಿಳಿದುಕೊಳ್ಳಬೇಕೆಂದು ಹೊಂದಿರುವ ನಿಲುವು ಅವರ ಜ್ಞಾನತೃಷ್ಣೆಗೆ ಸಾಕ್ಷಿಯಾಗಿದೆ. ಯಾವ ದೆಸೆಯಿಂದಲಾದರೂ ಅದು ಬರಲಿ, ತಾನು ಬೆಳಕು ಕಾಣಬೇಕೆಂಬ ಅವರ ಉತ್ಸಾಹವನ್ನು ತೋರಿಸುತ್ತದೆ. ಇದು ಅವರ ಘನತೆಗೆ ಒಂದು ಉದಾಹರಣೆ.

ಗ್ರಾಮಸೇವಾ ಸಮಿತಿ ಅಥವಾ ಅವರು ಕಟ್ಟಿ ನಿಲ್ಲಿಸಿದ ಇತರ ಸಂಸ್ಥೆಗಳಲ್ಲಿ ತೀರ ಕಟ್ಟುನಿಟ್ಟಿನ ನಡಾವಳಿಗಳು ಗೃಹಿಣಿಯಾದ ನನ್ನ ದೃಷ್ಟಿಯಿಂದ ಸರಿಕಾಣಿಸವು, ಎಂದು ನಾನು ಅವರಲ್ಲಿ ವಾದಿಸಿದಾಗ ಅದನ್ನು ಒಪ್ಪಿಕೊಳ್ಳುವ ತೆರೆದ ಮನಸ್ಸು ಅವರಲ್ಲಿ ಇತ್ತು. ಗೃಹಿಣಿಯಾಗಿ ನನ್ನ ಅನುಭವಗಳ ಹಿನ್ನೆಲೆಯಲ್ಲಿ ನಾನು ಹೇಳಿದ ಮಾತುಗಳನ್ನು ಅವರು ಒಪ್ಪಿಕೊಳ್ಳುತ್ತಿದ್ದರು. ನಮ್ಮ ತಂದೆಯವರ ಸಂಸಾರದ ಮತ್ತು ನಮ್ಮ ಸ್ವಂತ ಸಂಸಾರದ ಉದಾಹರಣೆಗಳನ್ನಿತ್ತು ನಾನು ವಿಚಾರಗಳನ್ನು ಮಂಡಿಸುತ್ತಿದ್ದೆ. ಕೊನೆಕೊನೆಗೆ ಅವರು ಕೇವಲ ತಾರ್ಕಿಕವಾದ ಕಟ್ಟುನಿಟ್ಟಿನ ವಿಚಾರಗಳಿಗಿಂತ ಮಾನವೀಯ ಅಂಶಗಳ ಕಡೆ ಒಲವು ಹೊಂದುವ ನಿಲುವು ತಳೆದುದು ಸ್ಪಷ್ಟವಾಗಹತ್ತಿತು. ಸಾಂಸಾರಿಕ ಜೀವನದ ಸಂಕೀರ್ಣ ಸಮಸ್ಯೆ ಗಳ ನಡುವೆ ಸಾರ್ವಜನಿಕ ಸೇವೆ ಮಾಡುವುದು, ಅವಿವಾಹಿತ• ಹಾಗೂ ಯಾವುದೇ ಕಟ್ಟುಪಾಡು ಇಲ್ಲದ ವ್ಯಕ್ತಿಯ ಸೇವೆಗಿಂತ ಕಷ್ಟಕರವಾದದ್ದೆಂಬ ವಿಚಾರವನ್ನು ನನ್ನ ವಾದಸರಣಿಯಿಂದ ಅವರು ಅರ್ಥಮಾಡಿಕೊಂಡಿದ್ದರು.

ಮುಮುಕ್ಷುವಾಗಿದ್ದ ಅವರು ಕೊನೆಯ ಬಾರಿ ನಮ್ಮಲ್ಲಿ ಬಂದಾಗ, ಸಂತ ತುಕಾರಾಮರ ಗೂಢಾರ್ಥವುಳ್ಳ ಒಂದು ಅಬಂಗದ ಅರ್ಥವನ್ನು ನನ್ನಿಂದ ಹೇಳಿಸಿ ಕೊಂಡಿದ್ದರು. ಇಂಥ ತೆರೆದ ಮನ ಅವರ ಘನವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿ.

# ಗುರು—ಹಿರಿಯ

## ಮೀರಾ ಅನಂತ ಶಾನಭಾಗ

ನಮ್ಮ ಕೆಲವು ಪರಿವಾರಗಳಿಗೆ ಕೂಡಿ "ಬಾಪು ಬಾಬಾ ಪರಿವಾರ" ಎಂದು ನಾನೇ ಹೆಸರಿಟ್ಟಿದ್ದೇನೆ. ಆ ಪರಿವಾರಕ್ಕೆ ಪೂಜ್ಯ ನಾಯಕ ಮಾಸ್ತರರು ತಂದೆ, ಗುರು ಹಾಗೂ ಹಿರಿಯರಾಗಿದ್ದರು. ಒಮ್ಮೆ ಕಂಡರೇ ಭಕ್ತಿ ಆದರಗಳು ಉಕ್ಕಿಬರಬೇಕು; ಅಂಥಹದು ಅವರ ವ್ಯಕ್ತಿತ್ವ.

ನಾನು ಚಿಕ್ಕವಳಿದ್ದಾಗ ಹಿರಿಯರಿಂದ ಅವರ ಸರಳ ಜೀವನದ ಬಗ್ಗೆ ತುಂಬಾ ಕೇಳಿದ್ದೆ. ವಿದ್ಯಾರ್ಥಿ ದಸೆಯಿಂದಲೂ ಇದೇತರಹ ಉಡಿಗೆ, ತೊಡಿಗೆ, ನಡೆ, ನುಡಿ ಗಳಲ್ಲಿ ಸರಳವಾಗಿದ್ದರಂತೆ. ಇದೇ ಗಂಭೀರ ಹಾಗೂ ಚಿಂತನಶೀಲ ವ್ಯಕ್ತಿತ್ವ ಅವರ ದಾಗಿತ್ತಂತೆ. ೧೯೪೨ರ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಪೂಜ್ಯರಿಂದ ಪಡೆದ ಸಲಹೆ ಹಾಗೂ ನೇತೃತ್ವಗಳ ಬಗ್ಗೆ ನನ್ನ ಮದುವೆಯಾದ ಮೇಲೆ ನನ್ನ ಪತಿಯಿಂದ ಕೇಳಿದ್ದೆ. ಅಂದಿನಿಂದಲೂ ಅವರ ನಿಕಟ ಪರಿಚಯ ಪಡೆಯಬೇಕೆಂದು ಬಹಳ ಬಯಸಿದ್ದೆ.

ಅವರ ನಿಕಟ ಪರಿಚಯ ನನಗೆ ಪ್ರತ್ಯಕ್ಷವಾಗಿ ಆದದ್ದು ಕೇವಲ 15-16 ವರ್ಷಗಳ ಹಿಂದೆ, ಬಂಧು ಶ್ರೀ ರಾಯಸರ ಕೃಪೆಯಿಂದ. ಆಗೊಮ್ಮೆ ನಾನು ಅವರನ್ನು ನಮ್ಮಲ್ಲಿ ಊಟಕ್ಕೆ ಬರಹೇಳಿದ್ದೆ. ಉಪ್ಪು ಖಾರ ಇಲ್ಲದೆ ಅಡಿಗೆಯಾದ್ದ ರಿಂದ "ಎಲ್ಲರಿಗಿಂತ ನನ್ನದು ಬೇರೆ, ಹಾಗಾಗಿ ಬೇರೆಯವರಿಗೆ ನನ್ನಿಂದ ತೊಂದರೆ ಯಾಗುತ್ತದೆ" ಎಂದು ಅವರಿಗೆ ಅನಿಸಿತ್ತು. "ನಿನಗೆ ಏಕಮ್ಮ ಸುಮ್ಮನೆ ತೊಂದರೆ" ಎಂದರು; ಆದರೂ ಬಂದಿದ್ದರು. ಅಲ್ಲಿಂದೀಚೆಗೆ ಕುಮಟಾಕ್ಕೆ ಬಂದಾಗಲೆಲ್ಲಾ ನಮ್ಮಲ್ಲಿ ಬರುತ್ತಿದ್ದರು. ಅವರ ಸೇವೆಮಾಡಲು ನಮಗೆಲ್ಲಾ ತುಂಬಾ ಆನಂದ ವೆನಿಸುತ್ತಿತ್ತು. ಆದರೆ ತನ್ನಿಂದ ಬೇರೆಯವರಿಗೆ ತೊಂದರೆಯಾಗುತ್ತದೋ ಏನೋ ಎಂದು ಅವರಿಗೆ ಚಡಪಡಿಕೆಯೆನಿಸುತ್ತಿತ್ತು. ತನ್ನ ಊಟ ಎಲ್ಲರಂತಲ್ಲ, ತನಗಾಗಿ ಬೇರೆ ಮಾಡಬೇಕಲ್ಲ, ಎಂದು ಅವರಿಗೆ ಸಂಕೋಚವೆನಿಸುತ್ತಿತ್ತು. ಆದಷ್ಟು ಸ್ವತಃ ಅಡಿಗೆ ಮಾಡಿಕೊಳ್ಳುತ್ತಿದ್ದರು. ಈಗೀಗ ಆರೋಗ್ಯ ಸರಿಯಾಗಿರುತ್ತಿರಲಿಲ್ಲವಾದರೂ ಪುಸ್ತಕಗಳ ದೊಡ್ಡ ಗಂಟನ್ನು ಹೊತ್ತು ಕಷ್ಟವಾದರೂ ಹೆಜ್ಜೆ ಇಡುತ್ತಿದ್ದರು. ನಡೆಯುವಾಗ ತೂರಿದಂತಾಗುತ್ತಿತ್ತು. ಅವರ ನಿಕಟವರ್ತಿಗಳು ಯಾರಾದರೂ ಕಂಡರೆ ಆಗ್ರಹಪೂರ್ವಕವಾಗಿ ಅವರಿಂದ ಆ ಗಂಟನ್ನು ಎತ್ತಿಕೊಳ್ಳಬೇಕಾಗುತ್ತಿತ್ತು.

ಬಳ್ಳಾರಿಯಲ್ಲಾದ ಕರ್ನಾಟಕ ಸರ್ವೋದಯ ಸಮ್ಮೇಳನಕ್ಕೆ ಅವರೊಟ್ಟಿಗೆ ಹೋಗುವ ಭಾಗ್ಯ ನನಗೆ ಲಭಿಸಿತ್ತು. ಅಲ್ಲಿ ಸ್ವಯಂಸೇವಕರು ಅವರಿಗಾಗಿ ಸಪ್ಪೆ ಊಟದ ವ್ಯವಸ್ಥೆಯನ್ನು ಮಾಡಿದ್ದರು. ಆದರೂ ಆರೋಗ್ಯ ಸರಿಯಾಗಿಲ್ಲದ್ದ ರಿಂದ ಸ್ವಲ್ಪ ಹಾಲು ವಗೈರೆ ಹೆಚ್ಚಿಗೆ ಬೇಕಾದರೆ ಅವರು ಎಂದೂ ಕೇಳುತ್ತಿದ್ದಿಲ್ಲ. ನಾವು ಯಾರಾದರೂ ಲಕ್ಷ್ಯಕೊಟ್ಟು ತಂದುಕೊಟ್ಟರೆ ತೆಗೆದುಕೊಳ್ಳುತ್ತಿದ್ದರು.

ಪಾನಪ್ರತಿಬಂಧದ ಸಂಬಂಧದಲ್ಲಿ ಉಪವಾಸ ಮಾಡಿದಾಗ, ಹಾಗೂ ಅವರು ಕೈಮುರಿದು ಕೊಂಡಾಗ ಒಂದೊಂದು ದಿನ ಅವರ ಸೇವೆ ಮಾಡುವ ಭಾಗ್ಯ ನನಗೂ ಲಭಿಸಿತ್ತು. ಇಷ್ಟೊತ್ತಿಗೆ ನಮ್ಮ ಸಂಬಂಧ ನಿಕಟವಾದ್ದರಿಂದ ಇರಬೇಕು, ಸಂಕೋಚ ತೊರೆದು ಸೇವೆ ಸ್ವೀಕರಿಸಿದ್ದರು. ಕೊನೆಯ ಸಲ ಅವರು ಹಾಸಿಗೆ ಹಿಡಿದಾಗ ಸೇವೆ ಮಾಡಲು ಸಾಧ್ಯವಾಗದ್ದಕ್ಕೆ ನನಗೆ ಜೀವನವಿಡೀ ಪರಿತಪಿಸುವಂತಾಗಿದೆ.

ಜೀವನದಲ್ಲಿ ಏನಾದರೂ ಸಮಸ್ಯೆಗಳಿದ್ದಾಗ ನಾನು ಮಾವನಗೇರಿಗೆ ಇಲ್ಲವೇ ಅಂಕೋಲೆಗೆ ಹೋಗಿ ಅವರನ್ನು ಭೆಟ್ಟಿಯಾಗುತ್ತಿದ್ದೆ. ಹೀಗೆ ಒಂದು ಪ್ರಸಂಗದಲ್ಲಿ "ನನಗೆ ಇಲ್ಲಿರುವುದೇ ತುಂಬಾ ಬೇಸರವಾಗಿದೆ. ಮನೆಯವರದು ಹೇಗೋ ಆಗುತ್ತಿದೆ. ಇದ್ದಕ್ಕಿದ್ದಂತೆ ಪವನಾರದ ಬ್ರಹ್ಮವಿದ್ಯಾಮಂದಿರಕ್ಕೆ ಹೊರಟು ಹೋಗಬೇಕೆನ್ನಿಸುತ್ತಿದ್ದೆ" ಎಂದೆ. ಅವರು ಸಮ್ಮತಿ ನೀಡುವರೆಂದು ಕೆಲಹೊತ್ತು ಕಾದೆ. ಆದರೆ ತಮ್ಮ ಎಂದಿನದೇ ನಗೆಯ ಹೊನಲು ಹರಿಸಿ "ಅಯ್ಯೋ ಹುಚ್ಚೀ ಇಲ್ಲಿ ನಿನಗೆ ಮಾಡಲು ಬೇಕಾದಷ್ಟಿದೆ. ಇಲ್ಲಿ ಸಾಧಿಸಲಾಗದ್ದಕ್ಕೆ ಅಲ್ಲಿಗೆ ಹೋಗ ಬೇಕೇ ? ಏನೂ ಬೇಡ", ಎಂದು ಬಿಟ್ಟರು. "ಏನೇ ಬಂದರೂ ಮನಸ್ಸನ್ನು ಮಾತ್ರ ಏಕಾಗ್ರ ಮಾಡಿ ದೇವರಲ್ಲಿ ಇಡಲಾಗುವದಿಲ್ಲ; ಏನುಮಾಡಲಿ ?" ಎಂದು ಪರಿತಪಿಸಿದಾಗ "ಅದಕ್ಕೆ ಸತತಾಭ್ಯಾಸಬೇಕು. ಸಾವಕಾಶವಾಗಿ ಸಾಧಿಸೀತು; ಪ್ರಯತ್ನಿಸು" ಎಂದರು. ನಮ್ಮ ಮಕ್ಕಳು ಏನಾದರೂ ಸಲಹೆ ಕೇಳಿದರೂ ತುಂಬಾ ಪ್ರೇಮದಿಂದ ತಿಳಿಸಿ ಹೇಳುತ್ತಿದ್ದರು. ನನ್ನ ಮಗನು ಹೋದ ವರ್ಷ ತನ್ನ ಹೊಸ ಅಂಗಡಿಯ ಪ್ರಾರಂಭೋತ್ಸವಕ್ಕೆ ಆಮಂತ್ರಿಸಿ ಆಶೀರ್ವಾದ ಬೇಡಿದಾಗ ಕೆಲವು ಅನಿವಾರ್ಯ ಕಾರಣಗಳಿಂದಾಗಿ ಬರಲಾಗದಿದ್ದರೂ "ನನ್ನ ಆಶೀರ್ವಾದ ನಿನಗೆ ಎಂದೆಂದೂ ಇದೆ. ಸತ್ಯಪಥದಲ್ಲಿ ನಡೆದು ಉದ್ಯೋಗಶೀಲನಾದ ನಿನಗೆ ದೇವರ ಆಶೀರ್ವಾದವೂ ಸಿಕ್ಕೇ ಸಿಗುತ್ತದೆ", ಎಂದು ಬರೆದು ಆಶೀರ್ವದಿಸಿದ್ದರು.

"ಈ ಬ್ರಹ್ಮಚಾರಿಗಳಿಗೇ ಹೀಗೆ, ಸಿಟ್ಟು ಹೆಚ್ಚು" ಎಂದು ಕೆಲವರು ಅನ್ನು ತ್ತಿದ್ದರು. ನನಗೆ ಮಾತ್ರ ಅವರ ಸಿಟ್ಟಿನ ಬಿಸಿ ಎಂದೂ ತಾಗಲಿಲ್ಲ. ನಾನು ಅವರನ್ನು ಯಾವಾಗಲೂ ಕಂಡದ್ದು ಭೀಷ್ಮಪಿತಾಮಹನಂತಹ ಧೀರ, ಗಂಭೀರ ವ್ಯಕ್ತಿತ್ವದಲ್ಲಿ. ಇನ್ನು ಮುಂದೆ ನನ್ನ ಒಳಗಣ್ಣಿಗೆ ಎಂದೆಂದೂ ಕಾಣುವ ಮೂರ್ತಿಯೂ ಅದೇ

ಆಗಿದೆ. ನಮ್ಮ ಈ ಪರಿವಾರದಲ್ಲಿ ಯಾರಿಗೇ ಸ್ವಲ್ಪ ಕಾಯಿಲೆಯಾದರೂ ಬಂದು ನೋಡಿ ಮಾತಾಡಿಸಿ ಇಲ್ಲವೇ ಪತ್ರ ಬರೆದು ಧೈರ್ಯ ತುಂಬುತ್ತಿದ್ದರು; ಸಲಹೆಗಳನ್ನು ನೀಡುತ್ತಿದ್ದರು.

ತಮ್ಮ ಗೆಳೆಯರ ಇಲ್ಲವೇ ನಿಕಟವರ್ತಿಗಳ ಬಗ್ಗೆ ಮಾತನಾಡುವಾಗ ಅವರ ಬಗ್ಗೆ ಇದ್ದ ಪ್ರೀತಿ, ಆದರಗಳೆಲ್ಲವೂ ಪೂಜ್ಯರ ಮೋರೆಯ ಮೇಲೆ ಎದ್ದು ಕಾಣುತ್ತಿದ್ದವು. ವಿನಮ್ರತೆ ಹಾಗೂ ಸ್ನೇಹಮಯ ವೃತ್ತಿ ಇವುಗಳ ಸಾಕ್ಷಾತ್ ಮೂರ್ತಿಯೇ ಅವರಾಗಿದ್ದರು. ಅವರನ್ನು ಕಳೆದುಕೊಂಡ ನಮಗೆ ತಂದೆ, ಹಿರಿಯನನ್ನು ಕಳೆದುಕೊಂಡಂತಾಗಿದೆ. ಅವರನ್ನು ವಿಶ್ರಾಂತಿಗಾಗಿ ನಮ್ಮಲ್ಲಿ ಇಟ್ಟುಕೊಳ್ಳಬೇಕೆಂಬ ನಮ್ಮ ಇಚ್ಛೆ ಕೊನೆಗೂ ಈಡೇರಲಿಲ್ಲ. “ಭಗಿನಿ ಮೀರಾ ತಾಯಿಗೆ” ಎಂದು ಪ್ರಾರಂಭಿಸಿ “ನಾಯಕ ಮಾಸ್ತರನ ಶುಭಾಕಾಂಕ್ಷೆಗಳು” ಎಂದು ಮುಗಿಸುತ್ತಿದ್ದ ಆ ಸ್ನೇಹಮಯ ಪತ್ರಗಳು ಇನ್ನಿಲ್ಲವಾಗಿವೆ. ಅವರ ಅಮರ ಆತ್ಮಕ್ಕೆ ಶಾಂತಿಕೋರುವದೊಂದೇ ಈಗ ನಮ್ಮ ಪಾಲಿಗುಳಿದಿದೆ.

# ಕೃತಾರ್ಥ ಜೀವಿ

### ನರಸಿಂಹ ದಾಬಡೆ

ಮಹಾತ್ಮಾ ಗಾಂಧಿ ಅವರು ತಮ್ಮ ಆಶ್ರಮವಾಸಿಗಳಿಗೆ ಮತ್ತು ತಮ್ಮ ಶಿಷ್ಯರೆಂದು ಹೇಳಿಕೊಳ್ಳುವವರಿಗೆ ಹನ್ನೊಂದು ವ್ರತಗಳನ್ನು ಪಾಲಿಸಲು ಹೇಳುತ್ತಲಿದ್ದರು. ಇವು ನಿತ್ಯ ಪ್ರಾರ್ಥನೆಯಲ್ಲಿ ಪಠಿಸಲ್ಪಡುತ್ತಿದ್ದವು. ಈ ವ್ರತಗಳು ಇಂತಿವೆ: ಅಹಿಂಸಾ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಸಂಗ್ರಹ, ಶರೀರಶ್ರಮ, ಅಸ್ವಾದ, ಸರ್ವತ್ರ ಭಯವರ್ಜನ, ಸರ್ವಧರ್ಮ ಸಮಾನತ್ವ, ಸ್ವದೇಶಿ, ಸ್ಪರ್ಶ ಭಾವನೆ. ಇದನ್ನು ಇಂದಿಗೂ ಅದರ ಅರ್ಥ ತಿಳಿಯದೇ ಗಿಳಿಯಂತೆ ಪಠಣ ಮಾಡುವವರುಂಟು; ಈ ವ್ರತಗಳನ್ನು ಚೆನ್ನಾಗಿ ಬಣ್ಣಿಸುವ ಬೇಕಾದಷ್ಟು ಘನ ಜನರಿರಬಹುದು. ಆದರೆ ಇವುಗಳನ್ನು ಕೃತಿಗಿಳಿಸಿದವರೆಷ್ಟು ಜನ? ಈ ಪ್ರಶ್ನೆಗೆ ಉತ್ತರಕೊಡುವದು ತುಂಬಾ ಸಾಹಸದ ಮಾತು. ಕಳೆದ ನಾಲ್ಕು ದಶಕಗಳಲ್ಲಿ ನಾನು ಅನೇಕ ಕಾರ್ಯಕರ್ತರನ್ನೂ, ಮುಖಂಡರನ್ನೂ ದೂರದಿಂದ, ಹತ್ತಿರದಿಂದ ನೋಡಿದ್ದೇನೆ. ನಮ್ಮ ಪ್ರಾಂತ, ಪರಪ್ರಾಂತಗಳಲ್ಲಿ ಕೂಡ ನೋಡಿದ್ದೇನೆ. ಈ ವ್ರತಗಳನ್ನು ನಿಷ್ಠೆಯಿಂದ ಮೂರ್ತಿಮಂತ ಕೃತಿಗಿಳಿಸಿದವರು ನಮ್ಮ ಪ್ರಾಂತದಲ್ಲಿ ತೀರವಿರಳ. ಅಂಥವರಲ್ಲಿ (ಈ ವ್ರತ ಪಾಲಿಸುವವರಲ್ಲಿ) ನಮ್ಮ ದಿ॥ ತಿಮ್ಮಪ್ಪಾ ನಾಯಕ ಮಾಸ್ತರರು ಅಗ್ರಗಣ್ಯರೆಂದು ಹೇಳಿದರೆ ಎಳ್ಳಷ್ಟೂ ಅತಿಶಯೋಕ್ತಿಯಾಗಲಾರದೆಂದು ಎಲ್ಲರೂ ಒಪ್ಪುವರು.

ನಾಯಕ ಮಾಸ್ತರರ ಸಂಪರ್ಕ ನನಗೆ ಅನೇಕಾನೇಕ ವಿಧಗಳಿಂದ ಬಂದುದುಂಟು. ತೀರಹತ್ತಿರದಿಂದ, ದೂರದಿಂದ ಅವರ ಚಟುವಟಿಕೆಗಳನ್ನು ನಿರೀಕ್ಷಿಸಿರುವೆ. ಅವರ ಸಂಗಡ ಅನೇಕಾನೇಕ ವಿಷಯಗಳ ಬಗ್ಗೆ ಚರ್ಚಿಸಿರುವೆ. ಅವರೊಬ್ಬ ಸೌಜನ್ಯಮಯ ನಿರಾಡಂಬರ ಮೂರ್ತಿ. ಅವರನ್ನು ನಾನು ಕಂಡದ್ದು ನಾನಾ ರೂಪಗಳಲ್ಲಿ: ನಿಷ್ಠಾವಂತ ಸತ್ಯಾಗ್ರಹಿಯಾಗಿ, ನಿರಾಡಂಬರ ರಾಜಕಾರಣಿಯಾಗಿ, ಸ್ವಾರ್ಥ ತ್ಯಾಗದ ಮೂರ್ತಿಯಾಗಿ, ಆದರ್ಶ ಕೈದಿಯಾಗಿ, ಸರ್ವೋದಯ ಸೂತ್ರಧಾರಿಯಾಗಿ, ಭೂಧಾನ, ಗ್ರಾಮದಾನ ದುರಂಧರರಾಗಿ, ಮಹಾತ್ಮರ ವಿಧಾಯಕ ಕಾರ್ಯದ ಅಗ್ರಗಣ್ಯರಾಗಿ, ಆಧ್ಯಾತ್ಮಿಕ ಯೋಗಿಯಾಗಿ, ಅಪ್ಪಟ ಬ್ರಹ್ಮಚಾರಿಯಾಗಿ, ಮತ್ತು ನಿಷ್ಕಲಂಕ ಸಾಹಿತಿಯಾಗಿ. ಈ ಕಾರ್ಯಗಳನ್ನು ಕೃತಿಗಿಳಿಸುವಾಗ ಅವರು ಹಲಕೆಲವು ಅಧಿಕಾರದ ಹೊಣೆಗಾರ ಸ್ಥಾನದಲ್ಲಿದ್ದು ಸೇವೆಸಲ್ಲಿಸಿರುವರು.

ಹಾಗೆ ನೋಡಿದರೆ ನಿರಾಡಂಬರದ ಸೇವೆಯೇ ಅವರ ಜೀವನದ ಉಸಿರು. ಒಮ್ಮೆ ಅವರು ಜಿಲ್ಲಾ ಕಾಂಗ್ರೆಸ್ ಕಮಿಟಿಯ ಅಧ್ಯಕ್ಷರಾಗಿದ್ದಾರೆ. ಇನ್ನೊಮ್ಮೆ ಕರ್ನಾಟಕ ಕಾಂಗ್ರೆಸ್ ಪಾರ್ಲಿಮೆಂಟ್ ಬೋರ್ಡ ಸದಸ್ಯ, ಪಿ. ಐ. ಸಿ. ಸಿ. ಸದಸ್ಯ, ಮಗದೊಮ್ಮೆ ಸರಕಾರೀ ಸರ್ವೋದಯ ಕರ್ಣಧಾರ, ಸರ್ವಸೇವಾ ಸಂಘದ ಅಧ್ಯಕ್ಷ, ಭೂದಾನ, ಗ್ರಾಮದಾನ ಪಾದಯಾತ್ರೆಯ ಚಾಲಕ, ವಿಧಾಯಕ ಕಾರ್ಯಗಳ ಅಗ್ರಗಣ್ಯ. ಈ ಎಲ್ಲ ಉಚ್ಚಸ್ಥಾನಗಳಲ್ಲಿದ್ದರೂ ಅವರ ದೃಷ್ಟಿ ಮಾತ್ರ ಸೇವೆಯ ಕಡೆಗೇ. ದುಡ್ಡು, ಅಧಿಕಾರ, ಕೀರ್ತಿ ಈ ಯಾವ ಮೋಹಗಳಿಗೂ ಅವರು ಬೀಳಲಿಲ್ಲ.

ಅದು ೧೯೪೬ರ ಚುನಾವಣೆಯ ಕಾಲ. ಆಗ ನಾಯಕ ಮಾಸ್ತರರು ಕರ್ನಾಟಕ ಪಾರ್ಲಿಮೆಂಟರಿ ಬೋರ್ಡ್ ಸದಸ್ಯರು. ನಮ್ಮ ಪ್ರಾಂತ ಅಸೆಂಬ್ಲಿ ಮತ್ತು ಪಾರ್ಲಿಮೆಂಟ್ ಸದಸ್ಯರನ್ನು ಆರಿಸುವ ಹೊಣೆ ಈ ಪಾರ್ಲಿಮೆಂಟರಿ ಬೋರ್ಡ್‌ನದು. ಈ ಬೋರ್ಡ್ ಸಭೆ ಹುಬ್ಬಳ್ಳಿಯ ಒಂದು ಅಟ್ಟದ ಮೇಲೆ ನಡೆದಿತ್ತು. ತಮ್ಮ ಮನಸ್ಸಿನಲ್ಲಿದ್ದ ಹುರಿಯಾಳುಗಳನ್ನು ಆರಿಸದಿದ್ದಾಗ ಜನತೆಯು ಕ್ಷೋಭೆ ಏರುತ್ತಲಿತ್ತು. ಅದರಂತೆಯೇ ಓರ್ವ ಹುರಿಯಾಳುವನ್ನು ಆರಿಸದೇ ಇದ್ದುದಕ್ಕೆ ಓರ್ವ ವ್ಯಕ್ತಿ, ಆಮಂತ್ರಣವಿಲ್ಲದೇ ಸಭೆಗೆ ಪ್ರವೇಶಿಸಿ, ತನ್ನ ಕೈಯಲ್ಲಿಯ ಕೊಡೆಯಿಂದ ಆ ಬೋರ್ಡ್‌ನ ಹೊಣೆಗಾರ ವ್ಯಕ್ತಿಗೆ ಥಳಿಸಿದರು. ಪ್ರಸ್ತುತದಲ್ಲಿ, ಅಲ್ಲಿಯೇ ಇದ್ದ ನಾಯಕ ಮಾಸ್ತರರು ಏನು ಮಾಡಿದರೆಂಬುದೇ ಮುಖ್ಯ. ಆ ಸಮಯಕ್ಕೆ ನಾಯಕ ಮಾಸ್ತರರು ಕೊಡೆಯಿಂದ ಹೊಡೆಸಿಕೊಳ್ಳುತ್ತಿದ್ದ ವ್ಯಕ್ತಿಯ ಮೇಲೆ ತಾವು ಬಾಗಿ ಒಂದೆರಡು ಹೊಡೆತಗಳ ಪ್ರಸಾದವನ್ನು ಸ್ವೀಕರಿಸಿದರು. ಇದಕ್ಕ ಈ ಲೇಖಕ ಪ್ರತ್ಯಕ್ಷಸಾಕ್ಷಿ.

ಉತ್ತರ ಕರ್ನಾಟಕದ ನಾಲ್ಕು ಜಿಲ್ಲೆಗಳು ಮುಂಬೈ ಪ್ರಾಂತದಲ್ಲಿದ್ದ ಕಾಲ. ಮುಂಬೈ ಸರಕಾರ ನಿಷ್ಠಾವಂತ ಕಾರ್ಯಕರ್ತರ ಮೂಲಕ ಪ್ರತಿಯೊಂದು ಜಿಲ್ಲೆಯಲ್ಲಿಯೂ ಸರ್ವೋದಯ ಯೋಜನೆಯನ್ನು ಕಾರ್ಯ ರೂಪಕ್ಕಿಳಿಬೇಕೆಂಬ ಕಾರ್ಯಕ್ರಮ ಹಾಕಿದ್ದರು. ಇದಕ್ಕೆ ಸರಕಾರ ಒಂದು ತೀರ ಚಿಕ್ಕ ಸಮಿತಿಯನ್ನೂ ನೇಮಿಸಿತ್ತು. ಅದರಲ್ಲಿ ನಾಯಕ ಮಾಸ್ತರರು ಓರ್ವ ಸದಸ್ಯರು. ನಾನು ಆಗ್ಗೆ ಧಾರವಾಡ ಜಿಲ್ಲಾ ಸರ್ವೋದಯ ಸಂಚಾಲಕನೆಂದು ಕಾರ್ಯ ಮಾಡುತ್ತಲಿದ್ದೆ. ನಾಯಕ ಮಾಸ್ತರರು ಅನೇಕ ಸಲ ನಮ್ಮ ಕ್ಷೇತ್ರಕ್ಕೆ ಬಂದು ಒಳ್ಳೇ ಕಾರ್ಯದ ಬಗ್ಗೆ ಸಂತಸ ವ್ಯಕ್ತಪಡಿಸಿ ಮುಂದಿನ ಕಾರ್ಯದ ಬಗ್ಗೆ ಮಾರ್ಗದರ್ಶನ ಮಾಡುತ್ತಲಿದ್ದರು. ೧೯೫೯ರಲ್ಲಿ ನಾವು ಮೊಟ್ಟ ಮೊದಲು ನಮ್ಮ ಕ್ಷೇತ್ರದಲ್ಲಿ ಪಾದಯಾತ್ರೆ ಮಾಡಿದಾಗ ತುಂಬಾ ಸಂತಸದ ಕಾಗದ ಬರೆದಿದ್ದಾರೆ. ಮುಂದೆ ನಮ್ಮ ಕ್ಷೇತ್ರದಲ್ಲಿ ಭೂದಾನ ಕಾರ್ಯಕರ್ತರೊಂದಿಗೆ ಕಾಲುನಡಿಗೆಯಿಂದಲೇ ಸಂಚಾರ ಮಾಡಿ ಗ್ರಾಮದಾನದ ಪ್ರಚಾರ ಮಾಡಿದರು.

ಯಾವ ಸಾಮಾನ್ಯ ಕಾರ್ಯಕರ್ತನೂ ಅವರನ್ನು ಬೇಕಾದಾಗ ಕಾಣ ಬಹುದಿತ್ತು. ನಾಯಕ ಮಾಸ್ತರರು ಮುಖ್ಯ ಮಂತ್ರಿಯೊಡನೆ ಮಾತಾಡುವಷ್ಟೇ ಹೊಣೆಗಾರಿಕೆಯಿಂದ ಸಾಮಾನ್ಯ ಕಾರ್ಯಕರ್ತರ ಸಂಗಡ ಮಾತನಾಡಿ ಅವರ ಸಮಸ್ಯೆಗಳನ್ನು ಕೂಲಂಕಷವಾಗಿ ಕೇಳಿ ಪರಿಹರಿಸಲು ಯತ್ನಿಸುತ್ತಿದ್ದರು. ನಾಯಕ ಮಾಸ್ತರ ಪತ್ರವ್ಯವಹಾರವೂ ತುಂಬಾ ಚುರುಕು. ಯಾವ ಪತ್ರಕ್ಕೂ ಉತ್ತರ ಕೊಡದೇ ಇರುತ್ತಿರಲಿಲ್ಲ. ಆಗಾಗ್ಗೆ ನನಗೂ ಬರೆಯುತ್ತಲಿದ್ದರು. ನಾನು ಖಾದಿ ಆಯೋಗದಿಂದ ನಿವೃತ್ತನಾಗುವಾಗ್ಗೆ ಒಂದು ಸಾಮಾನ್ಯ ಪತ್ರವನ್ನು ಕಳಿಸಿದ್ದಕ್ಕೆ ಒಂದು ಕಾರ್ಡಿನಲ್ಲಿ ಅವರ ಉತ್ತರ ಬಂದೇಬಿಟ್ಟಿತು. ಅದು ೧೮–೪–೭೫ರ ಕಾರ್ಡ್. ಅವರದು ನನಗೆ ಅದೇ ಕೊನೆಯ ಪತ್ರವಾಯಿತು. ಅದರಲ್ಲಿ ಅವರು ತಮ್ಮ ಸದಿಚ್ಛೆಯನ್ನು ವ್ಯಕ್ತಮಾಡಿದ್ದರು. ಇತ್ತಲಾಗಿ ಅವರು ಗಾಂಧೀಜಿಯ ನಿಸರ್ಗ ಚಿಕಿತ್ಸೆ, ಕಚ್ಚಾ ಆಹಾರ ವಿಹಾರಗಳ ಬಗ್ಗೆಯೂ ಸಾಕಷ್ಟು ಚರ್ಚೆಮಾಡುತ್ತಲಿದ್ದರು. ಅದನ್ನು ಕೃತಿಗೂ ಇಳಿಸುತ್ತಿದ್ದರು. ಆದರೆ ಅವರ ನಿಸರ್ಗ ಚಿಕಿತ್ಸೆಯಾಗಲೀ, ಕಚ್ಚಾ ಆಹಾರವಾಗಲೀ ಬೇರೆಯವರಿಗೆ ತೊಂದರೆಯಾಗದಂತೆ ಜಾಗ್ರತೆ ವಹಿಸುತ್ತಿದ್ದರು. ಅವರು ಸ್ವತಃ ಬರೆದು ಪ್ರಸಿದ್ಧಿಸಿದ "ಭಾರತದ ನವನಿರ್ಮಾಣ ಗಾಂಧೀಜಿ" ಮತ್ತು "ಗಾಂಧಿಯವರ ಆಧ್ಯಾತ್ಮಿಕ ಜೀವನ" ಈ ಗ್ರಂಥಗಳನ್ನು ನೋಡಿ ನಾನು ಚಕಿತನಾದೆ. ಅವರ ಸಾಹಿತ್ಯದಲ್ಲಿ ಶಬ್ದಾಡಂಬರವಿಲ್ಲ. ಶಬ್ದಗಳ ಹಿಂದೆ ಅವರ ನಿಷ್ಠೆಯಂತೂ ಇದ್ದೇ ಇದೆ. ಇದರ ಜೊತೆಗೆ ಅವರ ತಪಃಪೂತ ಜೀವನವೂ ಇರುವುದರಿಂದ ಅವರ ಸಾಹಿತ್ಯದಲ್ಲಿ ತೇಜಸ್ಸು ಪ್ರಕಾಶಿಸುತ್ತದೆ. "ಗಾಂಧೀಜಿಯವರ ಆಧ್ಯಾತ್ಮಿಕ ಜೀವನ" ಪ್ರಕಾಶಿಸಿ ಆಧ್ಯಾತ್ಮದಲ್ಲಿಯ ತಮ್ಮ ಶ್ರದ್ಧೆ ನಿಷ್ಠೆಯನ್ನು ಪ್ರಕಟಪಡಿಸಿದ್ದಲ್ಲದೇ ಅವರೊಬ್ಬ ನಿರಾಡಂಬರ ಆಧ್ಯಾತ್ಮಿಕಯೋಗಿ ಎಂಬುದನ್ನೂ ಅವುಗಳಿಂದ ತೋರಿಸಿಕೊಟ್ಟರು.

ಇಂದಿನ ಡಾಂಬಿಕ ಜೀವನದಲ್ಲಿ ನಾಯಕ ಮಾಸ್ತರರಂಥವರನ್ನು ಸಂಪೂರ್ಣವಾಗಿ ಬಣ್ಣಿಸುವದು ಸಾಹಸದ ಮಾತೇ ಸರಿ. ನನ್ನ ಅಭಿಪ್ರಾಯದಲ್ಲಿ ಅವರನ್ನು ಬಣ್ಣಿಸಲು ಶಬ್ದಗಳೇ ಚಿಕ್ಕದಾಗುತ್ತವೆ. ಶಬ್ದಗಳು ನಮ್ಮ ಮನಸ್ಸಿನಲ್ಲಿಯ ಪೂರ್ಣಭಾವನೆಗಳನ್ನು ಪ್ರಕಟಮಾಡುವವೋ ಇಲ್ಲವೋ ಎಂಬ ಸಂದೇಹ ಉಂಟಾಗುತ್ತದೆ; ನಾಯಕ ಮಾಸ್ತರರ ಕೃತಾರ್ಥ ಜೀವನ ಪಡೆದ ನಮ್ಮ ಪ್ರಾಂತ್ಯ ಧನ್ಯ. ಅವರ ಆತ್ಮ ನಿಶ್ಚಯವಾಗಿ ಚಿರಶಾಂತಿಯಲ್ಲದೆ. ಅಂತಹ ಕೃತಾರ್ಥ ಜೀವಿಗೆ ನನ್ನ ಸಾವಿರ ಪ್ರಣಾಮಗಳು.

# ಶುದ್ಧ ಹೃದಯಿ

ಬಿ. ಎಂ. ಭೂಮಾ

೧೯೪೧ರಲ್ಲಿ ವೈಯಕ್ತಿಕ ಸತ್ಯಾಗ್ರಹ ಮಾಡುವವರು ಆಯಾ ಜಿಲ್ಲೆಯ ಕಾಂಗ್ರೆಸ್ ಅಧ್ಯಕ್ಷರಿಂದ ಅರ್ಜಿ ಫಾರ್ಮ್‌ನ ಮೇಲೆ ಸಹಿ ಮಾಡಿಸಿ ಕಳಿಸಿದ ನಂತರವೇ ಗಾಂಧೀಜಿಯಿಂದ ಒಪ್ಪಿಗೆ ಬರುತ್ತಿತ್ತು. ನನಗೆ ವೈಯಕ್ತಿಕ ಸತ್ಯಾಗ್ರಹದಲ್ಲಿ ಭಾಗ ವಹಿಸಬೇಕೆಂಬ ಆಸೆಯುಂಟಾಗಿ ನಾನು ಆಗ ಕಾರವಾರ ಜಿಲ್ಲೆಯ ಕಾಂಗ್ರೆಸ್ ಅಧ್ಯಕ್ಷ ರಾದ ಶ್ರೀ ಟಿ. ಎಸ್. ನಾಯಕ ಮಾಸ್ತರರ ಕಡೆಗೆ ಹೋಗಿ ನನ್ನ ಇಚ್ಛೆಯನ್ನು ವ್ಯಕ್ತಪಡಿಸಿದೆನು. ಅದಕ್ಕೆ ಅವರು ಹೇಳಿದರು : "ಐದು ಶರ್ತಗಳನ್ನು ಆಚರಣೆ ಯಲ್ಲಿ ತರಲು ನೀವು ಸಂಕಲ್ಪ ಮಾಡಿದರೆ ಮಾತ್ರ ಪರಮಿಶನ್ ಸಿಗುವದು." ಆ ಶರ್ತಗಳ ವಿವರಣೆ ಹೇಳಿದರು. ಅದನ್ನು ನಾನು ಕೇಳಿ, ನಾಲ್ಕು ಶರ್ತಗಳನ್ನು ಪಾಲಿಸಲು ಅಡ್ಡಿಯಿಲ್ಲ; ಪ್ರತಿದಿನ ನೂಲುವದಕ್ಕೆ ನನಗೆ ಆಗುವದಿಲ್ಲ" ಎಂದು ಹೇಳಿದೆನು. ಅವರು ಅದಕ್ಕೆ ಒಪ್ಪಲಿಲ್ಲ. "ಸವಡು ಇಲ್ಲ ಎನ್ನುವದು ಮನುಷ್ಯನ ಲಕ್ಷಣವಲ್ಲ. ಈ ಮಾತನ್ನು ಹೇಡಿಗಳು ಅನ್ನಬೇಕು. ಮನುಷ್ಯನಿಗೆ ಅಸಾಧ್ಯ ವಾದುದು ಏನೂ ಇಲ್ಲ; ಮನಸ್ಸು ಮಾಡಿದರೆ ಏನನ್ನೂ ಮಾಡಬಲ್ಲನು. ನೀವು ಒಂದು ಹಂಜಿ ತೆಗೆಯುವದಕ್ಕೆ ಕೆಲವೇ ಮಿನಿಟುಗಳು ಸಾಕು. ಅಷ್ಟು ವೇಳೆ ಕೊಡಲು ನಿಮಗೆ ಸವಡು ಇಲ್ಲಾ ಅಂದರೆ ಹೇಗೆ?" ಎಂದು ಅವರ ಬಾಯಿಂದ ಬಂದ ಮಾತನ್ನು ಕೇಳಿ ನನ್ನ ಮನಸ್ಸು ತಯಾರಾಗಿ ನಾನು ಒಪ್ಪಿಕೊಂಡೆನು. ಅರ್ಜಿಗೆ ಸಹಿ ಮಾಡಿಸಿಕೊಂಡು ಅವರು ಗಾಂಧೀಜಿಯ ಪರಮಿಶನ್ ತರಿಸಿದರು. ಶಿರ್ಸಿ ತಾಲ್ಲೂಕಿನ ಮಂಜಗುಣಿ ಕ್ಷೇತ್ರದಲ್ಲಿ ನನ್ನನ್ನು ಕರಕೊಂಡು ಹೋಗಿ ಸತ್ಯಾಗ್ರಹ ಮಾಡಿಸಿದರು. ಆರು ತಿಂಗಳು ಶಿಕ್ಷೆ ಆಯಿತು. ಇದಕ್ಕೂ ಮೊದಲೇ ರಾಟೆ, ಹಂಜಿ ಖರೀದಿಸಿ ೪–೫ ಹಂಜಿಗಳಲ್ಲೇ (ಅವರಿಂದಲೇ) ಆಗಲೇ ನೂಲಲು ಕಲಿತೆನು. ಮಂಜಗುಣಿಗೆ ಸತ್ಯಾಗ್ರಹಕ್ಕೆ ಹೋಗುವಾಗ ದಾರಿಯಲ್ಲಿ ನನ್ನ ಅನೇಕ ಪ್ರಶ್ನೆಗಳಿಗೆ ಸರಿಯಾದ ಉತ್ತರಗಳನ್ನು ಕೊಟ್ಟು ಸಮಾಧಾನ ಪಡಿಸಿದರು.

ಶಿರಸಿಯಲ್ಲಿ ಸರ್ವೋದಯ ಪಾತ್ರೆ ಇಡಿಸಿ ಬಂದ ಅಕ್ಕಿಯನ್ನು ವಿಕ್ರಯಿಸಿ ಸದ್ರಿಯವರ ಜೀವನದಲ್ಲಿ ಖರ್ಚಿಗೆ ಕಳುಹಿಸಿಕೊಡುತ್ತಿದ್ದೆವು. ಹೀಗೆ ಎರಡು ವರ್ಷ ಕಳೆದ ನಂತರ ಈ ಪಾತ್ರೆಗಳು ನಿಂತವು. ನಾನು ಸಹ ಬೆಳಗಾವಿ ಕಡೆ ಇರುವುದು

ಹೆಚ್ಚಾಯ್ತು. ಸದ್ರಿಯಂವರಿಗೆ ರಖಂ ಕಳುಹಿಸಿಕೊಡುವುದು ನಿಂತು ಹೋಯ್ತು. ಆತ್ಮೀಯ ಮಿತ್ರರಿಗೆ ಹಣ ಕಳುಹಿಸಲು ಬರೆಯಬೇಕೆಂಬ ವಿಚಾರ ಹುಟ್ಟಿ ಈ ಬಗ್ಗೆ ಚವಕಶಿ ಮಾಡಿದೆ. "ನಿಮ್ಮ ಮಿತ್ರರು ಗಳಿಸಿದ ಹಣ ಯಾವ ತರಹದ್ದು ? ಅಲ್ಲದೆ, ಗಾಂಧಿಯವರ, ವಿನೋಬಾರ ತತ್ತ್ವಕ್ಕೆ ಮಾನ್ಯತೆ ಕೊಡುವವರಲ್ಲದವರ ಕಡೆಯಿಂದ ಹಣ ಅಪೇಕ್ಷಿಸಬಾರದು", ಎಂಬ ಅಭಿಪ್ರಾಯವು ಅವರದಿತ್ತು. ಶಿರಸಿಯಲ್ಲಿ ಸರ್ವೋದಯದ ವತಿಯಿಂದ ಒಂದು ಇಮಾರತಿಯ ಬಾಡಿಗೆ ಬರುತ್ತಿತ್ತು.* ಅದನ್ನು ಖರ್ಚಿಗೆ ತೆಗೆದುಕೊಳ್ಳಲು ಅವರಿಗೆ ತಿಳಿಸಲಾಗಿ "ಅಂಥ ಬಾಡಿಗೆ ಹಣ ನನಗೆ ಬೇಡ" ಎಂದರು. ಶುದ್ಧ ವ್ಯವಹಾರದಿಂದ ಸಂಪಾದಿಸುವ ಮಿತ್ರರಿಗೆ ವಿನಂತಿಸಲಾಗಿ ಅಂಥ ಅತ್ಮೀಯರಾದ ಎಲ್ಲರಿಂದಲೂ ಆಶ್ವಾಸನೆಗಳು ಬಂದವು. ಇವರ ವಾರ್ಷಿಕ ಅವಶ್ಯಕತೆಗೂ ಹೆಚ್ಚಿನ ರಖಂ ಸಿಗುವಂತೆ ಅನೇಕ ಮಿತ್ರರಿಂದ ಪತ್ರಗಳು ಬಂದವು. ತಮ್ಮ ವಾರ್ಷಿಕ ಜೀವನಕ್ಕೆ ತಗಲುವಷ್ಟು ಹಣ ಜಮಾ ಆದೊಡನೆ, ಉಳಿದ ಮಿತ್ರರಿಗೆ, "ಹಣ ಭರ್ತಿ ಆಗಿದೆ; ಜರೂರ ಇಲ್ಲ" ಎಂದು ಬರೆದರು.

"ಗಾಂಧೀಜಿಯವರ ಆಧ್ಯಾತ್ಮ ಜೀವನ" ವೆಂಬ ಪುಸ್ತಕ ಬರೆದು ಕರ್ನಾಟಕ ಸರ್ವೋದಯ ಸಂಘಕ್ಕೆ ವಹಿಸಿಕೊಟ್ಟರು. ಅದನ್ನು ಬರೆದ ಬಗ್ಗೆ ೧೦೦೦ ರೂಪಾಯಿಗಳ ಸಂಭಾವನೆ ಹಣ ಕಳುಹಿಸಿ ಕೊಡಲಾಯಿತು. ಸದ್ರಿರಖಮಿನಲ್ಲಿ ತಮಗೆ ಅವಶ್ಯವಿದ್ದ ೬೦೦ ರೂ ಇಟ್ಟುಕೊಂಡು, ಉಳಿದ ೪೦೦ ರೂ ಗಳನ್ನು ಮಂಡಳಕ್ಕೆ ವಾಪಸ್ಸು ಕಳುಹಿಸಿಕೊಟ್ಟರು. "ಸಾಧನಾ ಪಥ"ವೆಂಬ ಪುಸ್ತಕ ಬರೆದು ಮುದ್ರಿಸುವ ಬಗ್ಗೆ ಬಾಗಲಕೋಟೆಗೆ ಹೋದಾಗ, ನನ್ನನ್ನು ತಮ್ಮ ಸಂಗಡ ಇರಲು ಕರೆದುಕೊಂಡು ಹೋದರು. ಅವರಿಗೆ ಎಲ್ಲತರದ ಸಹಕಾರ ಕೊಡಲಾಯಿತು. ಪ್ರಿಂಟಿನ ಪ್ರೂಫ್ ಅನ್ನು ತಾವೇ ಸ್ವತಃ ದುರಬೀನು ಹಚ್ಚಿ, ಒಂದು ಅಕ್ಷರ ಸಹಿತ ತಪ್ಪಾದರೆ ಶಬ್ದದಲ್ಲಿ ಅಪಾರ್ಥವಾದೀತು ಎಂದು, ನೋಡುತ್ತಿದ್ದರು. ಪ್ರೂಫ್ ನೋಡಲು ನಮಗೂ ಕೊಡುತ್ತಿರಲಿಲ್ಲ.

ಶುದ್ಧ ಹೃದಯದ ಅವರು ದೇಶದ ದುಃಖ, ದಾರಿದ್ರ್ಯ ನಿವಾರಣೆ ಹೇಗಾದೀತೆಂಬ ಚಿಂತನೆಯಲ್ಲೇ ಸದಾ ಕೊರಗುತ್ತಿದ್ದರು.

---

* ಈ ತಮ್ಮ ಕಟ್ಟಡವನ್ನು ಶ್ರೀಭೂಮಾ ಅವರೇ ಜಿಲ್ಲಾ ಸರ್ವೋದಯ ಮಂಡಲಕ್ಕೆ ದಾನಮಾಡಿದ್ದಾರೆ—ಸಂ||

# ಮಾರ್ಗದರ್ಶಕ

ಬಿ. ಲಕ್ಷ್ಮಿ

ನನಗೆ ಪೂಜ್ಯ ನಾಯಕ ಮಾಸ್ತರರ ಪರಿಚಯು ಒಂದು ಮೀಟಿಂಗಿನಲ್ಲಾಯಿತು. ಅವರ ಬಿಳಿಯ ಗಡ್ಡ, ಮೊಳಕಾಲವರೆಗೆ ಸುತ್ತಿಕೊಂಡ ಬಟ್ಟೆ, ಬ್ರಹ್ಮಚರ್ಯದ ಜೀವನ ಮತ್ತು ತೇಜಸ್ವೀ ಮುಖ ಇದೆಲ್ಲಾ ನನಗೆ ಬಹಳ ಆಕರ್ಷಣೆಯಾಯಿತು. ನಾನು ಅವರಿಂದ ಸ್ಥಾಪಿತವಾದಂಥ "ಗ್ರಾಮ ಸೇವಾ ಸಮಿತಿ" ಅಂಕೋಲಾ ಇದರಲ್ಲಿ ಕೆಲಸ ಮಾಡುತ್ತಿದ್ದೆ. ಅವರನ್ನು ನೋಡುತ್ತಿದ್ದಾಗಲೆಲ್ಲಾ ಒಂದು ವಿಧವಾದ ಆನಂದವೆನಿಸುತ್ತಿತ್ತು. ದೇವರ ಕೃಪೆಯಿಂದ ಮೇಲಿಂದ ಮೇಲೆ ಅವರ ಸತ್ಸಂಗ ದಲ್ಲಿರುವಂಥ ಸೌಭಾಗ್ಯ ಸಿಕ್ಕಿತ್ತು.

ಅವರ ಜೀವನ ಅತ್ಯಂತ ತತ್ತ್ವನಿಷ್ಠವಾಗಿತ್ತು. ಈ ನಿಷ್ಠೆ ಇದ್ದ ಕಾರಣ ಯಾರಾದರೂ ಸ್ವಲ್ಪ ತಪ್ಪಿದರೆ ಅವರಿಗೆ ಸಹನವಾಗುತ್ತಿರಲಿಲ್ಲ. ಸಾಮಾನ್ಯವಾಗಿ ಎಲ್ಲರ ಅಭಿಪ್ರಾಯ ಆಗಾಗ್ಗೆ ಮಾಸ್ತರರಿಗೆ ಬಹಳ ಸಿಟ್ಟು ಬರುತ್ತದೆ, ಎಂದು. ಆದರೆ ನನ್ನ ಅನುಭವವೇ ಬೇರೆ. ನಾನು ಅವರಿಂದ ತುಂಬಾ ವಾತ್ಸಲ್ಯವನ್ನು ಪಡೆದಿದ್ದೇನೆ. ಸಮಯ ಸಮಯದಲ್ಲಿ ಅವರ ಸಲಹೆ ಸಿಗುತ್ತಿತ್ತು. ಅವರಿಗೆ ಸಿಟ್ಟು ಬಂದರೆ ಸ್ವಲ್ಪ ಹೊತ್ತಿನಲ್ಲಿ ಯಾರ ಮೇಲೆ ಸಿಟ್ಟು ಬಂದಿತ್ತೋ, ಸಣ್ಣವರಿರಲಿ ದೊಡ್ಡವರಿರಲಿ, ಅವರಲ್ಲಿ ಕ್ಷಮೆಬೇಡಿಕೊಳ್ಳುತ್ತಿದ್ದರು. ಸಿಟ್ಟು ಎಷ್ಟಿತ್ತೋ ಅದಕ್ಕಿಂತ ಹೆಚ್ಚು ಕ್ಷಮಾಯಾಚನಾ ವೃತ್ತಿ ಇತ್ತು. ಅವರು ತಮ್ಮ ಜೀವನವನ್ನು "ಭಿಕ್ಷಾ ವೃತ್ತಿ"ಯಿಂದಲೇ ಕಳೆದರು. ಭಿಕ್ಷಾ ವೃತ್ತಿಯೆಂದರೆ ವಿನೋಬಾಜಿ ಸಿದ್ಧಾಂತದ ಪ್ರಕಾರ ಸಮಾಜಕ್ಕಾಗಿ ಹೆಚ್ಚು ಹೆಚ್ಚು ಸೇವೆಮಾಡಿ ಸಮಾಜದಿಂದ ತಮ್ಮ ಜೀವನ ನಿರ್ವಹಣೆಗಾಗಿ ಕಡಿಮೆ ಸ್ವೀಕರಿಸುವದು. ಭಿಕ್ಷೆಯನ್ನು ಸಹ ಎಲ್ಲರಿಂದ ತೆಗೆದುಕೊಳ್ಳುವಂತಿಲ್ಲ. ಯಾರು ಅವರ ಜೀವನವನ್ನು ತಿಳಿದುಕೊಂಡಿದ್ದಾರೋ, ಅವರ ಬಗ್ಗೆ ಆದರವಿದೆಯೋ ಅಂಥ ಜನರಿಂದ ತೆಗೆದುಕೊಳ್ಳುತ್ತಿದ್ದರು. ಇಷ್ಟಿದ್ದರೂ ಅವರು ರಾಜಕೀಯ ಪಕ್ಷದಲ್ಲಿ ಭಾಗ ತೆಗೆದುಕೊಂಡರೆ ಅವರಿಂದ ಭಿಕ್ಷೆ ತೆಗೆದುಕೊಳ್ಳುತ್ತಿರಲಿಲ್ಲ. ಅವರು ಬಹಳ ಮಿತವ್ಯಯಿ ಇದ್ದರು. ಪೂ॥ ಮಾಸ್ತರರು ಸ್ವರ್ಗಸ್ಥರಾದ ಮೇಲೆ ಪೂ॥ ವಿನೋಬಾಜಿಯವರ ತಮ್ಮ ಬಾಳಕೋಬಾಜಿಯವರಿಗೆ ನಾನು ಪತ್ರ ಬರೆದಿದ್ದೆ. ಅವರು ತಮ್ಮ ಉತ್ತರದಲ್ಲಿ ಮಾಸ್ತರರು ಗಾಂಧಿ ಸೇವಾ ಸಂಘದಲ್ಲಿ ಕೆಲಸಮಾಡುವಾಗ, ಅಲ್ಲಿದ್ದವರ ಪೈಕಿ ಎಲ್ಲರಿಗಿಂತ ಮಾಸ್ತರರ ಖರ್ಚು ಕಡಿಮೆಯಾಗಿತ್ತೆಂದು ಬರೆದಿದ್ದಾರೆ.

ಅವರು ತುಂಬಾ ಅಧ್ಯಯನಶೀಲರಿದ್ದರು. ಅಧ್ಯಯನ ಮತ್ತು ಅನುಭವದ ಆಧಾರದಿಂದ ಅನೇಕ ಪುಸ್ತಕಗಳನ್ನು ಬರೆದಿದ್ದಾರೆ. ಕೊನೆಗೆ "ಧರ್ಮ ಸಮನ್ವಯ ದರ್ಶನ" ಎಂಬ ಪುಸ್ತಕ ಬರೆದರು. ಅದರಲ್ಲಿ ವೀರಶೈವ ಧರ್ಮದ ಬಗ್ಗೆ ಬರೆದಿರಲಿಲ್ಲ. ಅದಕ್ಕಾಗಿ ಕೊನೆಗೆ "ಶಿವಶರಣರ ಸಾಧನಾ ಪಥ" ಎಂಬ ಪುಸ್ತಕ ಬರೆದರು. ಅದೇ ಅವರ ಕೊನೆಯ ಪುಸ್ತಕ. ಈ ಪುಸ್ತಕ ಪೂರಾ ಮುಗಿದ ಮೇಲೆ ತಾನು ಈ ಶರೀರ ಬಿಡಲು ಅಡ್ಡಿಯಿಲ್ಲವೆಂದು ಹೇಳುತ್ತಿದ್ದರು. ಹಾಗೆಯೇ ಆಯಿತು.

ಅವರ ಶರೀರ ತುಂಬಾ ಕ್ಷೀಣವಾಗಿತ್ತು. ಈ ಸ್ಥಿತಿಯಲ್ಲಿಯೂ ಅವರು ಈ ಪುಸ್ತಕವನ್ನು ಪೂರಾ ಮುಗಿಸಿ ೪-೧೧-೭೪ಕ್ಕೆ ನರಸಿಂಹಪುರ ಆಶ್ರಮಕ್ಕೆ ಬಂದರು. ೫-೧೧-೭೪ರ ರಾತ್ರಿ ಮನೆಯ ಒಳಗೆ ಬಿದ್ದರು. ಕಾಲಿನ ಎಲುಬು ಮುರಿಯಿತು. ಅದೇ ಅವರ ಅಂತ್ಯಕ್ಕೆ ನಿಮಿತ್ತವಾಯಿತು. ಆಸ್ಪತ್ರೆಯಲ್ಲಿದ್ದು ಉಪಚಾರ ಪಡೆಯುವದು ಸರಿಯೆನಿಸುತ್ತಿರಲಿಲ್ಲ. ಆದರೂ ಮಿತ್ರರು ಹೇಳಿದ ರೆಂದು ಆಸ್ಪತ್ರೆಯಲ್ಲಿರಲು ಒಪ್ಪಿಕೊಂಡರು. ಅಲ್ಲಿಯ ಡಾಕ್ಟರ್, ನರ್ಸ್, ಆಯಾ ಎಲ್ಲರೂ ತುಂಬಾ ಆದರದಿಂದ ಮಾಸ್ತರರ ಸೇವೆ ಮಾಡಿದರು. ಎಲ್ಲ ವ್ಯವಸ್ಥೆ ಚೆನ್ನಾಗಿಯೇ ಮಾಡಿದ್ದರು. ಆದರೂ ಅವರು ದಿನೇದಿನೇ ಅಶಕ್ತರಾಗುತ್ತಾ ಹೋದರು. ಆಹಾರ ಬಹಳ ಕಡಿಮೆ ತೆಗೆದುಕೊಳ್ಳುತ್ತಿದ್ದರು. ಯಾವಾಗಲೂ ಭಗವಂತನ ನಾಮಸ್ಮರಣೆ ಮಾಡುತ್ತಿದ್ದರು. ಮತ್ತು ವಿಷ್ಣು ಸಹಸ್ರನಾಮ, ಗೀತಾಯಿ (ವಿನೋಬಾಜಿ ಕೃತ ಭಗವದ್ಗೀತೆಯ ಮರಾಠಿ ಅನುವಾದ) ದಿನದಲ್ಲಿ ಎಷ್ಟೋ ಸಾರಿ ಪಠಣದಲ್ಲಿ ರಾಮ-ನಾರಾಯಣ-ಗೋವಿಂದ ಎಂದು ನಾಮ ಜಪಿಸುತ್ತಿದ್ದರು. ನಿಧಾನವಾಗಿ ಹಾಲು ಹಣ್ಣುಗಳನ್ನೂ ಬಿಟ್ಟರು. ಡಾಕ್ಟರರು ಇವರಿಗೆ ಯಾವ ರೋಗವೂ ಇಲ್ಲ; ಶಾರೀರಿಕ ಸ್ಥಿತಿ ಚೆನ್ನಾಗಿದೆ. ಉಪಚಾರದಿಂದ ಗುಣವಾಗಲೇ ಬೇಕು ; ಆದರೆ ದಿನೇದಿನೇ ಕ್ಷೀಣವಾಗುತ್ತಿದ್ದಾರೆ; ಇವರಿಗೆ ಬದುಕುವ ಇಚ್ಛೆಯಿಲ್ಲ, ಎಂದು ಹೇಳುತ್ತಿದ್ದರು. ಕೊನೆಗೆ ಮಾತನಾಡುವುದನ್ನು ನಿಲ್ಲಿಸಿದರು. ನೀರು ಕುಡಿಯುವದನ್ನು ನಿಲ್ಲಿಸಿದರು. ಇದನ್ನು ಸಹ ಬೇಕೆಂದೇ ನಿಲ್ಲಿಸಿರಬಹುದೆಂದು ಡಾಕ್ಟರರು ಹೇಳುತ್ತಿದ್ದರು.

ಅವರ ಅಂತಿಮ ದಿನ ಅವರ ಕಾರ್ಯಕ್ಷೇತ್ರವಾದ ಅಂಕೋಲಾದಲ್ಲಿ ಕಳೆಯು ವದು ಒಳ್ಳೆಯದೆಂದು ಅಲ್ಲಿಗೆ ಕರೆದುಕೊಂಡು ಹೋದೆವು. ಅಲ್ಲಿ ಕ್ರಿಸ್ತಮಿತ್ರ ಆಸ್ಪತ್ರೆಯಲ್ಲಿ ಅವರನ್ನು ಇಡಲಾಗಿತ್ತು. ಅಲ್ಲಿ ಆ ಆಸ್ಪತ್ರೆಯ ಡಾಕ್ಟರ್, ನರ್ಸ್ ಎಲ್ಲರೂ ಮಾಸ್ತರರ ಜೀವನವನ್ನು ಅರಿತವರಿದ್ದರು. ಅವರು ಮಾಸ್ತರರ ಅಂತಿಮ ಸೇವೆಯನ್ನು ಬಹಳ ಪ್ರೇಮದಿಂದ, ಆದರದಿಂದ, ಕಳಕಳಿಯಿಂದ ಮಾಡಿ ದರು. ಅವರು ಮಾಡಿದ ಸೇವೆಯು ಪ್ರಶಂಸನೀಯವಾದುದು. ಪ್ರತಿದಿನ

ಸುತ್ತಮುತ್ತಲಿನ ಹಳ್ಳಿಗಳಿಂದ ಜನರು ಬಂದು ಮಾಸ್ತರರ ದರ್ಶನ ತೆಗೆದುಕೊಂಡು ಹೋಗುತ್ತಿದ್ದರು. ೨೬–೧೧–೭೪ರಂದು ಪೂಜ್ಯ ಮಾಸ್ತರರು ಶರೀರವನ್ನು ಬಿಟ್ಟು ಅನಂತದಲ್ಲಿ ಲೀನವಾದರು.

ಅವರ ಹಳೆಯ ಮಿತ್ರರಾದ ಶ್ರೀ ಹರಿಪೈಯವರು ಅಂತ್ಯಕ್ರಿಯೆಯ ಹೊತ್ತಿಗೆ ಹಿಂದಿನದನ್ನು ನೆನಪು ಮಾಡುತ್ತಾ ಹೇಳಿದರು: ಒಂದು ಸಾರಿ ಪೂಜ್ಯ ಬಾಪೂಜಿಯವರ ಹತ್ತಿರ ಕರ್ನಾಟಕಕ್ಕಾಗಿ ಸಂದೇಶವನ್ನು ಕೇಳಬೇಕಾಗಿತ್ತು. ಆಗ ಬಾಪೂಜಿಯವರು ಹೇಳಿದ್ದರು: "ಕರ್ನಾಟಕಕ್ಕೆ ನನ್ನ ಸಂದೇಶವೆಂದರೆ ತಿಮ್ಮಪ್ಪ ನಾಯಕ."

ಅವರು ನಮಗೆ ಪಿತಾಮಹರಂತಿದ್ದರು, ಮಾರ್ಗದರ್ಶಕರಿದ್ದರು. ಅವರಿಗೆ ಅನಂತಾನಂತ ವಂದನೆಗಳು.

ಪೂಜ್ಯ ಮಾಸ್ತರರು ಸ್ವರ್ಗಸ್ಥರಾದ ಸುದ್ದಿ ತಿಳಿದಕೂಡಲೇ ಪೂ॥ ವಿನೋಬಾಜಿಯವರು ಸಂಜೆಯ ಪ್ರಾರ್ಥನೆಯ ಮೊದಲು ಎರಡು ಮಾತನ್ನು ಹೇಳಿ, ಎರಡು ನಿಮಿಷ ಮೌನಮಾಡಿ ಆಮೇಲೆ ಪ್ರಾರ್ಥನೆ ಪ್ರಾರಂಭ ಮಾಡಿದರು; ಆ ಎರಡು ಮಾತನ್ನು ಇಲ್ಲಿ ಕೊಡಲಾಗಿದೆ.

"ತಿಮ್ಮಪ್ಪ ನಾಯ್ಕರು ಜೀವನವಿಡೀ, ಲೋಕಮಾನ್ಯರ ಕಾಲದಿಂದ ಇಲ್ಲಿಯವರೆಗೆ, ಸತತವಾಗಿ ರಾಷ್ಟ್ರದ ಕೆಲಸ ಮಾಡಿದರು. ಅವರು ಆಜನ್ಮ ಬ್ರಹ್ಮಚಾರಿಯಾಗಿ ಇದ್ದರು. ಯಾವುದೇ ವ್ಯಕ್ತಿಗತ ಕಾಮನೆ, ವಾಸನೆ ಅವರಿಗೆ ಇಲ್ಲವಾಗಿತ್ತು. ಅವರ ಸ್ಮೃತಿಗಾಗಿ ಆರಂಭದಲ್ಲಿ ಎರಡು ನಿಮಿಷ ಮೌನಮಾಡೋಣ."

# ಮಹಾತ್ಯಾಗಿ

**ವಿಠ್ಠಲ ಅ. ಹೊದ್ಕೆ**

ಹೈಸ್ಕೂಲು ವಿದ್ಯಾರ್ಥಿಯಾಗಿದ್ದಾಗಿನಿಂದ ನನಗೆ ತಿಮ್ಮಪ್ಪ ನಾಯಕರ ಪರಿಚಯ. ಕುಮಟೆಯ ಗಿಬ್ ಹೈಸ್ಕೂಲಿನ ೭ನೆಯ ತರಗತಿಯಲ್ಲಿ (ಮ್ಯಾಟ್ರಿಕ್) ಅವರು ಓದುತ್ತಿದ್ದಾಗ ನಾನು ಅಲ್ಲಿಯ ೬ನೆಯ ತರಗತಿಗೆ ಸೇರಿದೆ. ಇರುವದು ಒಂದೇ ವಸತಿಗೃಹದಲ್ಲಿ. ಹೀಗಾಗಿ ವಿಶೇಷ ಪರಿಚಯಕ್ಕೆ ಅನುಕೂಲವಾಯಿತು. ನಾಯಕರದು ಮೂಲತಃ ಸರಳ ಜೀವನ. ಆಡಂಬರವಿಲ್ಲದ ಸಾದಾ ಉಡಿಗೆ–ತೊಡಿಗೆ. ಆಟ–ನೋಟಗಳಲ್ಲಿ ಆಸಕ್ತಿ ಇರಲಿಲ್ಲ. ತಾವಾಯಿತು ತಮ್ಮ ಅಭ್ಯಾಸವಾಯಿತು. ಇತರ ವಿಷಯಗಳಲ್ಲಿ ಅವರು ಲಕ್ಷ್ಯ ಹಾಕುತ್ತಲೇ ಇರಲಿಲ್ಲ. ಸದ್ಗುಣಿಯಾದ ಓರ್ವ ಪ್ರತಿಭಾವಂತ ವಿದ್ಯಾರ್ಥಿ ಎಂಬುದಾಗಿ ಹೆಸರು ಪಡೆದಿದ್ದರು. ಹಾಗೂ ಮುಂಬಯಿಯ ದಾಭೋಳಕರ ವಿದ್ಯಾರ್ಥಿವೇತನವೇ ಅವರ ಶಿಕ್ಷಣಕ್ಕೆ ಮೂಲಾಧಾರವಾಗಿದ್ದಿತು.

ಮುಂದೆ ಹೈಸ್ಕೂಲ ಶಿಕ್ಷಣ ಮುಗಿಸಿ ಅವರು ಪುಣೆಯಲ್ಲಿಯ ಫರ್ಗ್ಯುಸನ್ ಕಾಲೇಜ ಸೇರಿದರು. ಓದುವುದರಲ್ಲಿ ಅವರಿಗೆ ತುಂಬ ಆಸಕ್ತಿ. ಹೀಗಾಗಿ ಅಲ್ಲಿ ಪಠ್ಯಪುಸ್ತಕಗಳ ಜೊತೆಗೇ ಉತ್ತಮೋತ್ತಮ ಗ್ರಂಥಗಳನ್ನು ಓದುವ ಅವಕಾಶವು ಅವರಿಗೆ ಅನಾಯಾಸವಾಗಿ ಲಭಿಸಿತು. ಟಾಲಸ್ಟಾಯ, ಗಾಂಧಿ, ಟಿಳಕ, ಗೋಖಲೆ, ಮೋತಿಲಾಲ ನೆಹರು, ಅರವಿಂದ ಘೋಷ, ಟಾಗೂರ, ರಾಮಕೃಷ್ಣ ಪರಮಹಂಸ, ವಿವೇಕಾನಂದ, ರಾಮತೀರ್ಥ, ಭಗಿನಿ ನಿವೇದಿತಾ ಮೊದಲಾದ ಗಣ್ಯವ್ಯಕ್ತಿಗಳಿಂದ ಪ್ರಭಾವಿತರಾದ ಅವರು ಉಚ್ಚಮಟ್ಟದ ಸ್ವದೇಶಾಭಿಮಾನೀ ಪದವೀಧರರಾಗಿ ಮರಳಿದರು.

ಆ ಕಾಲಕ್ಕೆ ನಾನು ಶಿರಸಿಯ ನಗರಸಭೆಯ ಮಾಧ್ಯಮಿಕ ಶಾಲೆಯಲ್ಲಿ ಶಿಕ್ಷಕ. ನಾಯಕರವರೂ ಅದೇ ಶಾಲೆಯ ಮುಖ್ಯೋಪಾಧ್ಯಾಯರಾಗಿ ಸೇರಿದರು. ಕರ್ತವ್ಯ ನಿಷ್ಠೆ, ಸತತ ಪರಿಶ್ರಮ ಮೊದಲಾದ ಸದ್ಗುಣಗಳ ಮೂಲಕ ಸಮರ್ಥ ಶಿಕ್ಷಕರೆಂಬ ಕೀರ್ತಿ ಪಡೆದರು. ಅನ್ಯಾಯ, ಕುಚೇಷ್ಟೆ ಅವರಿಗೆ ಸರ್ವಥಾ ಸಹನವಾಗುತ್ತಿರಲಿಲ್ಲ. ಹೀಗಾಗಿ ಒಮ್ಮೆ ನಗರಸಭೆಯ ಪ್ರತಿಷ್ಠಿತ ಅಧಿಕಾರಿಯೊಬ್ಬರು ಅವರ ಪ್ರತಿಭಟನೆಗೆ ತುತ್ತಾಗಿ, ತತ್ತರಿಸಿ ಹೋದುದು ಇನ್ನೂ ನನ್ನ ಸ್ಮರಣೆಯಲ್ಲಿದೆ. ಮಹಾತ್ಮಾ ಗಾಂಧಿಯವರ ಅಸಹಕಾರ ಆಂದೋಲನದ ಕಾಲಕ್ಕೆ ಶಾಲೆಯ ಕೆಲಸಕ್ಕೆ

ರಾಜೀನಾಮೆಯಿತ್ತು, ನಮ್ಮ ಮನೆಯ ಪಕ್ಕದಲ್ಲೇ ಇರುವ ಶ್ರೀ ಗೋಪಾಲಕೃಷ್ಣ ದೇವಸ್ಥಾನದಲ್ಲಿ ನಡೆಯುತ್ತಿದ್ದ ರಾಷ್ಟ್ರೀಯ ಶಾಲೆಯ ಕೆಲಸ ಕೈಗೊಂಡರು. ಆ ಶಾಲೆಗೆ ಸೇರಿದ ನೂಲುವ ವರ್ಗವು ನಮ್ಮ ಮನೆಯ ಮಹಡಿಯ ಮೇಲಿದ್ದಿತು. ಮುಂದೆ ಕೆಲಕಾಲದ ನಂತರ ಅವರು ಮಾಡಿದ ಸಾರ್ವಜನಿಕ ಭಾಷಣದ ಮೂಲಕ ಬಂಧಿತರಾಗಿ ಕಾರಾಗೃಹ ಸೇರುವಂತಾಯಿತು.

ಅಲ್ಲಿಂದ ಬಿಡುಗಡೆಯಾಗಿ ಬಂದವರು ಸಂಪೂರ್ಣವಾಗಿ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಧುಮುಕಿದರು. ಡಾ॥ ಹರ್ಡೀಕರ, ದಿವಾಕರ, ಕರಮರಕರ, ವೆಂಕಟರಾಮಯ್ಯ ಮೊದಲಾದ ಪ್ರಮುಖ ಕಾರ್ಯಕರ್ತರೊಂದಿಗೆ ಹೆಗಲಿಗೆ ಹೆಗಲು ಹಚ್ಚಿ ದುಡಿದರು. ಖಾದಿ, ಮದ್ಯಪಾನ ಪ್ರತಿಬಂಧ, ಅಸ್ಪೃಶ್ಯತಾ ನಿವಾರಣೆ ಮೊದಲಾದ ವಿಧಾಯಕ ಕಾರ್ಯಗಳಲ್ಲಿಯೂ, ಜಂಗಲ್ ಸತ್ಯಾಗ್ರಹ, ಉಪ್ಪಿನ ಸತ್ಯಾಗ್ರಹ, ಕರನಿರಾಕರಣೆ ಮೊದಲಾದ ಹೋರಾಟದ ಕಾರ್ಯಗಳಲ್ಲಿಯೂ ಸಕ್ರಿಯ ಭಾಗವಹಿಸಿದರು. ಇದಕ್ಕಾಗಿ ಅವರು ಮೇಲಿಂದ ಮೇಲೆ ಕಾರಾಗೃಹವಾಸವನ್ನು ಅನುಭವಿಸಬೇಕಾಯಿತು.

೧೯೪೭ರಲ್ಲಿ ಸ್ವಾತಂತ್ರ್ಯ ಲಭಿಸಿದ ನಂತರ ಕೂಡ ಸಂಸಾರದ ಬಂಧನಕ್ಕಾಗಲಿ, ಯಾವುದೇ ಅಮಿಷಕ್ಕಾಗಲೀ ಒಳಗಾಗದೆ ಗಾಂಧೀಜಿಯವರ ಖಾದಿ, ಗ್ರಾಮೋದ್ಯೋಗ, ಹರಿಜನೋದ್ಧಾರ ಹಾಗೂ ವಿನೋಬಾಜಿಯವರ ಭೂದಾನ, ಸರ್ವೋದಯ ಮಂಡಲದ ವಿಧಾಯಕ ಕಾರ್ಯಗಳಲ್ಲೇ ತಮ್ಮ ಆಯುಷ್ಯವನ್ನೆಲ್ಲಾ ಕಳೆದ ನಿಷ್ಠಾವಂತ ವೀರರಿವರು.

ಶಿರಸಿಯ ಹತ್ತಿರದ ಜಡ್ಡಿಗದ್ದೆ (ಕರೆಕೋಡಿ) ಎಂಬ ಹಳ್ಳಿಯಲ್ಲಿ ತಮ್ಮ ಕೆಲ ಸಹೋದ್ಯೋಗಿಗಳೊಂದಿಗೆ ಒಕ್ಕಲತನದ ವೃತ್ತಿಯನ್ನು ಕೈಗೊಂಡು, ಕೆಲಕಾಲ ಸ್ವಾವಲಂಬನದ ಅನುಭವವನ್ನು ಪಡೆದಿದ್ದರು. ಅಂಕೋಲೆಯ ಗ್ರಾಮ ಸೇವಾ ಸಮಿತಿಯ ಖಾದಿ ಹಾಗೂ ಗ್ರಾಮೋದ್ಯೋಗ ಕಾರ್ಯಾಲಯಕ್ಕೂ ತಮ್ಮ ಸೇವೆ ಸಲ್ಲಿಸಿದ್ದಿದೆ. ಮಾದನಗೇರಿಯಲ್ಲಿ ಆಶ್ರಮವಾಸಿಯಾಗಿ, ಜನತೆಗೆ ಅನೇಕ ರೀತಿಯಲ್ಲಿ ನೆರವನ್ನು ನೀಡಿದರು. ಸರಕಾರವು ಪಾನಪ್ರತಿಬಂಧವನ್ನು ರದ್ದುಪಡಿಸಿದ್ದಕ್ಕಾಗಿ ಅವರು ಕೆಲದಿನ ಉಪವಾಸ ಕೂಡ ಕೈಕೊಂಡರು. ಶಿರಸಿಯಿಂದ ೧೦ ಮೈಲಿನ ಮೇಲಿರುವ ಮಾಳಂಜಿ ಎಂಬ ಗ್ರಾಮದಲ್ಲಿ ನನ್ನ ಬಾಬ್ತು ೨ ಖಂಡುಗ ಬೀಜವರಿ ಹೊಲವನ್ನು ರೈತರಿಗೆ ದಾನವಾಗಿ ಕೊಡುವ ಕಾರ್ಯಕ್ರಮದ ಕಾಲಕ್ಕೆ ನಾಯಕ ಮಾಸ್ತರರು ಉಪಸ್ಥಿತರಿದ್ದು, ಆ ಕುರಿತು ತಮಗಾದ ಆನಂದವನ್ನು ವ್ಯಕ್ತಪಡಿಸಿದ್ದರು. ಇವರು ರಚಿಸಿದ ಕೆಲ ಧರ್ಮಗ್ರಂಥಗಳು ಆ ವಿಷಯದಲ್ಲಿ ಅವರ ಆಳವಾದ ಅಧ್ಯಯನದ ಸಾಕ್ಷಿಯಾಗಿವೆ.

ಇನ್ನು ಹರಿಜನೋದ್ಧಾರದ ಕಾರ್ಯದಲ್ಲಿ ಇವರದು ಸಕ್ರಿಯ ಸಹಾನುಭೂತಿ; ಕಾರಣ ಶಿರಸಿಯಲ್ಲಿರುವಾಗ ಇವರು ಅಲ್ಲಿಯ ಅತಿ ಬಡ ಕುಟುಂಬಕ್ಕೆ ಸೇರಿದ ಕೃಷ್ಣಾ ರೇವಣಕರ ಎಂಬ ಹರಿಜನ ವಿದ್ಯಾರ್ಥಿಯನ್ನು ತಮ್ಮ ಜೊತೆಗೆ ಇಟ್ಟುಕೊಂಡು, ಅವನಿಗೆ ಮೂಲಕಿ ಪರೀಕ್ಷೆಯವರೆಗೆ ಕಲಿಸಿದರು. ಮುಂದೆ ವಿಜಾಪುರದ ಕಾಕಾ ಕಾರ್ಖಾನಿಸಅವರ ಸಹಕಾರದಿಂದ ಅಲ್ಲಿ ಅವನ ಹೈಸ್ಕೂಲ ಶಿಕ್ಷಣವನ್ನು ಮುಗಿಸಿದರು. ನಂತರ ಮುಂಬಯಿಯಲ್ಲಿರುವ ಸಿದ್ಧಾರ್ಥ ಕಾಲೇಜಿನಲ್ಲಿ ಅವನನ್ನು ಸೇರಿಸಿ ಪದವೀ ಧರನನ್ನಾಗಿ ಮಾಡಿದರು. ಈಗ ಅವನು ಸರಕಾರದ ಉನ್ನತ ಅಧಿಕಾರ ಸ್ಥಾನದಲ್ಲಿದ್ದು ಅದರ ಮೂಲಕ ಶಿರಸಿಯಲ್ಲಿರುವ ಅವನ ಮನೆತನವು ಆರ್ಥಿಕ ದೃಷ್ಟಿಯಿಂದಲೂ, ಸಾಮಾಜಿಕ ದೃಷ್ಟಿಯಿಂದಲೂ ಉನ್ನತ ಮಟ್ಟದಲ್ಲಿರುವುದನ್ನು ಕಾಣಬಹುದಾಗಿದೆ.

ದೇಶದಲ್ಲಿ ಬೆಳೆಯುತ್ತಿರುವ ಅನಾಚಾರ, ಭ್ರಷ್ಟಾಚಾರಗಳ ಮೂಲಕ ಇತ್ತಿತ್ತಲಾಗಿ ಅವರ ಮನವು ತುಂಬ ನೊಂದಿರುವಂತೆ ಕಾಣುತ್ತಲಿತ್ತು.

ಕೊನೆಯದಾಗಿ ಸ್ವಾಭಿಮಾನದ ಮೂಲಕ, ಸರಕಾರವು ಸ್ವಾತಂತ್ರ್ಯ ಯೋಧರಿಗೆ ಕೊಡುತ್ತಲಿರುವ ಪರಿಹಾರ ವೇತನಕ್ಕಾಗಲೀ, ತಾಮ್ರ ಪತ್ರಕ್ಕಾಗಲೀ ಕೈ ಒಡ್ಡದೆ, ಬಿದ್ದು ಕಾಲ ಮೂಳೆ ಮುರಿದು ಹಾಸಿಗೆ ಹಿಡಿಯುವವರೆಗೆ ಜನತಾ ಜನಾರ್ದನ ಸೇವೆಯಲ್ಲೇ ತಮ್ಮ ದೇಹವನ್ನು ಗಂಧದ ಕೊರಡಿನಂತೆ ಸವೆಸಿದ ಮಹಾತ್ಯಾಗಿ ಅವರಾಗಿದ್ದರು.

# ಸರಳ ಜೀವಿ

## ಗಣೇಶ ಚಂದ್ರಘಟ್ಟಿ

ದಿ॥ ಪೂಜ್ಯ ತಿಮ್ಮಪ್ಪ ಶ್ರೀನಿವಾಸ ನಾಯಕರು ಸಿದ್ಧಾಪುರದ ಗೌಡ ಸಾರಸ್ವತ ಸಮಾಜದ ಗೌರವಸ್ಥ ರಂಗೈನ ಕುಟುಂಬದಲ್ಲಿ ಜನಿಸಿದವರು. ಅವರಿಗೆ ಇಬ್ಬರು ಅಣ್ಣಂದಿರು, ಒಬ್ಬಳೇ ಅಕ್ಕ. ಅವರ್‍ಯಾರೂ ಈಗ ಇಲ್ಲ.

ಮಹಾತ್ಮಾ ಗಾಂಧಿಯವರು ದೇಶಾದ್ಯಂತ ಅಸಹಕಾರ ಆಂದೋಲನ ಪ್ರಾರಂಭಿಸಲು ಕಹಳೆಯೂದಿದ ಸಮಯವದು. ಆ ಕರೆಗೆ ಓಗೊಟ್ಟು ಮಾಸ್ತರರು ಶಿರಸಿಯಲ್ಲಿನ ತಮ್ಮ ನೌಕರಿ ತ್ಯಜಿಸಿ ರಾಷ್ಟ್ರೀಯ ಶಾಲೆಯಲ್ಲಿ ಅಧ್ಯಾಪಕರೂ ಆದರು. ಕೊನೆಗೊಮ್ಮೆ ಅವೆಲ್ಲವುಗಳಿಗೂ 'ಶರಣು' ಎಂದು ರಾಷ್ಟ್ರಸೇವಾ ದೀಕ್ಷೆಯನ್ನು ಸ್ವೀಕರಿಸಿ ತನ್ನ ಜೀವಮಾನವನ್ನೆಲ್ಲ ರಾಷ್ಟ್ರ ಸೇವೆಗಾಗಿಯೇ ಸವೆಸಿದರು.

ಪ್ರಾಯಶಃ ಅದು ಈಶ್ವರೀ ಸಂಕಲ್ಪವೇ ಇರಬೇಕು. ಮಾಸ್ತರರ ಅಣ್ಣಂದಿರು ನಿಷ್ಠಾವಂತ ದೇವಭಕ್ತರಾದರೆ, ಮಾಸ್ತರರು ದೇವಭಕ್ತ ಶಬ್ದದಲ್ಲಿಯ ಒಂದೇ ಅಕ್ಷರವನ್ನು ಬದಲಿಸಿ (ದೇವಭಕ್ತ–ದೇಶಭಕ್ತ) ಅತ್ಯಂತ ಪ್ರಾಮಾಣಿಕ ಮತ್ತು ನಿಷ್ಠಾವಂತ ದೇಶಭಕ್ತರಾದರು.

ಮಾಸ್ತರರು ಬ್ರಹ್ಮಚಾರಿಗಳು, ತೇಜಃಪುಂಜ ಮುಖಮುದ್ರೆಯವರು. ರಾಮಕೃಷ್ಣ ಪರಮಹಂಸರ ಹೋಲಿಕೆ. ಪ್ರಾರಂಭದಿಂದಲೂ ಅತೀ ಸರಳ ಸಾದಾ ಜೀವನ. ಮೊಳಕಾಲ ಮೇಲೆ ಉಟ್ಟ ಪಂಚೆ, ಅರ್ಧಕೈ ತೋಳು ಮುಚ್ಚುವ ಅಂಗಿ, ಒಂದು ಕಂಬಳಿ, ಭುಜಕ್ಕೆ ತೂಗುಬಿಟ್ಟ ಚೀಲ. ಅದರಲ್ಲಿ ಆಧ್ಯಾತ್ಮಿಕ ಮತ್ತು ಗಾಂಧೀ ವಿಚಾರ ಸಾಹಿತ್ಯ, ಲೇಖನ ಸಾಮಾಗ್ರಿ. ಇವಿಷ್ಟೇ ಮಾಸ್ತರರ ಬಾಳ ಸಂಗಾತಿಯಾಗಿದ್ದವು. ಸತತ ಅಧ್ಯಯನ, ಅಭ್ಯಾಸ, ಸಾಧನೆಗಳಲ್ಲಿ ಅವರಿಗೆ ತುಂಬಾ ಆಸಕ್ತಿ. ಯಾರ ಹತ್ತಿರವಾದರೂ ಹಿತ–ಮಿತವಾದ ಮಾತು. ಸಂಯಮ ಸಹನೆಗಳೆರಡೂ ಅವರಿಗೇ ಶರಣುಹೋಗಿದ್ದವಿರಬೇಕು. ಮನೋ ನಿರ್ಧಾರವೂ ಅಷ್ಟೇ; ಎಲ್ಲವನ್ನೂ ಸ್ವಯಂ ನಿಯಂತ್ರಣದಲ್ಲಿ ಇರಿಸಿಕೊಂಡಿದ್ದರು.

ಅಸಹಕಾರ ಆಂದೋಲನದಲ್ಲಿ ಭಾಗವಹಿಸಿದ್ದಕ್ಕಾಗಿ ಸೆರೆಮನೆ ಸೇರಿದ ಕೆಲವರಲ್ಲಿ ಉತ್ತರ ಕನ್ನಡ ಜಿಲ್ಲೆಗೆ ಮಾಸ್ತರರೇ ಮೊದಲಿಗರಲ್ಲೊಬ್ಬರು. ಗಾಂಧಿಯುವರ ವ್ಯಕ್ತಿತ್ವ, ವಿಚಾರ ಪ್ರಣಾಲಿಯಿಂದ ಪ್ರಭಾವಿತರಾದ ಮಾಸ್ತರರು ಕೆಲವು ತಿಂಗಳುಗಳನ್ನು ಗಾಂಧಿಯುವರ "ಸಾಬರಮತಿ" ಆಶ್ರಮದಲ್ಲಿ ಗಾಂಧಿಯುವರ ಸಾಮೀಪ್ಯದಲ್ಲಿಯೇ ಕಳೆದರು. ಅಲ್ಲಿರುವಾಗ ಅವರು ಗಾಂಧೀ ತತ್ತ್ವ-ಜ್ಞಾನವನ್ನು ಅಭ್ಯಸಿಸಿದ್ದಲ್ಲದೇ ಅನುಷ್ಠಾನದಲ್ಲಿಯೂ ತಂದವರಾದರು. ಮಾಸ್ತರರಿಗೆ ಗಾಂಧೀ ತತ್ತ್ವಜ್ಞಾನದ ಸಾಕ್ಷಾತ್ಕಾರವೇ ಆಗಿತ್ತೆಂದು ನಿಸ್ಸಂಕೋಚ ವಾಗಿ ಹೇಳಬಹುದು. ನಿಜಕ್ಕೂ ಹೇಳುವದಾದರೆ ಗಾಂಧಿಯುವರ ಆತ್ಮೀಯ ಅನುಯಾಯಿಗಳ ಪಟ್ಟಿಯಲ್ಲಿ ಮಾಸ್ತರರ ಹೆಸರೂ ಸೇರ್ಪಡೆಯಾಗಿತ್ತು. ಮುಂದೆ ಗಾಂಧಿಯುವರ ಆದೇಶದಂತೆ ಮಾಸ್ತರರು ಕರ್ನಾಟಕಕ್ಕೆ ಬಂದು ವಿಧಾಯಕ ಕಾರ್ಯ ಕ್ರಮಗಳನ್ನು ಸಂಘಟಿಸಲು ಪ್ರಾರಂಭಿಸಿದರು. ಪ್ರಾಮುಖ್ಯವಾಗಿ ರಾಷ್ಟ್ರೀಯ ಶಿಕ್ಷಣ, ನೂಲುವದು, ನೇಯ್ಗೆ, ಖಾದೀಧಾರಣ, ಸ್ವದೇಶಿ ವಸ್ತುಗಳ ಬಳಕೆಯ ಪ್ರಸಾರ, ಅಲ್ಲದೇ ಹರಿಜನರ ಉದ್ಧಾರ, ಮದ್ಯಪಾನದ ಉಚ್ಚಾಟನೆ, ಪ್ರಾಣಿಬಲಿಯ ನಿಷೇಧ ಮೊದಲಾದವುಗಳು ಅವರು ಆಯ್ದುಕೊಂಡ ಕಾರ್ಯಕ್ರಮಗಳಾಗಿದ್ದವು.

ಅಖಿಲ ಭಾರತ ಮಟ್ಟದಲ್ಲಿ ಮಹಾತ್ಮಾಗಾಂಧಿಯುವರು, ಕರ್ನಾಟಕದಲ್ಲಿ ದಿ॥ ದೇಶಪಾಂಡೆ ಗಂಗಾಧರರಾಯರು ಮೊದಲಾದ ಧುರೀಣರ ಹತ್ತಿರ ಮಾಸ್ತರರು ನೇರವಾಗಿಯೇ ಸಂಪರ್ಕವನ್ನು ಇಟ್ಟುಕೊಂಡಿದ್ದರು. ಗಾಂಧೀ ಸೇವಾ ಸಂಘದಲ್ಲಿ ಕರ್ನಾಟಕವನ್ನೂ ಪ್ರತಿನಿಧಿಸುವವರಲ್ಲಿ ಮಾಸ್ತರರೂ ಒಬ್ಬರಾಗಿದ್ದರು. ಮಹಾತ್ಮರು ದೇಶಕ್ಕೆ ಕರೆಕೊಟ್ಟಾಗಲೆಲ್ಲ, ಸತ್ಯಾಗ್ರಹ ಸಂಘಟನೆ, ಜನತೆಯಲ್ಲಿ ದೇಶಭಕ್ತಿಯ ಪ್ರಜ್ಞೆ ಜಾಗೃತಿಗಳಿಗಾಗಿ ಮಾಸ್ತರರು ಕರ್ನಾಟಕದ ಉದ್ದ-ಅಗಲಕ್ಕೂ ವಿಶೇಷವಾಗಿ ಉತ್ತರ ಕನ್ನಡ ಜಿಲ್ಲೆಯಲ್ಲೂ ಪ್ರವಾಸ ಕೈಕೊಳ್ಳುತ್ತಿದ್ದರು. ಅದೇ ಸಮಯ ಕರ್ನಾಟಕದಲ್ಲಿ ಅಲ್ಲಲ್ಲಿ ನಡೆದ ಉಪ್ಪಿನ ಸತ್ಯಾಗ್ರಹ, ಜಂಗಲ್ ಸತ್ಯಾಗ್ರಹ, ಪಟೇಲರ ರಾಜೀನಾಮೆ, ಹುಲ್ಲುಬನ್ನಿ ಮತ್ತು ಕರನಿರಾಕರಣೆ ಚಳವಳಿಗಳ ಯಶಸ್ಸಿಗೆ ಮಾಸ್ತರರ ಸಮರ್ಥ ಮಾರ್ಗದರ್ಶನಗಳೂ ಕಾರಣವಾದವು. ಸತ್ಯಾಗ್ರಹದ ಧ್ಯೇಯ-ಧೋರಣೆಗಳ ನಿರೂಪಣೆ, ಸತ್ಯಾಗ್ರಹಿಯಲ್ಲಿ ಇರಬೇಕಾದ ನೈತಿಕ ಅಂತಸ್ತು, ನಿಷ್ಠೆ, ಶಿಸ್ತು, ಸಂಘಟನೆಗಳ ಕುರಿತು ಅವರು ಕಾಲಕಾಲಕ್ಕೆ ಚರ್ಚಿಸಿ ಸಲಹೆ-ಸೂಚನೆಗಳನ್ನು ಕೊಡುತ್ತಿದ್ದರು. "ಸತ್ಯಾಗ್ರಹ ಕರಪತ್ರ"ಗಳೇ ಅವರ ಮತ್ತು ಕಾರ್ಯಕರ್ತರು, ಜನತೆಯ ಮಧ್ಯದ ಸಂಪರ್ಕ ಸಾಧನವಾಗಿದ್ದವು. ಸಂಘಟನೆ, ವಿಧಾಯಕ, ಕಾರ್ಯಕ್ರಮ, ಸತ್ಯಾಗ್ರಹ ಯಾವುದೇ ಇರಲಿ ಅವೆಲ್ಲವುಗಳಲ್ಲಿ ಮಾಸ್ತರರ ಪಾತ್ರ ಹಿರಿಯದಾಗಿರುತ್ತಿತ್ತು. ಕೆಲಕಾಲ ಅವರು ಉತ್ತರ ಕನ್ನಡ

ಜಿಲ್ಲಾ ಕೊಂಗ್ರೆಸ್ ಸಮಿತಿಯ ಅಧ್ಯಕ್ಷರೂ ಆಗಿದ್ದರು. ಆಗಿನ ಅವರ ಸಂಘಟನಾ ಸಾಮರ್ಥ್ಯ, ಅವಂದೇ ದಾರಿಯನ್ನು ಬಳಸಿ ಬೆಳೆಸಿಕೊಂಡು ತಂದ ಸ್ಥಾನ ಗೌರವ ವನ್ನು ಯಾರೂ ಮೆಚ್ಚುವರು.

ಸತ್ಯಾಗ್ರಹ ಸಮರದಲ್ಲಿ ಅವರು ಪ್ರತಿಬಾರಿಯೂ ಸೆರೆಮನೆ ಸೇರಬೇಕಾಯಿತು. ಕರ್ನಾಟಕದ ವಿದ್ಯಮಾನಗಳ ಕುರಿತು ಗಾಂಧೀಜಿ ಮತ್ತು ಮಾಸ್ತರರ ಮಧ್ಯೆ ಸತತ ವಾಗಿ ಸಂಪರ್ಕವಿತ್ತು.

ಕುಮಟಾ ನಗರ ಸಭೆಯ ಸುವರ್ಣ ಮಹೋತ್ಸವದ ಸನ್ನಿವೇಶವದು. ಆಗಿನ ರಾಷ್ಟ್ರಪತಿಗಳಾದ ಡಾ॥ ರಾಜೇಂದ್ರ ಪ್ರಸಾದರನ್ನು ಕುಮಟೆಗೆ ಕರೆಯಿಸಿಕೊಂಡಿದ್ದರು. ಆ ದಿವಸ ಸಮಾರಂಭ ವೀಕ್ಷಣೆಗಾಗಿ ಸೇರಿದ ಜನರ ಮಧ್ಯೆ ಮಾಸ್ತರರೂ ಕುಳಿತಿದ್ದ ರಂತೆ. ವೇದಿಕೆಯ ಮೇಲಿನಿಂದಲೇ ಮಾಸ್ತರರನ್ನು ಗುರುತಿಸಿದ ರಾಷ್ಟ್ರಪತಿಗಳು ಅವರನ್ನು ತಮ್ಮ ಬಳಿಗೆ ಕರೆದುಕೊಂಡು ಬರಲು ಸಮಿಪದಲ್ಲಿದ್ದ ಸದ್ಗೃಹಸ್ಥ ರೊಬ್ಬರಿಗೆ ಸೂಚಿಸಿದರಂತೆ. ಆಗ ಮಾಸ್ತರರು ವೇದಿಕೆಯ ಕಡೆ ಬರುತ್ತಿದ್ದಂತೆಯೇ ರಾಷ್ಟ್ರಪತಿಗಳು ಎದ್ದು ಮಾಸ್ತರರನ್ನು ಆಲಿಂಗಿಸಿದರಂತೆ.

ಮಾಸ್ತರರ ಅವಿರತ ಪ್ರಯತ್ನದ ಫಲವಾಗಿಯೇ ಅಂಕೋಲೆಯಲ್ಲಿ "ಉತ್ತರ ಕನ್ನಡ ಜಿಲ್ಲಾ ಗ್ರಾಮಸೇವಾ ಸಮಿತಿ"ಯ ಸ್ಥಾಪನೆಯಾಯಿತು. ಹಳ್ಳಿಗಳಲ್ಲಿ ನಿರುದ್ಯೋಗೀ ಜನರಿಗೆ ಉದ್ಯೋಗ ನೀಡುವಲ್ಲಿ ಸಮಿತಿಯು ಗಣನೀಯ ಸೇವೆ ಸಲ್ಲಿಸಿದೆ.

ಇಳಿ ವಯಸ್ಸಾದ್ದರಿಂದ ಮಾಸ್ತರರು ಇತ್ತೀಚಿನ ವರ್ಷಗಳಲ್ಲಿ ಏಕಾಂತವಾಸ ವನ್ನೇ ಮೆಚ್ಚಿಕೊಂಡಿದ್ದರು. ಕೆಲವು ವರ್ಷಗಳನ್ನು ಅವರು ಅಂಕೋಲೆಯ ಹತ್ತಿರದ ಹಿರೇಗುತ್ತಿಯಲ್ಲಿ ಕಳೆದರು. ಆ ವಯಸ್ಸಿನಲ್ಲಿಯೂ ಅವರು ಶ್ರಮ ಜೀವನವನ್ನು ನಡೆಸುತ್ತಿದ್ದರು. ಆಗಿನ ಮೈಸೂರು ಸರಕಾರವು ಮದ್ಯಪಾನ ಧೋರಣೆಯನ್ನು ಸಡಿಲಿಸಿದ್ದರ ಕುರಿತು ತನ್ನ ನೈತಿಕ ಮತ್ತು ಸಾತ್ವಿಕ ಪ್ರತಿಭಟನೆ ಯನ್ನು ವ್ಯಕ್ತಪಡಿಸುವ ಸಲುವಾಗಿ ಮಾಸ್ತರರು ಆ ಸಮಯದಲ್ಲಿ ದೀರ್ಘ ಉಪವಾಸವ್ರತ ಕೈಕೊಂಡಿದ್ದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದಾಗಿದೆ. ಏಕಾಂತವಾಸ ದಲ್ಲಿದ್ದಾಗ ಮಾಸ್ತರರು ಹೆಚ್ಚಾಗಿ ಆಧ್ಯಾತ್ಮಿಕ ವಿಚಾರ ಮಂಥನ, ಮನನಗಳಲ್ಲಿಯೇ ಹೆಚ್ಚಿನ ಕಾಲ ಕಳೆಯುತ್ತಿದ್ದರು. ಪ್ರತಿದಿನದ ಕೆಲ ಸಮಯವನ್ನಾದರೂ ಮಾಸ್ತರರು ಧ್ಯಾನಸ್ಥರಾಗಿ ಕಳೆಯುತ್ತಿದ್ದರು, ಗಾಂಧೀ ತತ್ತ್ವಜ್ಞಾನ, ಆಧ್ಯಾತ್ಮಿಕ ವಿಚಾರಗಳ ಕುರಿತು ಅವರ ಲೇಖನಿಯಿಂದ ಕೆಲವು ಹೊತ್ತಿಗೆಗಳು ಹೊರಬಂದಿವೆ.

ಮಾಸ್ತರರು ಮತ್ತು ನನ್ನ ನಡುವಿನ ಸ್ನೇಹ ಸಂಬಂಧ ಸುಮಾರು ಇಪ್ಪತ್ನಾಲ್ಕು ವರ್ಷಗಳಿಂದಲೂ ಬೆಳೆದು ಬಂದಿತ್ತು. ಕಳೆದ ಐದಾರು ವರ್ಷಗಳಿಂದ ಅದು ಇನ್ನೂ ಹೆಚ್ಚು ಆತ್ಮೀಯವಾಗಿ ಬೆಳೆದು ಬಂದಿತ್ತು. ಅವರ ಹತ್ತಿರ ನನ್ನ ಪತ್ರವ್ಯವಹಾರವೂ ಹೆಚ್ಚಾಗಿ ನಡೆಯುತ್ತಲಿತ್ತು. ಇತ್ತೀಚಿನ ಅವರ ಪುಸ್ತಕದ ಮುದ್ರಣಕ್ಕಾಗಿ ಅವರು ಸ್ವತಃ ಬಾಗಲಕೋಟೆಗೆ ಹೋಗುವ ಮುಂಚೆಯೂ ಆನಂತರವೂ ನನಗೆ ಬರೆದು ತಿಳಿಸಿದ್ದರು. ನರಸಿಂಹಪುರದ ಆಶ್ರಮದಲ್ಲಿ ಕಾಲು ಜಾರಿ ಬಿದ್ದು ಮೂಳೆಮುರಿದ ಪರಿಣಾಮವಾಗಿ ಬೆಳಂಗಾವಿಯಲ್ಲಿ ಸಿವ್ಹಿಲ್ ಹೊಸ್ಪಿಟಲ್‌ನಲ್ಲಿ ಸೇರಿಸಲ್ಪಟ್ಟ ನಂತರವೇ ಅವರ ನನ್ನ ಲೇಖನ ಸಂಪರ್ಕ ತಪ್ಪಿದ್ದು. ಬೆಳಗಾಂವಿಯಿಂದ ಅಂಕೋಲೆಗೆ ಸ್ಥಳಾಂತರಿಸಿದ ಮೇಲೆ ಅವರನ್ನು ನೋಡಿಬರಲು ನಾನು ಹೋಗಿದ್ದೆನು. ಅಂಕೋಲೆಯ "ಕ್ರಿಸ್ತಮಿತ್ರ ಆಸ್ಪತ್ರೆ" ಯಲ್ಲಿ ಅವರನ್ನು ಉಪಚರಿಸುತ್ತಿದ್ದರು. ನಾನು ನೋಡಿದಾಗ ಮಾಸ್ತರರು ಪ್ರಜ್ಞಾಹೀನ ಸ್ಥಿತಿಯಲ್ಲಿದ್ದರೂ ಪ್ರಸನ್ನಚಿತ್ತರಾಗಿ ಗಾಢನಿದ್ರೆಯಲ್ಲಿರುವಂತೆ ಕಂಡೆನು. ಆಗ ಸಾವಿನ ಸುಳಿವು ಕೂಡ ಅವರ ಹತ್ತಿರವಿರಲಿಲ್ಲ. ಒಮ್ಮೆಯಾದರೂ ಮಾತನಾಡಿಸೋಣವೆಂದು ಅವರ ಕಿವಿಯ ಹತ್ತಿರದಲ್ಲಿಯೇ "ಮಾಸ್ತರ" ಎಂದು ಒಂದೆರಡು ಬಾರಿ ಕೂಗಿ ಎಚ್ಚರಿಸಲು ಪ್ರಯತ್ನ ಪಟ್ಟೆನು. ಒಮ್ಮೆ ಮಾತ್ರ "ಆಂ" ಎಂದು ಮುಚ್ಚಿದ ಕಣ್ಣುಗಳನ್ನು ತೆರೆಯಲು ಪ್ರಯತ್ನಿಸಿದಂತೆ ನನ್ನ ಮನಸ್ಸಿಗೆ ಭಾಸವಾಯಿತು. ಆದರೆ ಅವರಿಗೆ ಮಾತ್ರ ಹಾಗೆ ಮಾಡುವದಾಗಲಿಲ್ಲ. ಮರುದಿನವೇ ನಾನು ಅಂಕೋಲೆಯನ್ನು ಬಿಡುವ ಪೂರ್ವದಲ್ಲಿ ಪುನಃ ಒಮ್ಮೆ ಅವರನ್ನು ಕಣ್ಣುತುಂಬಾ ನೋಡಿ ಅವರ ಪಾದಮುಟ್ಟಿ ನಮಸ್ಕರಿಸಿ ಬಂದೆನು. ಅದೇ ನನಗೆ ಮಾಸ್ತರರ ಅಂತ್ಯದರ್ಶನವಾಯಿತು.

ಈಗ ನಾಯಕ ಮಾಸ್ತರರು ಇಲ್ಲ. ಅವರಿಲ್ಲದೇ ಬರಿದಾದ ಜಾಗ ಇನ್ನೆಂದಿಗೂ ತುಂಬಿತರಲು ಸಾಧ್ಯವಿಲ್ಲ.

# ಸಾತ್ವಿಕ

## ಸ್ವಾಮಿರಾವ ರಾಮಚಂದ್ರರಾವ ಕುಲಕರಣಿ

ಶ್ರೀ ನಾಯಕ ಮಾಸ್ತರರನ್ನು ನಾನು ಮೊಟ್ಟಮೊದಲು ಕಂಡುದು ಶಿರ್ಸಿಯಲ್ಲಿ ೧೯೩೦-೩೨ರ ಸತ್ಯಾಗ್ರಹ ಆಂದೋಲನದ ಸಂದರ್ಭದಲ್ಲಿ. ಆಗ ಅವರು ಶಿರ್ಸಿ ತಾಲ್ಲೂಕು ಮಟ್ಟಿಗೆ ಆಂದೋಲನದ ಎಲ್ಲ ಹೊಣೆಯನ್ನು ಹೊತ್ತಿದ್ದರು. ಎಂತಲೆ ಅಲ್ಲಿಯ ಚಳವಳಿಯ ಪ್ರಚೋದನೆ, ಪ್ರಗತಿಗಳಿಗಾಗಿ ಹೊರಜಿಲ್ಲೆಯ ಸ್ವಯಂ ಸೇವಕರನ್ನು ಕರೆಯಿಸಿಕೊಳ್ಳುವ ಕೆಲಸವೂ ಅವರದಾಗಿತ್ತು. ಅವರು ವಿಜಾಪುರದ ಹಿರಿಯ ಧುರೀಣರಾದ ಶ್ರೀ ಕಾಕಾ ಕಾರಖಾನೀಸರಿಗೆ ಬರದ ಪತ್ರದಂತೆ ಅಲ್ಲಿಯ ಸೇವಾದಳ ಶಿಬಿರದ ಸೈನಿಕನಾದ ನಾನು ಮತ್ತು ಹುಬ್ಬಳ್ಳಿಯಿಂದ ಇನ್ನೊಬ್ಬರು ಶಿರ್ಸಿಗೇ ಆಗಮಿಸಿದೆವು.

ಶ್ರೀ ನಾಯಕ ಮಾಸ್ತರರ ಪ್ರತ್ಯಕ್ಷ ಪರಿಚಯವಿರದ ನಮಗೆ ಅವರನ್ನು ಕೇಳಿಕೊಂಡು ಹೋಗಲೇಬೇಕಿತ್ತು. ಆದರೆ ಅಷ್ಟೊಂದು ಬಹಿರಂಗವಾಗಿ ಆಗ ಅವರ ಬಗ್ಗೆ ಕಂಡಕಂಡವರನ್ನು ಎಂದಿನ ದಿನಗಳಂತೆ ಕೇಳುವಂತೆಯೂ ಇರಲಿಲ್ಲ. ಏಕೆಂದರೆ ಸತ್ಯಾಗ್ರಹದ ಕಾವು ಆಳರಸರಿಗೆ ಸಾಕಷ್ಟು ತಗಲುತ್ತಿದ್ದ ಕಾಲವದು. ಶಿರ್ಸಿ, ಸಿದ್ದಾಪುರಗಳಂತೂ ಗುಜರಾತದಲ್ಲಿಯ ಬಾರ್ಡೋಲಿ ತಾಲೂಕಿನಂತೆ ಕರನಿರಾಕರಣೆಯ ಸಿದ್ಧತೆಯನ್ನು ಮಾಡಿಕೊಳ್ಳುತ್ತಿರುವಂತಹವು. ಅಲ್ಲದೆ ನಾವು ವಿಚಾರಿಸಬೇಕಾದ ವ್ಯಕ್ತಿ ಈ ಎಲ್ಲ ಚಳವಳಿಯ ಕೇಂದ್ರಶಕ್ತಿ! ಖಾದಿ ವೇಷಧಾರಿಗಳಾದ ನಮ್ಮ ಮೇಲೆಯೆ ಅಲ್ಲಲ್ಲಿ ಪೋಲಿಸರು ಸಂಶಯ ಪಟ್ಟು ಟಿಪ್ಪಣಿ ಮಾಡಿಕೊಳ್ಳುತ್ತಿದ್ದರು. ಹೀಗಿರುವಾಗ ಬಹಿರಂಗವಾಗಿ ಸ್ಥಳೀಯ ಸಂಶಯಾಸ್ಪದ ವ್ಯಕ್ತಿಯ ಬಗ್ಗೆ ಕೇಳಿದರಂತೂ ನಾವು ನಮ್ಮ ಶ್ರೀ 'ನಾಯಕ' ರನ್ನು ಕಾಣುವ ಬದಲು ಜೇಲನ್ನೇ ಕಾಣಬೇಕೆತ್ತು.

ಅಷ್ಟರಲ್ಲಿ ನಾವು ಇಳಿದ ಬಸ್ಸಿನಿಂದ ತುಸುದೂರವಿರುವ ಮನೆಯ ಮುಂದಿನ ಚಪ್ಪರದ ನೆರಳಲ್ಲಿ ಬಿಸಿಲಿನ ಬೇಗೆಯನ್ನು ನಿವಾರಿಸಿಕೊಳ್ಳಲು ನಿಂತಿರುವ ಬೊಕ್ಕ ನೆತ್ತಿಯ ನಡುವಯದ ವ್ಯಕ್ತಿಯೊಬ್ಬರು ನಮ್ಮನ್ನು ಕೈಸನ್ನೆಯಿಂದ ಕರೆದರು. ಅವರ ಉಡುಗೆ ತೀರ ಸಾದಾ-ಉಡಲು ಖಾದಿ ಪಂಚೆ, ಹೊದೆಯಲು ಖಾದಿ ದಟ್ಟಿ, ಬರಿಗಾಲು, ಕಿರುಗಡ್ಡ.

ಬಗಲ ಚೀಲಗಳನ್ನು ಹೆಗಲಿಗೆ ಹಾಕಿಕೊಂಡ ನಾವು ಅವರನ್ನು ಸಮೀಪಿಸು ತ್ತಲೆ ಅವರು ಕೇಳಿದರು, "ನೀವು ಹುಬ್ಬಳ್ಳಿಯಿಂದ ಬಂದಿರಾ?" ಎಂದು. ನಮ್ಮ ಮೌನ ಮುಖಗಳಲ್ಲಿಯೂ ಮುಗುಳ್ನಗೆ ಬೀರುವಲ್ಲಿಯೇ ಅವರಿಗೆ ಸೂಚಿತವಾಗಿರ ಬೇಕು ನಮ್ಮ ಸಮ್ಮತಿ. ತಾವೂ ಮುಗುಳ್ನಗೆಯಿಂದ ಸೂಚಿಸಿ, "ನನ್ನ ಹಿಂದೆಯೆ ಬನ್ನಿರಿ; ಆದರೆ ದೂರದಿಂದಲೆ," ಎಂದವರೇ ಮುಖತಿರುವಿ ಸಿಧಾನವಾಗಿ ನಡೆದೇ ಬಿಟ್ಟರು. ನಾವೂ ಅವರ ಹಿಂದೆ ದೂರದೂರದಲ್ಲಿಯೇ ಹಿಂಬಾಲಿಸಿದೆವು. ಅವರು ತಿರುವಿನ ದಾರಿಗಳಲ್ಲಿ ತುಸುನಿಂತು ನಮ್ಮನ್ನೊಮ್ಮೆ ನೋಡಿ ಹಿಂದೆ ಬಂದೆವೆಂದು ಖಾತರಿ ಮಾಡಿಕೊಂಡು ಮುಂದೆ ಸಾಗುವರು. ಕೊನೆಗೆ ಒಂದು ಮನೆಯಲ್ಲಿ ಅವರು ಸೇರಿದರು. ನಾವೂ ಸೇರಿದೆವೆಂಬುದನ್ನು ಖಚಿತಪಡಿಸಿಕೊಂಡು ಅಲ್ಲಿಯ ಕಿರಿದಾದ ಅಟ್ಟದ ಪಾವಟಿಗೆಗಳನ್ನು ಬದಿಗೆ ಇಳಿಬಿಡಲಾದ ಕಾತಿ ಹಗ್ಗದ ಸಹಾಯಪಡೆದು ಹತ್ತಿ ನಡೆದರು. ನಾವೂ ಹಾಗೆ ಹತ್ತತೊಡಗಲು 'ತಲೆ ಜೋಕೆ' ಎಂದು ಎಚ್ಚರಿಸಿ, ನಡೆವರು. ನಾವೂ ಅವರನ್ನು ಹಿಂಬಾಲಿಸಿ ಮೇಲೆ ಹೋಗುವಷ್ಟರಲ್ಲಿ ಅವರು ಸಾದಾ ಹುಲ್ಲಿನ ಚಾಪೆಯ ಮೇಲೆ ಕುಳಿತು ಹೊತ್ತದಟ್ಟಿಯಿಂದ ಗಾಳಿಹಾಕಿಕೊಳ್ಳುತ್ತ ಬಿಸಿಲಿನ ಬೇಗೆಯನ್ನು ಕಳೆದುಕೊಳ್ಳುತ್ತಿದ್ದರು. ಬೇರೊಂದು ಚಾಪೆಯ ಮೇಲೆ ನಮಗೆ ಕೂರಲು ಆತ್ಮೀಯತೆಯಿಂದ ಸೂಚಿಸಿ, "ಪ್ರವಾಸ ಹೇಗಿತ್ತು ?" ಎಂದು ಕೇಳಿದರು.

ಕಾಡು ಮೇಡಿನ ಮಧ್ಯದಲ್ಲಿ ಬುಸುಗುಟ್ಟಿ ಧೂಳಿದರುಶನಗೊಳಿಸಿದ ಆ ಬಸ್ ಪ್ರವಾಸವೇನೊ ಪ್ರಯಾಸವೇ ಆಗಿತ್ತಾದರೂ, "ಒಳ್ಳೇ ಆನಂದದಾಯಕವಾಗಿತ್ತು" ಎಂದು ಹೇಳದೆ ವಿಧಿ ಇರಲಿಲ್ಲ ಆದರೂ ನಮ್ಮ ಅಂತರ್ಯದ ಅರಿವು ಆಗಿ, "ನೀವು ದೀರ್ಘ ಪ್ರವಾಸದಿಂದ ದಣಿದಿದ್ದೀರಿ. ಊಟದ ಸಮಯವಾಗಿದೆ. ಮೊದಲು ಊಟ ಮಾಡಿ. ಈಗ ನೀವು ಇರುವುದೇ ಒಂದು ಖಾನಾವಳಿ. ಕೆಳಗೆ ಸ್ನಾನದ ವ್ಯವಸ್ಥೆಯೂ ಇದೆ" ಎಂದರು.

ಅವರ ಸೂಚನೆಯಂತೆ ನಾವು ಊಟ ಮುಗಿಸಿ ಮತ್ತೆ ಮೇಲಕ್ಕೆ ಬಂದಾಗ ಅದೇ ವ್ಯಕ್ತಿ, "ನೀವು ದಣಿದಿದ್ದೀರಿ, ತುಸು ವಿಶ್ರಮಿಸಿರಿ" ಎಂದೂ ಸೂಚಿಸಿದರು. ಆದರೆ ನಮಗೆ ಮಧ್ಯಾಹ್ನದ ನಿದ್ರೆಯ ಅವಶ್ಯಕತೆ ಇಲ್ಲವೆಂಬುದನ್ನು ಖಚಿತಪಡಿಸಿ ಕೊಂಡು ಮಾತಿಗೆ ಮೊದಲು ಮಾಡಿದರು.

"ನಾಯಕ ಮಾಸ್ತರರು ಯಾರು ?" ಎಂಬ ನಮ್ಮ ಪ್ರಶ್ನೆಯನ್ನು ನಮ್ಮ ಮುಖ ಮುದ್ರೆಯಿಂದಲೇ ಊಹಿಸಿಯೋ ಏನೊ ತಾವೇ ಹೇಳಿದರು, "ನಾನೇ ನಾಯಕ ಮಾಸ್ತರ." ಇದನ್ನು ತಿಳಿದು ಹುಡುಕಿಕೊಂಡು ಹೊರಟ ಬಳ್ಳಿಯೇ ತೊಡಕಿಕೊಂಡಷ್ಟು ಸಂತೋಷವಾಯಿತು ನಮಗೆ. ಇದುವರೆಗೆ ಅವರು ನಮ್ಮಲ್ಲಿ

ತೋರಿದ ಪಿತೃವಾತ್ಸಲ್ಯದಿಂದ ಸಾಕಷ್ಟು ಪ್ರಭಾವಿತರಾದ ನಮಗೆ ನಮ್ಮ ಶಿಬಿರ ನಾಯಕರಾದ ಶ್ರೀ ಕಾಕಾ ಕಾರಖಾನೀಸರ ಬಗ್ಗೆ ಅವರು ತೋರಿದ ಆದರಭಾವದಿಂದ ಇನ್ನಷ್ಟು ಅಭಿಮಾನ ಉಂಟಾಯಿತು. ಆಮೇಲೆ ಅಲ್ಲಿ ಅವರು ನಮ್ಮನ್ನು ಕರೆಸಿಕೊಂಡು ಕಾರಣವನ್ನು ಸ್ವಲ್ಪದರಲ್ಲಿ ವಿವರಿಸಿದರಲ್ಲದೆ ಆ ಕಾರ್ಯಕ್ಕಾಗಿ ನಮಗಿರುವ ಸಾಮರ್ಥ್ಯವನ್ನು ಪರೀಕ್ಷಿಸಿದರು.

ಅವರು ಹಾಕಿದ ನೇರ ಪ್ರಶ್ನೆಗಳನ್ನು ನಾವಿಬ್ಬರೂ ನಮ್ಮ ಯೋಗ್ಯತೆಗೆ ತಕ್ಕಂತೆ ಉತ್ತರಿಸಿದೆವು. ಆ ಮೇಲೆ ಅವರು ಗಂಭೀರ ಭಾವದಿಂದ ನಮ್ಮಲ್ಲಿ ಒಬ್ಬರನ್ನು ಮಾತ್ರ ಆರಿಸಿದರು. ಅವನು ನಾನೇ ಎಂಬುದು ನನ್ನ ಸುದೈವ. ಉಳಿದವನು ಅಂದೇ ಸಂಜೆ ಇಲ್ಲವೇ ಮರುದಿನ ಹಿಂತಿರುಗಿ ಹೋಗಬೇಕೆಂಬ ಆಜ್ಞೆ ಆಯಿತಲ್ಲದೆ ನನಗೂ ಸಹ–ಸ್ವಯಂಸೇವಕ ಕಾರ್ಯಕರ್ತರೊಂದಿಗೆ ಅಂದಿನ ಸಂಜೆಗೆ ಒಳಹಳ್ಳಿಯ ಶಿಬಿರಕ್ಕೆ ರವಾನಿಸಲಾಯಿತು.

ಆಮೇಲೆ ಸುಮಾರು ಎರಡು ವರ್ಷಗಳ ಅವಧಿಯವರೆಗೆ ನಾನು ಶ್ರೀ ನಾಯಕ ಮಾಸ್ತರರ ನೇತೃತ್ವದಲ್ಲಿ ಶಿರ್ಸಿಯ ಹಳ್ಳಿಗಳಲ್ಲಿ ಜನಜಾಗೃತಿಯ ಕಾರ್ಯ ಕೈಗೊಂಡಿದ್ದು ಆಗ ಅವರನ್ನು ಆಗಾಗ ಕಂಡು ಸಲಹೆ ಸೂಚನೆಗಳನ್ನು ಪಡೆಯುವ ಪಲವಾರು ಸಂದರ್ಭಗಳು ಒದಗಿ ಬಂದವು. ನಾವೆಲ್ಲ ಕಾರ್ಯಕರ್ತರು ಒಂದೆಡೆಗೆ ಕಲೆತಾಗಲೆಲ್ಲ ಅವರ ಅಪಾರ ವಾತ್ಸಲ್ಯ ನಮಗಾಗಿ ಕಾದಿರುತ್ತಿತ್ತು. ಶೀರ ಮೃದುಭಾಷಿಗಳಾದ ಅವರು ಮಿತಭಾಷಿಗಳೂ ಆಗಿದ್ದರು.

ಯಾವ ಕಾರ್ಯವನ್ನೂ ನಿಖರವಾಗಿ ನಿರ್ದೇಶಿಸುವರು. ಅದು ಪೂರ್ತಿಯಾಗಿ ಕಾರ್ಯಗತವಾದಮೇಲೆಯೇ ನಾವು ಅದರ ವರದಿ ಒಪ್ಪಿಸಬೇಕು. ಅಲ್ಲಿಯ ವರೆಗೆ ಆ ಕಾರ್ಯಸಾಧನೆಯಲ್ಲಿ ನಮಗೆ ಸಂಪೂರ್ಣ ಸ್ವಾತಂತ್ರ್ಯವಿರುತ್ತಿತು. ಆದರೆ ಅದರ ದುರುಪಯೋಗಪಡಿಸಿಕೊಳ್ಳುವರ ಮೇಲೆ ಅವರ ಕಟಾಕ್ಷವೂ ಇರುತ್ತಿತ್ತು. ಮೇಲೆ ಹೇಳಿದಂತೆ ಮೊದಲ ನೋಟಕ್ಕೇ ಕಾರ್ಯಕರ್ತನ ಯೋಗ್ಯತೆಯನ್ನು ತಿಳಿದರೂ ಒಮ್ಮೊಮ್ಮೆ ನಡುನಡುವೆಯೂ ಅಯೋಗ್ಯರೆಂದು ಕಂಡ ಒಬ್ಬಿಬ್ಬರನ್ನು ಕಿತ್ತು ತೆಗೆದುಹಾಕಿದ ಉದಾಹರಣೆಗಳೂ ಇವೆ. ಹೀಗೆ ಅವರ ಕೈಕೆಳಗೆ ಕೆಲಸ ಮಾಡುವುದೆಂದರೆ ಅದೊಂದು ಅಸಿಧಾರಾವ್ರತ.

ಶ್ರೀ ತಿಮ್ಮಪ್ಪ ನಾಯಕರನ್ನು 'ಕಾರವಾರ ಗಾಂಧಿ' ಎಂದು ಕರೆಯುತ್ತಿದ್ದದು ಸಾರ್ಥಕವಾಗಿತ್ತು. ಏಕೆಂದರೆ ಅವರು ಗಾಂಧೀ ತತ್ತ್ವವನ್ನು ಬಹಿರಂಗ ವೇಷದಲ್ಲಿ ಅಲ್ಲದೆ ಅಂತರಾಳದಲ್ಲಿಯೂ ಆಳವಾಗಿ ಇರಿಸಿಕೊಂಡರು. ಎಂತಲೆ ಅವರು ಸ್ವಾತಂತ್ರ್ಯದ ನಂತರವೂ ಅಧಿಕಾರದ ಆಮಿಷಕ್ಕೆ ಒಳಗಾಗದೆ ಸರ್ವಸೇವಾ ಸಂಘದ ಜಿಲ್ಲಾ ಸಂಚಾಲಕರಾಗಿ ಸರ್ವೋದಯ ಕಾರ್ಯ ಕೈಕೊಂಡರು. ಹೀಗಿರುವಾಗ

೧೯೫೮ರ ಸುಮಾರಿಗೆ ಶ್ರೀ ವಿನೋಬಾ ಭಾವೆಯವರೊಂದಿಗೆ ಜೋಗ್ ಜಲಪಾತ ವನ್ನು ಸರ್ವಸೇವಾ ಸಂಘದ ಅಲ್ಲಿ ನಡೆದ ಸಭೆಯ ಸಂದರ್ಭದಲ್ಲಿ ಸಂದರ್ಶಿಸಿದಾಗ ಅದೇ ಸಂದರ್ಭದಲ್ಲಿ ಅಲ್ಲಿಗೆ ಹೋದ ನನ್ನ ಮತ್ತು ಅವರ ಸಮಾಗಮವು ಅನಿರೀಕ್ಷಿತ ವಾಗಿ ಸಂಭವಿಸಿತು.

ಜೋಗದ ಜಲಪಾತದ ಬುಡದಲ್ಲಿ ಸ್ನಾನಮಾಡಿ ಬರಲು• ವಿನೋಬಾಜಿ ತನ್ನ ಸಾಹಸಿ ಶಿಷ್ಯರೊಡನೆ ಇಳಿದು, ಸ್ನಾನ ಮುಗಿಸಿ ಮೇಲೆ ಬರುತ್ತಿದ್ದರು. ಅವರ ಬರವನ್ನೇ ಕಾಯುತ್ತ ಅರ್ಧ ದಾರಿಯಲ್ಲಿ ಒಂದು ಆಸನದಲ್ಲಿ ಕುಳಿತು ನಾನು ಅವರ ವಿಚಾರಗಳನ್ನು ಆಕಾಶವಾಣಿಗಾಗಿ ಧ್ವನಿ ಮುದ್ರಿಸಿಕೊಳ್ಳಬೇಕಾಗಿತ್ತು. ಕೈಯಲ್ಲಿ ಧ್ವನಿಮುದ್ರಿಕೆ ಇರುವ ನಾನು ಅದಕ್ಕೂ ಕೆಳಗೆ ಇಳಿಯುವ ಹಾಗೆ ಇರಲಿಲ್ಲ. ಹಾಗೆಂದು ಅಲ್ಲಿಯೇ ಕಾಯುತ್ತಿದ್ದಾಗ ಅದೇ ಸೀಟಿನ ಮೇಲೆ ಇನ್ನೊಬ್ಬ ವಯೋವೃದ್ಧರೂ ಖಾದಿ ಪಂಚೆ, ಅಂಗಿಯಲ್ಲಿ ಕೂತಿದ್ದರು. ಬೊಕ್ಕನೆತ್ತಿಯ ಬರಿಗಾಲಿನ ಈ ವ್ಯಕ್ತಿಯ ಪರಿಚಯವಿರುವಂತೆ ಎನಿಸಿದರೂ ನೇರವಾಗಿ ಮಾತನಾಡಿಸಲು ಮನಸ್ಸಾಗಲಿಲ್ಲ. ನಾನೋ ಆಗ ನಖಶಿಖಾಂತ ಮಿಲ್ ಬಟ್ಟೆ ತೊಟ್ಟವ. ಬೊಕ್ಕನೆತ್ತಿಯಾದರೂ ಕ್ರಾಪು ವಿಪುಲವಾಗಿವೆ. ಕಾಲಲ್ಲಿ ಬೂಟು. ಹೀಗಿರುವ 'ಎರಡು ಧ್ರುವ'ಗಳು ಒಂದೆಡೆಗೆ ಸೇರಿದ ಸಂದರ್ಭದಲ್ಲಿ ಮಾತಿಗೆ ಮೊದಲು ಹೇಗೆ?

ಕೆಳಗೆ ಮೇಲೆ, ಹಿಂದೆ ಮುಂದೆ ಗಂಭೀರವಾಗಿ ನೋಡಿದ ಆ ವ್ಯಕ್ತಿಯೇ ಎಲ್ಲಿಗೋ ದೃಷ್ಟಿಯಿಟ್ಟು ನನ್ನನ್ನು ನೇರವಾಗಿ ಪ್ರಶ್ನಿಸಿದರು, "ನೀವು ಸ್ವಾಮಿರಾವ್ ಕುಲಕರಣಿ ಅಲ್ಲವೆ?" ನಾನು ತಬ್ಬಿಬ್ಬಾದೆ. ಅವರ ಮೃದು ಮಾತಿನ ರೀತಿ ನನ್ನನ್ನು ಸುಮಾರು ಮೂವತ್ತು ವರುಷಗಳ ಹಿಂದೆ ಕರೆದೊಯ್ಯಿತು. ನಾನು ಮನಸ್ಸಿನ ಯಾವ ಮೂಲೆಯಲ್ಲಿಯೋ ಊಹಿಸಿಕೊಂಡಿದ್ದ ಮಾತು ಸತ್ಯವಾಯಿತು. "ಅವರು ನಾಯಕ ಮಾಸ್ತರರು" ಎಂದು.

ಅವರನ್ನು ಗುರುತಿಸಲಿಲ್ಲವೆಂದಾಗಲಿ ಅಥವಾ ನನ್ನಲ್ಲಿ ಆಮೇಲೆ ಆದ ಅಪಾರ ಬದಲಾವಣೆಯಿಂದಾಗಲೀ ಅವರು ನನ್ನಲ್ಲಿ ಖತಿಗೊಂಡಂತೆ ತೋರಲಿಲ್ಲ; ಪ್ರತಿಯಾಗಿ ನನ್ನೊಡನೆ ಅದೇ ಹಳೆಯ ಪ್ರೀತಿ ವಿಶ್ವಾಸಗಳಿಂದಲೇ ಮಾತನಾಡಿದರು; ನನ್ನ ಆಮೇಲಿನ ಶಿಕ್ಷಣ ಪ್ರಗತಿ, ಆರ್ಥಿಕ ಪ್ರಗತಿಗಾಗಿ ಆನಂದ, ಅಭಿಮಾನ ಪಟ್ಟರೇ ವಿನಾ ಅಸಹ್ಯ, ಅಸಡ್ಡೆ ತೋರಲಿಲ್ಲ; ಇಷ್ಟೇ ಅಲ್ಲ ತಾವೇ ಮುಂದಾಗಿ ವಿನೋಬಾಜಿಯವರ ಸಮೀಪಕ್ಕೆ ನಾನು ಹೋಗುವಂತೆ ಅನುವು ಮಾಡಿಕೊಟ್ಟು ನಾನು ಬಂದ ಉದ್ದೇಶ ನೆರವೇರುವಂತೆ ಸಹಾಯ ಮಾಡಿದರು. ಅದೇ ಅವರ ನನ್ನ ಕೊನೆಯ ಭೇಟಿ.

ಇನ್ನು ಅವರಿಲ್ಲವೆಂದಾಗ ಇಂಥ ತಾತ್ತ್ವಿಕರನ್ನೂ ಸಾತ್ವಿಕರನ್ನೂ ಕಳೆದು ಕೊಂಡು ತಬ್ಬಲಿಯಂತೆ ಭಾವಿಸುತ್ತೇನೆ. ಅವರ ಒಂದೊಂದು ಗುಣವೂ ನಮ್ಮ ಕೈದೀವಿಗೆಯಾಗಿ ಬಾಳಿಗೆ ಬೆಳಕುನೀಡಲಿ ಎಂದು ಪರಮಾತ್ಮನಲ್ಲಿ ಪ್ರಾರ್ಥಿಸುತ್ತೇನೆ.

# ಶಬ್ದಾತೀತ ಘನತೆ

## ಕಮಲ ಸದಾನಂದ ನಾಯಕ

ಪರಮಪೂಜ್ಯ ಪಿತಾಮಹ ನಾಯಕ ಮಾಸ್ತರರ ಸ್ನೇಹದ ಮಳೆ ನಮ್ಮ ಮನೆಯ ಮೇಲೆ ಸದಾ ಬೀಳುತ್ತಲಿತ್ತು. ನನ್ನ ಸೋದರಮಾವ ಶ್ರೀ ಹನುಮಂತ ರಾವ್ ಮಾಂಜರೇಕರರ ಮಿತ್ರರು ಅವರಾದುದರಿಂದ ಕಾರವಾರಕ್ಕೆ ನಮ್ಮ ಮನೆಗೆ ಅವರ ಯಾತಾಯಾತ ಇದ್ದೇ ಇತ್ತು. ಅವರು ನಮ್ಮಲ್ಲಿ ಬಂದರೆಂದರೆ, ಅವರಿಗೆ ನಮ್ಮ ಮನೆಯ ಎಂದಿನ ಅಡಿಗೆ ಆಗುತ್ತಿರಲಿಲ್ಲ. ಉಪ್ಪು, ಮೆಣಸಿನ ಕಾಯಿ ಅವರಿಗೆ ವರ್ಜ್ಯ. ಕೆಲವು ಕಟು ಸಂಗತಿಗಳು ಮನಸ್ಸಿಗೆ ಹತ್ತಿದ್ದರಿಂದ ಅವರು ತಮ್ಮ ನಾಲಿಗೆಯ ಮೇಲೆ ಬಂಧನ ಹಾಕಿಕೊಂಡು ಯಾವ ಅಸ್ವಾದವ್ರತವನ್ನು ಸ್ವೀಕರಿಸಿದ್ದರೋ ಅದನ್ನು ತಮ್ಮ ಆಯುಷ್ಯದಲ್ಲಿ ಕೊನೆಯತನಕ ಕಟಾಕ್ಷಪೂರ್ವಕ ಪಾಲಿಸಿದರು. ಪ್ರವಾಸದಲ್ಲಿಯೂ ಇತರ ಎಲ್ಲ ಕಡೆಯೂ ಅವರು ಯಾವಾಗಲೂ ಎಚ್ಚರವಾಗಿರುತ್ತಿದ್ದರು. ಸ್ವಂತ ಕೈಯಿಂದ ತೆಗೆದ ನೂಲಿನ ಬಟ್ಟೆಯನ್ನೇ ಬಳಸುತ್ತಿದ್ದರು.

ಕಸ್ತೂರಬಾ ಭಗಿನಿ ಮಂಡಳದ ಶಾಖೆಯನ್ನು ಕಾರವಾರದಲ್ಲಿ ಸ್ಥಾಪಿಸಿದಾಗ ಆ ಸಮಾರಂಭದ ಅಧ್ಯಕ್ಷರೆಂದು ಬಂದಾಗಲೇ ಅವರನ್ನು ನಾನು ಮೊದಲು ಕಾಣುವ ದಾಯಿತು. ಬಿಳಿಯ ಬಟ್ಟೆ ತೊಟ್ಟ, ಭವ್ಯ ಮುಖದ, ಕಿರುಕಣ್ಣುಗಳ, ಮನಸ್ಸಿನ ಮೇಲೆ ಬಿಂಬಿತವಾಗುವ ವ್ಯಕ್ತಿತ್ವದ ಅವರು ವ್ಯಾಸಪೀಠದ ಮೇಲೆ ಕುಳಿತರು. ಚರಕದಿಂದ ನೂಲುವ ಕೆಲಸ ನಡೆದಿತ್ತು. ಮತ್ತು ಮನಸ್ಸಿನ ಮೇಲೆ ಪರಿಣಾಮ ಬೀರುವ ಶಬ್ದಗಳು ಅವರ ಬಾಯಿಂದ ಬರುತ್ತಲಿದ್ದವು. ಭಗಿನಿ ಮಂಡಳದ ಸ್ಥಾಪನೆಯ ಉದ್ದೇಶ, ಅದರ ಮಹತ್ವ ಮತ್ತು ಅದರ ಕಾರ್ಯಗಳ ವಿಚಾರವನ್ನು ಅವರು ಸ್ವಲ್ಪದರಲ್ಲಿ ಮಾಡಿಕೊಟ್ಟರು. ಆಗಿನ ಶುಭ್ರ ಪೋಷಾಕಿನ ಆ ತೇಜಸ್ವೀ ಮೂರ್ತಿ ಮತ್ತು ಅವರ ಧೀರಗಂಭೀರವಾಣಿ ಇಂದೂ ನನ್ನ ನೆನಪಿನಲ್ಲಿವೆ.

ಆ ಕಾಲದಲ್ಲಿ ರಾಷ್ಟ್ರ ಸೇವಾದಳದ ಕಾರ್ಯಕರ್ತರ ಏಳುದಿನದ ಶಿಬಿರ ಕಾರವಾರದಲ್ಲಿ ಆಗುವದಿತ್ತು. ಅವರನ್ನು ಆಗ ವ್ಯಾಖ್ಯಾನಕ್ಕಾಗಿ ಕರೆಯಲಾಗಿತ್ತು. ಅವರ ಸ್ನಾನದ ವ್ಯವಸ್ಥೆ ನಮ್ಮ ಮನೆಯಲ್ಲಿ ಮಾಡಿದ್ದರು. ಅವರಿಗೆ ಏನು ಬೇಕು,

ಬೇಡ ಎಂದು ತಿಳಿಯಲು ನಾವು ಸೋದರಸೋದರಿಯರು ನಾಮುಂದು ತಾಮುಂದು ಎಂದು ನುಗ್ಗುತ್ತಿದ್ದೆವು.

ಗಾಂಧೀಜಿಯವರ ಹತ್ಯೆಯ ನಂತರ ಎಲ್ಲಾ ಜನತೆ ತಲ್ಲಣಿಸಿತು. ನನ್ನ ಪ್ರಿಯ ಅಣ್ಣನಿಗೆ ಈ ಸಂಗತಿ ಎಷ್ಟೊಂದು ಮನಸ್ಸಿಗೆ ಹತ್ತಿತೆಂದರೆ, ಈ ಆಘಾತ ದಿಂದ ಸುಧಾರಿಸಿಕೊಳ್ಳುವದು ಅವರಿಂದ ಆಗಲಿಲ್ಲ. ಪೂಜ್ಯ ನಾಯಕ ಮಾಸ್ತರರು ತಮ್ಮ ಅಮೂಲ್ಯವಾದ ಹೊತ್ತನ್ನು ವ್ಯಯಿಸಿ ತಮ್ಮ ಕಳಕಳಿಯ ಶಬ್ದಗಳಿಂದ ಅಣ್ಣನ ಮನಸ್ಸಿಗೆ ಧೈರ್ಯವಿತ್ತು ಹೋಗಲು ಬಂದಿದ್ದರು.

ಆದರೆ ಪ್ರತ್ಯಕ್ಷ ಅವರ ಜೊತೆ ಇದ್ದು ಕೆಲಸ ಮಾಡುವ ಯೋಗ ೧೯೫೩ರಲ್ಲಿ ಬಂತು. ಗಾಂಧೀ ಸ್ಮಾರಕನಿಧಿಯ ಕರ್ನಾಟಕ ಶಾಖೆಗೆ ಅವರು ಸಂಚಾಲಕರಿದ್ದರು. ಮತ್ತು ಗಾಂಧೀಜಿಯವರ ಆದೇಶದಂತೆ ಹಳ್ಳಿಗಳಲ್ಲಿ ಇದ್ದು ಕೆಲಸಮಾಡಲು ನಿರ್ಧರಿಸಿ ಅಂಕೋಲೆಯಿಂದ ಹಿರೇಗುತ್ತಿಗೆ ಕಾರ್ಯಾಲಯವನ್ನು ಅವರು ತಂದರು. ಹಿರೇಗುತ್ತಿಯ ರಮ್ಯ ಪರಿಸರವನ್ನು ಆಶ್ರಮ ಮತ್ತು ನಿಧಿಯ ಕಾರ್ಯಾಲಯಕ್ಕೆ ಆರಿಸಿದ್ದರಲ್ಲಿ ಅವರ ವಿಚಕ್ಷಣತೆ ಸ್ಪಷ್ಟವಾಗುತ್ತದೆ. ಸುತ್ತಲೂ ಹಸುರು ಗಿಡಮರ ಗಳು, ಸಹ್ಯಾದ್ರಿಯ ಬೆಟ್ಟಗಳ ಸಾಲು, ಆಶ್ರಮದ ಸೌಂದರ್ಯಕ್ಕೆ ಒಪ್ಪುತ್ತಿದ್ದವು. ಆಶ್ರಮದ ಆವಾರದಲ್ಲಿ ಮಾವು, ಹಲಸಿನ ಮರಗಳು ಪುಷ್ಕಳ. ಮಳೆಗಾಲದಲ್ಲಿ ಸುತ್ತಲೂ ಹಸುರು ಭತ್ತದ ಗದ್ದೆಗಳು. ನಡುವೆ ಒಂದೆರಡು ಒಕ್ಕಲುಗಳ ಗುಡಿಸಲುಗಳು. ಇದಕ್ಕೂ ಎತ್ತರದಲ್ಲಿ ಆಶ್ರಮದ ಈ ಕಟ್ಟಡ ಮನೋಹರ ವಾಗಿತ್ತು. ಪಕ್ಕದಲ್ಲಿ ಹೈನದ ಹಸುಗಳ ಪ್ರಶಸ್ತ ಹಟ್ಟಿ, ಹೂಗಳಿಂದ ತುಂಬಿದ ಗಿಡಗಳು, ಪೂಜ್ಯ ನಾಯಕ ಮಾಮ ಮತ್ತು ಇತರರು ಮೊಗಸಾಲೆಯಲ್ಲಿ ಚರ್ಚೆ ನಡೆಸುತ್ತ, ಎಲ್ಲರ ಸ್ವಾಗತಕ್ಕೆ ಸಿದ್ಧರಾಗಿ ಕುಳಿತ ದೃಶ್ಯ. ಪ್ರಾಚೀನ ಆಶ್ರಮಗಳ ಕಲ್ಪನೆ ಮನಸ್ಸಿನಲ್ಲಿ ಬಂದುಹೋಗುತ್ತಿತ್ತು.

ನಿಧಿಯ ಕೆಲಸದ ಬಗ್ಗೆ ಅವರು ಹೇಳುತ್ತಿದ್ದರು: "ನಿಧಿಯ ಕರ್ನಾಟಕ ಶಾಖೆಯ ಕಣ್ಣೆಂದರೆ ನಾನು. ನನ್ನ ಕಣ್ಣುಗಳಿಂದ ಕರ್ನಾಟಕದ ಶಾಖೆಯ ಅಹವಾಲನ್ನು ನಾನು ನೀಡಬೇಕು." ಅವರ ಸ್ವಂತದ ಜೀವನ ಸಾದಾ. ನಿತ್ಯ ಬೆಳಗು ಮೂರು ತಾಸು ದೈಹಿಕ ಶ್ರಮ ಮಾಡದೆ ಅವರು ಉಪಾಹಾರ ಮಾಡುತ್ತಿರಲಿಲ್ಲ. ಆಗ ದೇಶದಲ್ಲೆಲ್ಲ ಭೂದಾನ ಚಳವಳಿ ನಡೆದಿತ್ತು. ನಿಧಿಯ ಕೆಲಸದಿಂದ ತಮಗೆ ಪೂರ್ಣತಃ ಭೂದಾನ ಕಾರ್ಯದಲ್ಲಿ ಪಾಲುಗೊಳ್ಳಲು ಅವಕಾಶವಿರದ್ದರಿಂದ ೧೯೫೭ ರಲ್ಲಿ ಅವರು ಗಾಂಧೀನಿಧಿಯಿಂದ ಮುಕ್ತರಾದರು. ಭೂದಾನದ ಕಾರ್ಯಕ್ಕಾಗಿಯೇ ಪೂರ್ತಿ ಗಮನ ನೀಡಲು ಜೀವನ ದಾನ ಮಾಡಿ ಕರ್ನಾಟಕದಲ್ಲೆಲ್ಲ ಭೂದಾನದ ಕೆಲಸ ಆರಂಭಿಸಿದರು. ಸಾಮೂಹಿಕ ಪಾದಯಾತ್ರೆ, ವ್ಯಾಖ್ಯಾನ, ಚರ್ಚಾತ್ಮಕ

ಕಾರ್ಯಕ್ರಮ ಇವುಗಳ ಮೂಲಕ ಅವರ ಕೆಲಸ ಭರದಿಂದ ಸಾಗಿತು. ಸತತ ಪ್ರವಾಸ, ಅವಿಶ್ರಾಂತ ಶ್ರಮ, ಆಗಾಗ ಆಹಾರದಲ್ಲಿ ವ್ಯತ್ಯಾಸ ಇವುಗಳಿಂದ ಅವರ ಆರೋಗ್ಯ ಕೆಟ್ಟಿತು. ಹಿಂದಿನ ಮೂಲವ್ಯಾಧಿಯು ತೀವ್ರವಾಗಿ ಮರುಕಳಿಸಿತು. ಮೂಲ ವ್ಯಾಧಿಯ ಆಪರೇಶನ್ ಅಂಕೋಲೆಯಲ್ಲಿ ಆಯಿತು.

ಹಿರೇಗುತ್ತಿಯಲ್ಲಿ ೧೯೫೩ ರಿಂದ ೧೯೫೮ರವರೆಗೆ ಐದು ವರ್ಷ ಅವರ ಬಳಿ ಆಫೀಸ್ ಕಾರ್ಯದರ್ಶಿಯೆಂದು ಕೆಲಸ ಮಾಡುವ ಸಂಧಿ ದೊರೆಯಿತು. ಆ ಕಾಲಕ್ಕೆ ಅವರಿಂದ ಜೀವನದಲ್ಲಿ ಅಮೂಲ್ಯವೆನಿಸುವ ಸಂಗತಿಗಳು ಕುರಿತು ಅನುಭವವಾಯಿತು. ಅವು ಬೇರೆಡೆ ಆಗುವ ಅನುಭವಗಳಲ್ಲ. ಆ ಐದು ವರ್ಷಗಳ ಕಾಲವೆಂದರೆ ನನ್ನ ಪಾಲಿಗೆ ಸಿಕ್ಕ ಸುವರ್ಣ ಸಂಧಿ. ಹಗಲು ರಾತ್ರಿ ಕೆಲಸದ್ದೊಂದೇ ಚಿಂತೆ. ವಿಚಾರ, ಚಿಂತನ, ಮನನಗಳು ಸದಾ ನಡೆಯುತ್ತಿದ್ದವು. ಕಿರಿಯರಿಂದ ಹಿರಿಯರ ತನಕ ತಮ್ಮಲ್ಲಿಗೆ ಬರುವ ಪ್ರತಿಯೊಬ್ಬ ವ್ಯಕ್ತಿಗೂ ಅವರು "ಜೀವನದ ಸೌರಭ"ವನ್ನಿತ್ತರು. ಅವರ "ಪರಿಮಳ" ಇಂದಿಗೂ ಭಾಸವಾಗುತ್ತದೆ. ಅವರ ಸ್ವಭಾವ ಅತ್ಯಂತ ಸರಳ ಮತ್ತು ಸಾದಾ. ಕಿರಿಯರಾಗಲಿ ಹಿರಿಯರಾಗಲಿ ಅವರೆಲ್ಲ ಅವರಿಗೆ ಸಮಾನರು. ನಿರಹಂಕಾರವೃತ್ತಿ ಮತ್ತು ಪ್ರಸಿದ್ಧಿ ಪರಾಙ್ಮುಖತೆ ಅವರ ಗುಣವಿಶೇಷ. ಕೆಲಸದ ಒತ್ತಡ ಬಹಳವಿದ್ದುದರಿಂದ ಒಮ್ಮೊಮ್ಮೆ ಅವರಿಗೆ ಸಿಟ್ಟು ಬರುತ್ತಿತ್ತು. ಆದರೆ ಬೇಗನೆ ಮನಸ್ಸು ಶಾಂತವಾಗುತ್ತಿತ್ತು. ನಮ್ಮನ್ನು ಸಂತೈಸುತ್ತಿದ್ದರು. ಮತ್ತೆ ಎಂದಿನಂತೆ ಎಲ್ಲರೂ ಕಾರ್ಯಮಗ್ನರಾಗುತ್ತಿದ್ದರು. "ನನ್ನ ಸ್ವಭಾವವೇ ಸಿಟ್ಟಿನದು. ನಾನು ನಿಮ್ಮನ್ನು ಬಯ್ಯುತ್ತಿರುತ್ತೇನೆ," ಎಂದು ಮೇಲಿಂದ ಮೇಲೆ ಹೇಳಿ ತೋರಿಸು ವರು. ನನ್ನ ಮನಸ್ಸಿನ ಭಾವ ಅರ್ಥಮಾಡಿಕೊಳ್ಳಿ, ಎನ್ನುವರು. ಅವರ ವ್ಯಕ್ತಿತ್ವ ಅತ್ಯಂತ ಪ್ರಭಾವಶಾಲಿಯಾದುದು. ತಮ್ಮ ವ್ಯಕ್ತಿತ್ವದ ಹಿರಿಮೆಯಿಂದ ಎಷ್ಟೋ ತರುಣರ ಮನಸ್ಸನ್ನು ಅವರು ಗೆದ್ದಿದ್ದಾರೆ.

"ವ್ಯಕ್ತಿಗಳ ದೋಷದ ಕಡೆ ನೋಡಬೇಡಿ. ಗುಣಗಳನ್ನು ಅವಲೋಕಿಸಿ. ನಮ್ಮ ಎಲ್ಲ ಕ್ರಿಯೆಗಳೂ ಪ್ರಮಾಣಬದ್ಧವಾಗಿರಲಿ. ಬರಿಯ ಓದು, ಬರಹ ಉಪಯೋಗದ್ದಲ್ಲ, ಅದು ಸೇವೆಗಾಗಿ ಆದಾಗಲೇ ನಿಜವಾಗಿ ನಮ್ಮ ವಿಕಾಸ ಆದೀತು. ವಾಚನ, ಚಿಂತನ, ಮನನ ಮತ್ತು ಸೇವೆಗಳ ಸುಂದರ ಹೊಂದಾಣಿಕೆ ನಮ್ಮ ಜೀವನ ದಲ್ಲಿ ಇರಬೇಕು."

ಅವರ ಬಗ್ಗೆ ಬರೆಯಲು ಶಬ್ದಗಳು ಸಮರ್ಥವೆನಿಸುವುದಿಲ್ಲ. ಅವರದು ಶಬ್ದಾತೀತ ಘನ ವ್ಯಕ್ತಿತ್ವ. ಅವರ ಸಾನ್ನಿಧ್ಯದಲ್ಲಿ ದೊರೆತ ಅಮೃತಕಣಗಳು ಇಂದಿಗೂ ಕ್ಷಣಕ್ಷಣವೂ ಅನುಭವಕ್ಕೆ ಬರುತ್ತವೆ. ಅವರ ಸ್ಮೃತಿಗೆ ನೂರುನೂರು ಪ್ರಣಾಮಗಳು.

# ವಿಭೂತಿಪುರುಷ

ಆರ್. ಜಿ. ರಾಯಕರ

ಭಾರತೀಯ ಸಂಸ್ಕೃತಿಯಲ್ಲಿ ಒಂದೊಂದು ಗುರಿ ಸಾಧಿಸುವುದಕ್ಕಾಗಿ ತಮ್ಮ ಸರ್ವಸ್ವವನ್ನೇ ಅರ್ಪಿಸುವ ಅನೇಕ ಹಿರಿದಾದ ವಿಭೂತಿಗಳನ್ನು ನಾವು ಕಾಣ ಬಹುದು. ಅಂಥವರ ಸಾಲಿನಲ್ಲಿ ದಿವಂಗತ ತಿಮ್ಮಪ್ಪ ನಾಯಕರೂ ಒಬ್ಬರು. ನಾಯಕರು ವಿನಮ್ರರು. ಸ್ಫಟಿಕದಂತೆ ನಿರ್ಮಲ ಚಾರಿತ್ರ್ಯಹೊಂದಿದ್ದು, ಅವರ ದೇಶನಿಷ್ಠೆ ಮತ್ತು ಮಮತೆ ಉಪಮಾತೀತವಾದುದು. ಅವರ ಸ್ವಭಾವ ಪಾರದರ್ಶಕ. ತ್ಯಾಗ ಮತ್ತು ಪಾವಿತ್ರ್ಯಗಳಿಗೆ ಅವರ ಹೆಸರು ಮನೆಮಾತಾಗಿತ್ತು. ಗಾಂಧೀಜಿಯವರು ಬೋಧಿಸಿದ ಅಹಿಂಸೆ, ಸತ್ಯಗಳನ್ನು ಪಾಲಿಸಿ, ಹಳ್ಳಿಗರ ಹಾಗೂ ಬಡಜನರ ಸೇವೆಯಲ್ಲಿ ಮಗ್ನರಾಗಿ ಸತ್ಕರ್ಮವನ್ನು ಮಾಡುವದೇ ಆನಂದವೆಂದು ದುಡಿದವರಲ್ಲಿ ಶ್ರೀ ನಾಯಕ ಮಾಸ್ತರ ಒಬ್ಬರು. ಅವರು ಒಂದೆಡೆ—"ನಮ್ಮ ಹಳ್ಳಿಯ ಬಡವರ ಕೊರತೆಗಳು ಹಾಗೂ ಕೊಳಕು ಮಾಯವಾಗಿ ಅವರ ಹಳ್ಳಿ ನಂದನವನವಾಗಬೇಕು. ಜನ ತೇಜಸ್ವಿಗಳಾಗಬೇಕು. ತುಂಬು ಬದುಕು ಹಳ್ಳಿ ಯಲ್ಲಿ ಬರಬೇಕು" ಎಂದು ಹೇಳಿದ್ದರು. ಈ ರೀತಿ ಗಾಂಧೀಜಿಯವರ ತತ್ತ್ವ ಗಳಲ್ಲಿ ಅವರಿಗೆ ದೃಢವಾದ ನಂಬಿಕೆ ಇತ್ತು. ತೇಜಸ್ವಿ ಕಣ್ಣುಗಳು, ರಮಣ ಮಹರ್ಷಿಯಂತೆ ಪ್ರಜ್ವಲಿಸುತ್ತಿರುವ ಮುಖಚರ್ಯೆಯಿಂದ ದೇವಪುರುಷನಂತೆ ಕಂಗೊಳಿಸುತ್ತಿದ್ದರು. ಗಾಂಧೀಜಿಯವರ ಧ್ಯೇಯಾದರ್ಶಗಳಿಗೆ ಬದ್ಧರಾಗಿ ಸೇವಾ ನಿರತರಾಗಿರುತ್ತಿದ್ದರು.

ತನ್ನ ಸರ್ವ ಸುಖಾಭಿಲಾಷೆಗಳನ್ನು ದೇಶದ ಕಲ್ಯಾಣಕ್ಕಾಗಿ ಬಲಿತೆತ್ತ ಪೂಜ್ಯ ಗಾಂಧೀಜಿಯವರ "ಯಂಗ್ ಇಂಡಿಯಾ" ಪತ್ರಿಕೆಯ ಬರಹಗಳಿಂದ ಪ್ರಭಾವಿತ ರಾಗಿ ೧೯೨೧ರಲ್ಲಿ ಮಾಸ್ತರರು ತಮ್ಮ ಅಧ್ಯಾಪಕನ ನೌಕರಿಯನ್ನು ತ್ಯಜಿಸಿದರು. ಆಗ ಶಿರಸಿಯಲ್ಲಿ ಶ್ರೀ ವಾಮನ ಹೊದಿಕೆಯವರು ನಡೆಯಿಸುತ್ತಿರುವ ರಾಷ್ಟ್ರೀಯ ಶಾಲೆಯ ಅಧ್ಯಾಪಕರಾಗಿ ಸೇರಿದರು. ಅದೇ ವೇಳೆಯಲ್ಲಿ ಶಿರಸಿಯಲ್ಲಿ ಸ್ವಾಮಿ ಧರ್ಮಾನಂದರು ಮಾಡಿದ ಭಾಷಣದ ವೇಳೆಯಲ್ಲಿ ಶ್ರೀ ನಾಯಕ ಮಾಸ್ತರರು ಭಾಷಣ ಮಾಡಿದರು. ಕಾಂಗ್ರೆಸ್ ಸಂಸ್ಥೆಯ ಉದಯದಿಂದ ಇಂದಿನ ವರೆಗೂ ಪಾಲಿಸಲ್ಪಡುತ್ತಿರುವ ಅವರ "ಜೀವದ ಜೀವ" ಎಂಬಂತಿರುವ ಒಂದು ಪ್ರಮುಖ ಧ್ಯೇಯವೆಂದರೆ "ಜಾತೀಯ ಏಕತೆ." ಯಾರೇ ಇರಲಿ ಯಾವ ಮತಸ್ಥನೇ ಆಗಲಿ ಹಿಂದೀಯರಾದ ನಾವೆಲ್ಲರೂ ಒಂದೇ ತಾಯಿಯ ಮಕ್ಕಳು. ನಮ್ಮ ದೇಶದ

ಸ್ವಾತಂತ್ರ್ಯಕ್ಕಾಗಿ ಎಂತಹ ತ್ಯಾಗಕ್ಕಾದರೂ ಸಿದ್ಧರಾಗಿ ಹೋರಾಡುವದು ಕರ್ತವ್ಯ, ಇತ್ಯಾದಿ ಅವರ ಧೀರ ಭಾಷಣದಿಂದ ೧೯೨೨ರಲ್ಲಿ ನಾಯಕ ಮಾಸ್ತರರಿಗೆ ಒಂದು ವರ್ಷ ಶಿಕ್ಷೆಆಯಿತು. ಉತ್ತರ ಕನ್ನಡ ಜಿಲ್ಲೆಯ ಪ್ರಥಮ ರಾಜಕೀಯ ಕೈದಿಗಳಲ್ಲಿ ಅವರು ಒಬ್ಬರಾದರು. ಅವರು ಉಪನ್ಯಾಸ ಮಾಡಲು ನಿಂತರೆ ಗಂಟೆಗಟ್ಟಲೆ ನಿರರ್ಗಳವಾಗಿ ಮಾತನಾಡುತ್ತಿದ್ದರು. ಇಂಗ್ಲಿಷ್‌ನಲ್ಲಿಯೂ ಇದೇ ಪ್ರಭಾವ; ಒಂದು ಕ್ಷಣವಾದರೂ ನೀರಸತೆ ಇಲ್ಲ. ಇನ್ನೂ ಕೇಳೋಣ ಎನ್ನುವ ಮಾತಿನ ಮೋಡಿ. ತನ್ನ ಧ್ಯೇಯ ಮತ್ತು ಆದರ್ಶಗಳನ್ನು ಜೀವಂತ ಇರುವವರೆಗೆ ನಡೆಯಿಸಿ ಕೊಂಡು ಬಂದರು,

ಉತ್ತರ ಕನ್ನಡ ಜಿಲ್ಲೆಯಲ್ಲಿ "ಕರ್ನಾಟಕ ಗಾಂಧಿ" ಎಂದು ಅವರು ಚಿರ ಪರಿಚಿತರಾದರು. ಸ್ವಾತಂತ್ರ್ಯಾನಂತರವೂ ಗಾಂಧೀಜಿ ಹೇಳಿದ ಮಾರ್ಗದಲ್ಲಿಯೇ ಸಾಗಿ ನೂರಾರು ಜನರಿಗೆ ಉದ್ಯೋಗ ನೀಡುವ ಅಂಕೋಲಾದ ಗ್ರಾಮಸೇವಾ ಸಮಿತಿಯ ಮಾರ್ಗದರ್ಶಕರಾಗಿ ವಿಧಾಯಕ ಕ್ಷೇತ್ರದಲ್ಲಿ ಪ್ರಥಮವೆನಿಸುವ ಹೊಸ ಮಾದರಿಯ ಕಾರ್ಯ ಮಾಡಿದರು. ಅಹೋರಾತ್ರಿ ಹಳ್ಳಿಗರ ಮತ್ತು ಹರಿಜನರ ಸೇವೆ ಕೈಗೊಂಡರು. ಗಾಂಧೀಜಿಯವರು ಕನಸಿನ ಆದರ್ಶವನ್ನು ನನಸಾಗಿಸಲು ಯತ್ನಿಸಿದರು.

ವಿವಿಧ ಪತ್ರಿಕೆಗಳಲ್ಲಿ ರಾಷ್ಟ್ರಸೇವೆ, ಸಮಾಜಕ್ರಾಂತಿ, ಸ್ವಾತಂತ್ರ್ಯಪ್ರಾಪ್ತಿ, ಸಮಾಜಸೇವೆ, ಹರಿಜನಸೇವೆ ಮುಂತಾದ ವಿಷಯಗಳ ಮೇಲೆ ಅನೇಕ ಲೇಖನಗಳನ್ನು ಅವರು ಪ್ರಕಟಿಸಿರುವರು. ಅವರು ಬರೆದ ಪುಸ್ತಕಗಳಾದ "ಧರ್ಮ-ಸಮನ್ವಯ ದರ್ಶನ" ಗಾಂಧೀಜಿಯವರ "ಆಧ್ಯಾತ್ಮಿಕ ಜೀವನ" "ಶಿವಶರಣರ ಸಾಧನಾ ಪಥ" ಈ ಪುಸ್ತಕಗಳು ಕನ್ನಡಿಗರಲ್ಲಿ ರಾಷ್ಟ್ರಭಕ್ತಿ, ಆಧ್ಯಾತ್ಮಿಕ ಪುನರುತ್ಥಾನಕ್ಕೆ ಸಹಾಯಕ ವಾಗಿವೆ.

ರಚನಾತ್ಮಕ ಕಾರ್ಯಕರ್ತರಾಗಿ, ಸ್ವಾರ್ಥತ್ಯಾಗಿಯಾಗಿ, ಸ್ವಾತಂತ್ರ್ಯ ಹೋರಾಟ ಗಾರರಾಗಿ, ನಿಶ್ಚಲ ನಿರ್ಮಲ ದೇಶಪ್ರೇಮಿಯಾಗಿ, ರಾಷ್ಟ್ರೀಯ ಸ್ವಾತಂತ್ರ್ಯ ಚಳುವಳಿ ಗಾರರಾಗಿ ಬಾಳಿ ಬದುಕಿದ ಒಬ್ಬ ಗಾಂಧೀ ವಾದಿಯನ್ನು ದಿನಾಂಕ ೨೬-೧೧-೧೯೭೪ಳ ರಂದು ನಾವು ಕಳೆದುಕೊಂಡೆವು. ಆ ಮಹಾವ್ಯಕ್ತಿಯ ಸದಾ ಸ್ಮರಣೆ ಹಾಗೂ ಅವರ ಸೇವಾ ನಿಷ್ಠೆಯ ನಿತ್ಯದ್ಯೋತಕ ವಾಗುವಂತೆ ಕನ್ನಡ ಜನಕುಲಕ್ಕೆ ನವಸ್ಫೂರ್ತಿಯನ್ನು ನೀಡುವ, ಭಾವೀ ಸಮಾಜವನ್ನು ನಿರ್ಮಿಸಬಲ್ಲ. ಅರ್ಹಯುವಕರನ್ನು ಚೇತರಿಸುವ ಅವರ ಸ್ಮಾರಕ ಅವಶ್ಯವಾದುದು. ಅವರಿಗೆ ಯೋಗ್ಯವಾದ ಸ್ಮಾರಕವನ್ನು ನಿರ್ಮಿಸಲು ಆದಷ್ಟು ತೀವ್ರ ಉತ್ತರ ಕನ್ನಡ ಜಿಲ್ಲೆಯ ಜನತೆ, ಸರ್ವೋದಯ ಸಮಿತಿ ಹಾಗೂ ಕಾಂಗ್ರೆಸ್ ಸಮಿತಿಗಳು ಕಾರ್ಯಪ್ರವೃತ್ತರಾಗುವದು ಅತ್ಯವಶ್ಯ.

# ಪರಹಿತಚಿಂತಕ

ಆರ್. ಎಸ್. ಕೃಷ್ಣಮೂರ್ತಿ

೧೯೪೭ರ ಮೈಸೂರು ಸತ್ಯಾಗ್ರಹ ಹೋರಾಟದಲ್ಲಿ ಜೈಲುವಾಸವನ್ನು ನಾನು ಶಿವಮೊಗ್ಗದಲ್ಲಿ ಅನುಭವಿಸುತ್ತಿದ್ದಾಗ ಶ್ರೀಮತಿ ವರದಾಬಾಯಿ ವೆಂಕಟೇಶ ಭಟ್ಟ, ಸಿದ್ಧಾಪುರ ಇವರ ಪರಿಚಯವಾಯಿತು. ಅವರು ನನಗೆ ಅಂಕೋಲಾ ಗ್ರಾಮ ಸೇವಾ ಸಮಿತಿಗೆ ಹೋಗಲು ಅವಕಾಶ ಮಾಡಿಕೊಟ್ಟರು. ಪೂಜ್ಯ ನಾಯಕ ಮಾಸ್ತರರಿಗೆ ಒಂದು ಕಾರ್ಡನ್ನು ಬರೆದು ನನ್ನನ್ನು ಸಮಿತಿಯಲ್ಲಿ ಸೇರಿಸಿಕೊಳ್ಳಲು ಅನುಮತಿ ತರಿಸಿಕೊಂಡರು. ಅದರಂತೆ ನನಗೂ ಒಂದು ಕಾರ್ಡುಬಂದಿತ್ತು. ಆ ಪತ್ರದಲ್ಲಿ, "ನೀವು ನಮ್ಮ ಸಮಿತಿಯಲ್ಲಿ ಒಂದು ವರ್ಷ ನೇಯ್ಗೆ ಶಿಕ್ಷಣವನ್ನು ಪಡೆದು ನಂತರ ಮೂರು ವರ್ಷ ಖಾದಿ ಕಾರ್ಯಕರ್ತನಾಗಿ ಕೆಲಸ ಮಾಡಬೇಕಾಗು ತ್ತದೆ. ನಿಮಗೆ ಟ್ರೈನಿಂಗ್ ವೇಳೆಯಲ್ಲಿ ಮಾಹೆಯಾನ ೨೦-೦೦ ರೂ. ಗಳಂತೆ ವಿದ್ಯಾರ್ಥಿ ವೇತನವನ್ನು ಕೊಡಲಾಗುವುದು. ನೀವು ಬರಬಹುದು. ಬರುವಾಗ ಹಾಸಿಗೆ, ತಾಟು, ತಂಬಿಗೆ, ಮತ್ತು ಪೇಲೆ ಇತ್ಯಾದಿಗಳನ್ನು ತೆಗೆದುಕೊಂಡು ಬನ್ನಿ" ಎಂದು ಮಾಸ್ತರರು ಬರೆದಿದ್ದರು.

ಈ ಮೊದಲು ನನಗೆ ಅಪಾರ ಬಂಧು ಬಳಗದವರು ಮತ್ತು ಆಪ್ತೇಷ್ಟರು ಇದ್ದರೂ ಕೂಡ ಯಾವ ಮಾರ್ಗವನ್ನೂ ಕಾಣದೆ ನಿರುದ್ಯೋಗಿಯಾಗಿ ಪರತಂತ್ರ ದಲ್ಲಿ ಇರುತ್ತಿದ್ದುದರಿಂದಲೂ ಮತ್ತು ಯಾರಿಗೂ ನಾನು ಬೇಡಾದವನಾದುದ ರಿಂದಲೂ ಜೀವನದಲ್ಲಿ ಮಾರ್ಗಕಾಣದೆ ಇದ್ದಂಥ ವೇಳೆಯಲ್ಲಿ ಪೂಜ್ಯ ನಾಯ ಮಾಸ್ತರರ ಪತ್ರ ಬಂದ ಕೂಡಲೇ ನನಗೆ ಆದ ಆನಂದ ಅಷ್ಟಿಷ್ಟಲ್ಲ.

ನಾನು ಅಂಕೋಲೆಗೆ ಹೋದಾಗ ಮಾಸ್ತರರು ಸಮಿತಿಯ ಕೆಲಸದ ಸಂಬಂಧ ಮುಂಬಯಿಗೆ ಹೋಗಿದ್ದರು. ಅವರು ಬಂದ ಮೇಲೆ ನನ್ನನ್ನು ತಂದೆ-ತಾಯಿ ಗಳಂತೆ ಪ್ರೇಮದಿಂದ ನೋಡಿಕೊಂಡರು. ಸಮಿತಿಗೆ ಬಂದ ೮-೧೦ ದಿನಗಳಲ್ಲಿ ಸಮಿತಿಯ ಆಹಾರ-ವಿಹಾರಗಳಿಂದ ಬಹಳ ಸೊರಗಿ ಹೋದೆನು. ಆಗ ಪೂಜ್ಯ ನಾಯಕರು ನನ್ನನ್ನು ನೋಡಿ "ಮೂರ್ತಿಯವರೇ ನೀವು ಬಹಳ ಸೊರಗಿ ಹೋಗಿದ್ದೀರಿ. ಹಾಲು ತೆಗೆದುಕೊಳ್ಳಿರಿ. ನಾನು ದುಡ್ಡು ಕೊಡುತ್ತೇನೆ," ಎಂದು

ತಿಳಿಸಿದರು. ಅದಕ್ಕೆ ನಾನು ಒಪ್ಪದೆ ನನಗೆ ಸಿಗುತ್ತಿದ್ದ ವೇತನದಲ್ಲೇ ಆಹಾರವನ್ನು ತೆಗೆದುಕೊಳ್ಳುತ್ತಿದ್ದೆನು.

೧೯೪೭ರ ಸಾಲಿನಲ್ಲೇ ನನಗೆ ಜ್ವರ ಬಂದು ಮಲಗಿದ್ದೆನು. ಆಗ ನನ್ನನ್ನು ನೋಡಿ ವಾತ್ಸಲ್ಯದಿಂದ ನನ್ನ ಆರೈಕೆಯನ್ನು ಮಾಡುತ್ತಿದ್ದರು. ಜ್ವರಬಿಟ್ಟು ನನಗೆ ಗುಣಮುಖವಾದನಂತರ ಒಂದು ದಿನ ರವಿವಾರ ಬೆಳಿಗ್ಗೆ ೧೧ ಘಂಟೆ ಸುಮಾರಿಗೆ ನನ್ನ ಬಟ್ಟೆಗೆ ಸೋಪನ್ನು ಹಚ್ಚಿ ಬಾವಿಯ ಹತ್ತಿರ ಇಟ್ಟು ಬಂದೆನು. ಊಟ ತೀರಿಸಿ ಮಲಗಿಕೊಂಡೆನು. ಎಚ್ಚರವಾಗಲಿಲ್ಲ. ಪೂಜ್ಯ ನಾಯಕ ಮಾಸ್ತರರು ಬಾವಿಯ ಕಡೆಗೆ ಹೋದವರು ನನ್ನ ಬಟ್ಟೆಯನ್ನು ನೋಡಿ ಆ ಬಟ್ಟೆಯನ್ನು ಸೆಳೆದು ಒಣಗಲು ಹಾಕಿದರು. ಹಾಗೆ ಮಾಡಿದ್ದಕ್ಕೆ ನಾನು ತಕರಾರು ಮಾಡಲು, ಅವರು ವಾತ್ಸಲ್ಯದಿಂದ "ನಿಮಗೆ ಆರಾಮ ಇಲ್ಲ, ನಾನೇ ಬಟ್ಟೆಯನ್ನು ಸೆಳೆದು ಹಾಕಿದೆನು" ಎಂದು ಹೇಳಿದರು. ಆಗ ನನ್ನ ಅಜಾಗ್ರತೆಯಿಂದ ಪೂಜ್ಯ ನಾಯಕ ಮಾಸ್ತರರಿಂದ ಬಟ್ಟೆ ಒಗೆಸಿಕೊಳ್ಳಲು ಕಾರಣನಾದೆನಲ್ಲಾ ಎಂದು ಬಹಳ ದುಃಖಪಟ್ಟುಕೊಂಡೆನು. ಇದೇ ರೀತಿ ೧೯೪೮ರ ಮಾರ್ಚ ತಿಂಗಳಲ್ಲಿ ಧಾರ್ವಾಡ ಜಿಲ್ಲೆಯ ಗರಗದಲ್ಲಿ ಕರ್ಣಾಟಕದ ಖಾದಿ ಕಾರ್ಯಕರ್ತರ ಸಮ್ಮೇಳನಕ್ಕೆ ನನ್ನನ್ನು ಕರೆದುಕೊಂಡು ಹೋದರು. ಸಮ್ಮೇಳನವು ೮ ದಿವಸ ನಡೆಯಿತು. ಅಲ್ಲಿ ನನಗೆ ವಾಂತಿ-ಭೇದಿ ಆಗಿ ಮಲಗಿಕೊಂಡೆನು. ಆಗಂತೂ ನನ್ನ ಆರೋಗ್ಯದ ಬಗ್ಗೆ ಮತ್ತು ನನ್ನ ಉಪಚಾರದ ಬಗ್ಗೆ ಹೆಚ್ಚು ಕಾಳಜಿ ಪೂರೈಸಿ ಗುಣಪಡಿಸಿದರು.

ನನ್ನ ಏಳಿಗೆ ಬಗ್ಗೆ ಮತ್ತು ನಾನು ಉತ್ತಮ ಕಾರ್ಯಕರ್ತನಾಗುವ ಬಗ್ಗೆ ಕಳಕಳಿ ವಹಿಸಿ ೧೯೪೯ನೇ ಸಾಲಿನಲ್ಲಿ ಒಂದು ವರ್ಷ ನಡೆದ ಸರ್ವೋದಯ ವಿದ್ಯಾಲಯದಲ್ಲಿ ನನ್ನನ್ನು ಸರ್ವೋದಯ ವಿದ್ಯಾರ್ಥಿಯನ್ನಾಗಿ ಸೇರಿಸಿಕೊಂಡು ಸರ್ವೋದಯ ಕಾರ್ಯಕರ್ತನನ್ನಾಗಿ ಮಾಡಿದರು. ಅವರ ಮಾರ್ಗದರ್ಶನದಿಂದ ೭ ವರ್ಷ ಹಳ್ಳಿಯಲ್ಲಿ ಕೆಲಸ ಮಾಡಲು ಅನುಕೂಲವಾಯಿತು.

೧೯೬೩ನೇ ಸಾಲಿನಲ್ಲಿ ಮೂಲವ್ಯಾಧಿಯಿಂದ ಗೋಕರ್ಣ ಆಸ್ಪತ್ರೆಯಲ್ಲಿ ಮಲಗಿದ್ದಾಗ ಪೂಜ್ಯರು ಮಾದನಗೇರಿಯಿಂದ ಎರಡು ಸಾರಿ ಗೋಕರ್ಣಕ್ಕೆ ಬಂದು ನನ್ನ ಆರೋಗ್ಯದ ಬಗ್ಗೆ ವಿಚಾರಿಸಿಕೊಂಡು ಹೋದರಲ್ಲದೆ ಆಸ್ಪತ್ರೆಯ ಡಾಕ್ಟರಾದ ಶ್ರೀ ಭಾಸ್ಕರ ಇವರಿಗೆ ಬಹಳ ಕಾಳಜಿಯಿಂದ ನೋಡಿಕೊಳ್ಳುವಂತೆ ತಿಳಿಸಿದರು.

೧೯೪೮ ಸಾಲಿನಲ್ಲಿ ನನ್ನ ಹುಟ್ಟಿದ ಊರಾದ ಮತ್ತು ಜಿಲ್ಲೆಯಾದ ಶಿವಮೊಗ್ಗವನ್ನು ಬಿಟ್ಟು ಕಾರವಾರ ಜಿಲ್ಲೆಗೆ ಬಂದು ಪೂಜ್ಯ ನಾಯಕ ಮಾಸ್ತರ ಹಾಗೂ ಪೂಜ್ಯ ಹೊದಿಕೆ ಮಾಸ್ತರ ಮಾರ್ಗ ದರ್ಶನದಿಂದ ನಾನು ಮಾನವನಾಗಿ ಮತ್ತು

ಅವರ ಆಶೀರ್ವಾದದಿಂದ ಸಂಸಾರಿಕನಾಗಿ ಪರತಂತ್ರವಿಲ್ಲದೆ ಸ್ವತಂತ್ರನಾಗಿ ಖಾದಿ ಕ್ಷೇತ್ರದಲ್ಲಿ ನನ್ನ ಜೀವನವನ್ನು ನಡಿಸುತ್ತಿದ್ದೇನೆ.

ಪೂಜ್ಯ ನಾಯಕ ಮಾಸ್ತರರು ಮಾದನಗೇರಿಯಿಂದ ಅಂಕೋಲಾಕ್ಕೆ ಬಂದಮೇಲೆ ನನ್ನ ಆರೋಗ್ಯದ ಬಗ್ಗೆ ಮತ್ತು ಊಟ–ಉಪಚಾರದ ಬಗ್ಗೆ ಬಹಳ ಜಾಗ್ರತೆಯಿಂದ ಇರಬೇಕು, ಮನೆಯಿಂದ ಊಟ ತರದೆ ಇಲಿಯೇ ಮಧ್ಯಾಹ್ನ ಊಟವನ್ನೂ ನನ್ನ ಜೊತೆಯಲ್ಲೆ ಮಾಡಬೇಕು, ಎನ್ನುತ್ತಿದ್ದರು. ಅಲ್ಲದೆ ದಿನಕ್ಕೆ ಎರಡು ಮೂರು ಸಾರಿ ಸೈಕಲ್ ಮೇಲೆ ಬಿಸಿಲಲ್ಲಿ ಬರಬೇಡಿ, ಎಂದು ಎಷ್ಟೋ ಸಾರಿ ಹೇಳಿದರು. ಆದರೂ ಸಹ ನಾನು ಸಮಿತಿಯಿಂದ ೨ ಮೈಲು ದೂರವಿರುವ ನನ್ನ ಮನೆಗೆ ಹೋಗಿ ಬರುವುದನ್ನು ಬಿಡಲಿಲ್ಲ. ನನ್ನ ಅರೋಗ್ಯವೂ ಸಹ ಕೆಟ್ಟುಹೋಗಿ ಅಶಕ್ತನಾದೆನು. ಒಂದು ದಿವಸ ಅವರು ಸಮೀಪ ಕರೆದು, “ಇನ್ನು ಮೇಲೆ ನೀವು ಊಟದ ಸಲುವಾಗಿ ಮಧ್ಯಾಹ್ನ ಮನೆಗೆ ಹೋಗಬೇಡಿರಿ. ಇಲ್ಲಿಯೇ ಶ್ರೀ ರಾಮಚಂದ್ರ ಭಟ್ಟರ ಹತ್ತಿರ ನೀವೇ ಮಾಡಿಸಿಕೊಳ್ಳುವ ವ್ಯವಸ್ಥೆ ಮಾಡಿಕೊಳ್ಳಿ. ನೀವು ಮಧ್ಯಾಹ್ನದ ಊಟದ ವ್ಯವಸ್ಥೆ ಮಾಡಿಕೊಳ್ಳದ ವಿನಾ ನಾನು ಆಹಾರ ತೆಗೆದುಕೊಳ್ಳುವುದಿಲ್ಲ” ಎಂದು ನನ್ನ ಮೇಲೆ ಸತ್ಯಾಗ್ರಹ ಮಾಡಿದರು! ಉಪಾಯವಿಲ್ಲದೆ, ಮನೆಯಿಂದ ಅನ್ನ ಕಳಿಸಿ ಕೊಳ್ಳಲು ಸಾರು, ಹುಳಿ ಅಥವಾ ಪಲ್ಯೆ, ಮಜ್ಜಿಗೆ ಇತ್ಯಾದಿಗಳನ್ನು ತರುವುದು, ಅನ್ನಕ್ಕೆ ಮಾತ್ರ ಮನೆಯಿಂದ ಅಕ್ಕಿಯನ್ನು ತಂದು ಮಾಸ್ತರರ ಬಗ್ಗೆ ಬೇಯಿಸತಕ್ಕ ಕುಕ್ಕರಿನಲ್ಲಿ ಅಕ್ಕಿತೊಳೆದು ಬೇಯಿಸಲು ಶ್ರೀ ರಾಮಚಂದ್ರ ಭಟ್ಟರ ಕಡೆಗೆ ಪ್ರತಿ ದಿನವೂ ಕೊಡುವುದು, ಹೀಗೆ ಮಾಡಿದೆ. ಬಿಸಿ ಬಿಸಿ ಊಟಮಾಡಿ ನನ್ನ ಆರೋಗ್ಯವೂ ಸುಧಾರಿಸಿತು ಮತ್ತು ವಿಶ್ರಾಂತಿಯೂ ಸಿಗುತ್ತಿತ್ತು.

ಸಮಿತಿಯಿಂದ ಅವರಿಗೆ ನೂಲುತೆಗೆಯಲು ಹಂಜಿ ಬೇಕಾದಲ್ಲಿ ಮತ್ತು ಒಂದು ಗೇಣು ಬಟ್ಟೆ ಬೇಕಾದಲ್ಲಿ ಅದರ ಕಿಮ್ಮತ್ತು ಎಷ್ಟು ಎಂದು ಹೇಳಿ ಸದ್ರಿ ರಕಮಿನ ಬಗ್ಗೆ ಬಿಲನ್ನು ತೆಗೆದುಕೊಳ್ಳಲು ಆಗ್ರಹಪಡಿಸುತ್ತಿದ್ದರು. ಒಂದಾನು ವೇಳೆ ಸದ್ರಿ ರಕಮನ್ನು ಏಕೆ ಅವರಿಂದ ತೆಗೆದುಕೊಳ್ಳಬೇಕು, ಎಂದು ಸುಮ್ಮನೆ ಇದ್ದರೆ ಆದಿನ ನನಗೆ ಗ್ರಹಚಾರ ಬಂತು ಎಂದು ತಿಳಿದುಕೊಳ್ಳಬೇಕು! ಯಾವುದೇ ಬಟ್ಟೆ ವ ಹಂಜಿ ಕೊಟ್ಟ ಬಗ್ಗೆ ಪಾವತಿಯನ್ನು ಪಡೆದು ರಕಮನ್ನು ಕೊಡುತ್ತಿದ್ದರು. ಅವರು ತಮ್ಮ ಬಗ್ಗೆ ಕೊಂಡ ವಸ್ತುಗಳಿಗೆ ಸಮಿತಿಯಲ್ಲಾಗಲೀ ಅಥವಾ ಬೇರೆ ಕಡೆ ಆಗಲಿ ರಕಮನ್ನು ಕೊಟ್ಟ ಪಾವತಿ ಪಡೆಯಲೇ ಬೇಕಾಗುತ್ತಿತ್ತು. ಕಾರಣ ತಮ್ಮ ಖರ್ಚಿನ ಬಗ್ಗೆ ಸ್ವತಃ ಲೆಕ್ಕವಿಡುತ್ತಿದ್ದರು. ತಮ್ಮ ಆರೋಗ್ಯ ಹೇಗಿದೆ ಎಂದು ಕೇಳಿದಲ್ಲಿ ಅವರು ಸಿಟ್ಟಿಗೇಳುತ್ತಿದ್ದರು. “ಈ ರೀತಿ ಉಪಚಾರದ ಮಾತನಾಡ ಬೇಡಿರಿ”, ಎಂದು ಹೇಳುತ್ತಿದ್ದರು. ಬೇರೆಯವರ ಆರೋಗ್ಯ ಮತ್ತು ಹಿತ

ಚಿಂತನೆ ಅವರು ಮಾಡುತ್ತಿದ್ದರೇ ವಿನಾ ತಮ್ಮ ಆರೋಗ್ಯದ ಬಗ್ಗೆ ಯಾರೂ ಏನೂ ಮಾತನಾಡುವಂತಿಲ್ಲ.

ಚಿಕ್ಕ ವಯಸ್ಸಿನಲ್ಲಿ ತಂದೆ ತಾಯಿಗಳನ್ನು ಕಳೆದುಕೊಂಡು ಯಾವ ಮಾರ್ಗವನ್ನೂ ಕಾಣದೆ ಕೊನೆಗೆ ಪೂಜ್ಯ ನಾಯಕ ಮಾಸ್ತರರಂಥವರ ಸಂಪರ್ಕ ಮತ್ತು ಮಾರ್ಗದರ್ಶನ ಆಶೀರ್ವಾದಗಳಿಂದ ನಾನು ಮಾನವನಾದೆನು. ಪೂಜ್ಯ ನಾಯಕ ಮಾಸ್ತರು ನನ್ನನ್ನು ಮತ್ತು ನನ್ನ ಮಕ್ಕಳು, ಕುಟುಂಬ ಇವರೆಲ್ಲರ ಆರೋಗ್ಯದ ಬಗ್ಗೆ, ಶ್ರೇಯಸ್ಸಿನ ಬಗ್ಗೆ ಸದಾಕಾಲ ಚಿಂತನೆ ಮಾಡುತ್ತಿದ್ದರು. ಪ್ರತಿದಿನ ಸಮಿತಿಗೆ ಬಂದ ಕೂಡಲೆ ಮನೆಯಲ್ಲಿ ಹೇಗಿದ್ದಾರೆ, ಮಕ್ಕಳು ಹೇಗಿದ್ದಾರೆ, ಎಂದು ಕೇಳುತ್ತಿದ್ದರು.

ಅಂಥ ಪೂಜ್ಯ ನಾಯಕ ಮಾಸ್ತರು ನಮ್ಮೆಲ್ಲರನ್ನು ಬಿಟ್ಟು ಇಹಲೋಕವನ್ನು ತ್ಯಜಿಸಿಹೋದರು. ಅವರ ನೆನಪು ಸದಾಕಾಲ ಇರುತ್ತದೆ.

# ಜನತಾ ಜನಾರ್ದನನ ಸೇವಕ

## ಪದ್ಮನಾಭ ಸುಬ್ರಾವ ಕಾಮತ

೧೯೩೪ರ ಮಾರ್ಚ್ ತಿಂಗಳಲ್ಲಿ ಗಾಂಧೀಜಿ ಕಾರವಾರಕ್ಕೆ ಬಂದಾಗ, ಮೂರು ವ್ಯಕ್ತಿಗಳ ಮೂಲಕ ಕಾರವಾರ ಜಿಲ್ಲೆಯ ಪರಿಚಯವು ಪ್ರಪ್ರಥಮವಾಗಿ ತಮಗೆ ಆಯಿತು, ಎಂದರು. ಆ ವ್ಯಕ್ತಿಗಳು ಯಾರೆಂದು ಅವರೇ ಹೇಳಿದರು. ೧. ತಿಮ್ಮಪ್ಪ ಮಾಸ್ತರ, ೨. ಕು॥ ಪ್ರೇಮಾ ಕಂಟಕ, ೩. ಸುಬ್ಬರಾವ ನಾಡಕರ್ಣಿ, ಆ ಪೈಕಿ ಮೊದಲ ಇಬ್ಬರು ಸಾಬರಮತಿ ಆಶ್ರಮದಲ್ಲಿಯೇ ಇದ್ದವರು. ತಿಮ್ಮಪ್ಪ ಮಾಸ್ತರರು ನಮ್ಮಲ್ಲಿ ನಾಯಕ ಮಾಸ್ತರರೆಂದೇ ಪರಿಚಿತರು. ನಮ್ಮಲ್ಲಿಯ ಮಾನ್ಯ ಮಾಸ್ತರರು ಇಬ್ಬರು: ನಾಯಕ ಮಾಸ್ತರ ಮತ್ತು ಹೊದಿಕೆ ಮಾಸ್ತರ. ಇಬ್ಬರೂ ಅಖಂಡ ಬ್ರಹ್ಮಚಾರಿಗಳು. ಗಾಂಧೀ ತತ್ತ್ವಪ್ರಣಾಲಿಯಲ್ಲಿ ತುಂಬಾ ನಿಷ್ಠಾವಂತರು, ಜನತಾ ಜನಾರ್ದನನ ಸೇವಾಭಕ್ತರು. ಯಥಾರ್ಥನಾಮ ಮಾಸ್ತರರು. ಶಿಸ್ತಿನ ಶಿಕ್ಷಕರು. ಹೊದಿಕೆಯವರು ಇಬ್ಬರಲ್ಲೂ ಹೆಚ್ಚಿನ ವ್ಯವಹಾರ ನಿಪುಣರು. ಆದರೂ ವಿರಕ್ತರು. ಆದರೆ ನಾಯಕ ಮಾಸ್ತರರು ಹೆಚ್ಚಾಗಿ ಕೇವಲ "ಮಾಸ್ತರರೇ" ಆಗಿ ಉಳಿದರಲ್ಲದೆ ಎಂದೂ ನಾಯಕರಾಗಲೂ ಹವಣಿಸಲೂ ಇಲ್ಲ, ಹಾತೊರೆಯಲೂ ಇಲ್ಲ. ಸೇವಾಧರ್ಮ ಪ್ರಚಾರಕರಾಗಿಯೇ ಅವರು ಉಳಿದರು.

ಇಡೀ ಜೀವನದಲ್ಲಿ ಈ ತಪಸ್ವಿಯು ಮೋಹನದಾಸರ ದಾಸರಾಗಿ ಉಳಿದರು. ಗಾಂಧೀ ವಿನೋಬಾರ ಶಾಂತಿಸೇನೆಯ ಬಲ್ಲಾಳರು ಬಂಟರು ಇವರು. ಜನತಾ ಸೇವೆಯ ಸಂಪೂರ್ಣ ನಿಷ್ಠೆ, ಈ ಸೇವೆಗಾಗಿಯೇ ಸಂಪೂರ್ಣ ತ್ಯಾಗ ಇವರದು. ಆದರೆ ಉತ್ತಮ ಸೇವಕರೇ ಉತ್ತಮ ನಾಯಕರಾಗಬೇಕೆಂಬ ಗಾಂಧೀ ವಿನೋಬಾರ ಉದ್ದೇಶವು ಸಾಕಷ್ಟು ಇವರಲ್ಲಿ ನೆಲೆಗೊಳ್ಳಲಿಲ್ಲವಾದ್ದರಿಂದ ಕೊನೆವರೆಗೆ ಅವರು ಶುಧ್ಧಾಂತಃಕರಣದ "ಮಾಸ್ತರ"ರಾಗಿಯೇ ಉಳಿದರು. ಯಜಮಾನರಾಗಲಿಲ್ಲ; ನಾಯಕರೂ ಆಗಲಿಲ್ಲ. ಸ್ವಾತಂತ್ರ್ಯೋತ್ತರ ಕಾಲದಲ್ಲಿ ಇವರು "ಸ್ವರಾಟ್" ಆಗಿಯೇ ಉಳಿದರು. ರಾಷ್ಟ್ರಘಟನೆ, ರಾಜ್ಯಸಂಘಟನೆ, ವಿಧಿವಿಧಾನ ಸಾಧನೆಗಳು ಇವರ ದೃಷ್ಟಿಯಲ್ಲಿ ಗಾಂಧೀಜಿಯವರ ರಾಮರಾಜ್ಯದ ಚೌಕಟ್ಟಿನಲ್ಲಿ ಬರುವಂತಿಲ್ಲವಾದುದ ರಿಂದ, "ಸ್ವಸ್ತಿಸಾಮ್ರಾಜ್ಯಂ"ಎಂಬ ಮಂತ್ರದಂತೆ ಇವರು ಸಮ್ರಾಟರಾಗಲು ಮುಂದೆ ಬರಲಿಲ್ಲ. ಈ ರಾಮ ಭಕ್ತ ಮಾರುತೀರಾಯರು ಕೃಷ್ಣಾವತಾರವನ್ನು ಎಂದೂ ಒಪ್ಪಿಕೊಳ್ಳಲು ಬಧ್ಧರಾಗಲಿಲ್ಲ. ಕೃಷ್ಣನ ಗೀತಾಭ್ಯಾಸದಲ್ಲಿ ಇವರು

ಆಸಕ್ತರಿದ್ದರೂ ನಿಷ್ಕಾಮಕರ್ಮವು ತ್ಯಾಗಕ್ಕೂ ಭೋಗಕ್ಕೂ ಸರಿಯಾಗಿಯೇ ಹೊಂದಿಕೊಳ್ಳತಕ್ಕದ್ದೆಂದು ಅವರು ತಿಳಿದುಕೊಳ್ಳಲಿಲ್ಲವೆಂದು ನನ್ನ ನಮ್ರ ಅಭಿಪ್ರಾಯ. ಯುಗಧರ್ಮದ ಅರಿವಿನಲ್ಲಿ ಇವರು ಅನಾಸಕ್ತಿ ತೋರಿದ್ದರಿಂದ ಇವರ ತಪಸ್ವೀ ಜೀವನಕ್ಕೆ ಫಲವೂ ಪರಿಪೂ ಪ್ರಾಪ್ತವಾಗಲಿಲ್ಲ.

೧೯೫೩ರಲ್ಲಿ ಶ್ರೀ ಹುಕ್ಕೇರಿಕರ್ ರಾಮರಾಯರು (ಆಗ ಮುಂಬೈ ವಿಧಾನ ಪರಿಷತ್ತಿನ ಅಧ್ಯಕ್ಷರೂ ಖಾದಿ ಗ್ರಾಮೋದ್ಯೋಗ ಮಂಡಳದ ಅಧ್ಯಕ್ಷರೂ ಆಗಿದ್ದರು) ಕಾರವಾರಕ್ಕೆ ಬಂದಾಗ ತಮ್ಮ ಭಾಷಣದಲ್ಲಿ, ಕರ್ನಾಟಕದ ಬಾರ್ಡೋಲಿಯೆನಿಸಿದ ಈ ಜಿಲ್ಲೆಯಲ್ಲಿ ಸ್ವರಾಜ್ಯ ಬಂದ ನಂತರವೂ ಅದೇ ಹಿಂದಿನ ಕಡಲೂ ಕಾಡೂ ಕಾಣಸಿಗುತ್ತವೆ. ನಿಸರ್ಗ ಸಂಪತ್ತಿಯನ್ನು ಸಹಾ ಮಾನವ ಜೀವನದ ಸುಖ ಸಮೃದ್ಧಿಗೆ ಉಪಯೋಗಿಸಿಕೊಂಡು ಹೊಸ ಯುಗವನ್ನು ಕಟ್ಟಲು ಪ್ರಯತ್ನಿಸಿದ್ದು ಈ ಜಿಲ್ಲೆಯಲ್ಲಿ ಕಾಣೆಸದು. ಇದಕ್ಕೆ ಈ ಜಿಲ್ಲೆಯ ಮುಖಂಡರು ಔದಾಸಿನ್ಯ ಕಾರಣವೇ ? ಎಂದರು. ನಾನು ಈ ಬಗ್ಗೆ ಅವರಲ್ಲಿ ಮಾತನಾಡುತ್ತ, "It is true that you all have made politics a profession whereas we have failed in it. Renunciation was ours, both prior and after independence. Leadership was yours both in independence struggle and post-independence struggle for power and suceess in them," ಎಂದು ಬಿಟ್ಟೆ. ಅವರು ಇದರಿಂದ ನೊಂದಂತೆ ಕಂಡಿತು. ನಮ್ಮಲ್ಲಿ ಇರುವ ರಾಜಕೀಯ ಸಂಪ್ರದಾಯ ಪರಂಪರೆಯ ಸಾತತ್ಯದ ಅಭಾವವೇ ಇವಕ್ಕೆ ಕಾರಣ. ನಮ್ಮಲ್ಲಿ ನಡೆದ ಸತ್ಯಾಗ್ರಹ ಯಜ್ಞದ ಮುಖಂಡತ್ವ ಪಡೆದು ಕೆಲವರು ಮುಂದೆ ಅನೇಕ ಗಣ್ಯ ರಾಜಕೀಯ ಸ್ಥಾನಮಾನ ಪಡೆದರು. ಆದರೆ ನಮ್ಮ ಜಿಲ್ಲೆಗೆ ನಮ್ಮವರೇ ಆದ ಸಂಸತ್ ಸದಸ್ಯರೂ ಸಿಗದಾದರು. ನಮ್ಮಲ್ಲಿನ ಧೀರ ಸತ್ಯಾಗ್ರಹಿಗಳಿಗೆ ಕೊನೆಗೆ ಸಂನ್ಯಾಸ ಮಾತ್ರ ಬಂತು, ಎಂದು ವಿವರಿಸಿದೆ. ನಮ್ಮ ತ್ಯಾಗಕ್ಕೆ ಅನುಗುಣವಾಗಿ ಅಭಿವೃದ್ಧಿ ಕಾರ್ಯಗಳೂ ಸಿಗುವಂತೆ ಮಾಡುವ ಯೋಗ್ಯ ಸ್ಥಾನಮಾನದ ರಾಜಕೀಯ ನೇತೃತ್ವ ನಮಗೆ ಒದಗಲಿಲ್ಲ, ಹೀಗೆ ನಾನು ಹೇಳುವಾಗ ಕಣ್ಣ ಮುಂದೆ ಇದ್ದ ನಮ್ಮ ಜಿಲ್ಲೆಯ ವ್ಯಕ್ತಿಗಳೆಂದರೆ ನಾಯಕ ಮಾಸ್ತರರು, ಸುಬ್ಬರಾವ್ ಹಳದೀಪುರ್‌ಕರರು ಹಾಗೂ ಶಿವರಾಮ ಶಾಸ್ತ್ರಿಗಳು. ಕೊನೆಯವರು ವಿಧಾನ ಸಭೆಯತನಕ ಮುಟ್ಟಿದ್ದರೂ ವೃದ್ಧಾಪ್ಯದ ಮೂಲಕ ರಾಜಕೀಯದಲ್ಲಿ ಮುಂದುವರಿಯಲಿಲ್ಲ. ಹಳದೀಪುರ್‌ಕರರು ಸ್ವಾತಂತ್ರ್ಯ ಪ್ರಾಪ್ತಿಗೂ ಮೊದಲೇ ತೀರಿಕೊಂಡರು. ಉತ್ತಮ ಚಾರಿತ್ರ್ಯದ ತ್ಯಾಗಮೂರ್ತಿಯಾದ ನಾಯಕ ಮಾಸ್ತರರೂ ರಾಜಕಾರಣದ್ವಾರಾ ವಿಧಾಯಕ ಕಾರ್ಯಮಾಡಲು ಮುಂದಾಗಲಿಲ್ಲ. ೧೯೪೭ರಲ್ಲಿ ಅವರು ಜಿಲ್ಲಾ ಕಾಂಗ್ರೆಸ್ ಕಮಿಟಿಯ ಅಧ್ಯಕ್ಷಸ್ಥಾನ ಸ್ವೀಕರಿಸಿ

ದರೂ ಒಬ್ಬಿಬ್ಬ ಅತೃಪ್ತ ವ್ಯಕ್ತಿಗಳು ಅವರನ್ನು ವಿರೋಧಿಸಹತ್ತಲು ಅವರು ಹಿಂದು ಮುಂದೆನೋಡದೇ ರಾಜೀನಾಮೆ ಇತ್ತರು. ಕಾಂಗ್ರೆಸ್ಸಿನಿಂದ ಪೂರ್ಣವಾಗಿ ಮೈ ತೆಗೆದುಕೊಂಡರು. ಗಾಂಧೀಜಿಯವರು ಕಾಂಗ್ರೆಸ್ ಮುಖಂಡತ್ವಕ್ಕೆ ಸಾಂಪ್ರದಾಯಿಕ ವಾಗಿ ರಾಜೀನಾಮೆ ಕೊಟ್ಟಿದ್ದರೂ ಸ್ವಾತಂತ್ರ್ಯ ಪ್ರಾಪ್ತಿಯವರೆಗೆ ಕಾಂಗ್ರೆಸ್ಸಿನ ನಿಜವಾದ ನಿಯಂತ್ರಣ ಅವರ ಕೈಯಲ್ಲೇ ಇತ್ತು. ನಾಯಕ ಮಾಸ್ತರರು ಅವರನ್ನು ಅನುಕರಿಸಲಿಕ್ಕೆ ಹೋಗಿ ಕಾಂಗ್ರೆಸ್ಸಿನಿಂದ ಪೂರ್ಣ ಅಲಿಪ್ತರಾಗಿ ಉಳಿದರು. ಮುಂದೆ ರಾಜಕಾರಣದಲ್ಲಿ ಅವರ ಯಾವುದೇ ಕೈವಾಡ ಉಳಿಯದೇ, ಅವರ ತಪೋಬಲ, ತ್ಯಾಗಬಲ ಜಿಲ್ಲೆಯ ಆಗಿನ ಬೇರೆ ಯಾವುದೇ ಮುಂದಾಳುಗಳಿಗೆ ಇರದೇ ನಮ್ಮ ಜಿಲ್ಲೆ "ಅತೋಭ್ರಷ್ಟಃ ತತೋಭ್ರಷ್ಟಃ" ಆಯಿತು. ಹೀಗಾಗಲು ನಮ್ಮ ಜಿಲ್ಲೆಯ ಕೆಲವು ಸಂಕುಚಿತ ದೃಷ್ಟಿಯ ವ್ಯಕ್ತಿಗಳ ವೈಯಕ್ತಿಕ ಅಸಹನೆಗಳೂ ಕಾರಣ.

ಗಾಂಧೀಜಿ ಮತ್ತು ವಿನೋಬಾಜಿಯವರ ಪಟ್ಟಶಿಷ್ಯರಾದ ಮಾಸ್ತರರು ಪರಿಶುದ್ಧ ಅಂತಃಕರಣದವರು. ಕರ್ತವ್ಯನಿಷ್ಠೆಯು ಇವರಲ್ಲಿ ಪರಾಕೋಟಿಯದು. ಪರಧನ, ಅಧಿಕಾರ ಧನ ಇವುಗಳಿಂದ ಉತ್ಕಟ ನಿರ್ಲಿಪ್ತತೆ ಇವರದು. ಸಾಧನ ಶುಚಿತ್ವದಲ್ಲಿ ಇವರು ಅತೀವ ಉತ್ಕಂಠಿತರು. ಸೇವಾಭಾವ ಇವರ ಧರ್ಮ. ಹರಿಜನೋದ್ಧಾರ ಕಾರ್ಯದಲ್ಲಿ ಅತೀವ ಶ್ರದ್ಧೆ ಉಳ್ಳವರು. ಗ್ರಾಮೋದ್ಯೋಗ, ರಾಷ್ಟ್ರೀಯ ಶಿಕ್ಷಣ, ಪಾನಪ್ರತಿಬಂಧ ಮುಂತಾದ ಗಾಂಧೀಜಿಯವರ ವಿಧಾಯಕ ಕಾರ್ಯಗಳಲ್ಲಿ ಪೂರ್ಣ ಆಸ್ಥೆ. ಗಾಂಧೀಜಿಯವರು ಹಾಕಿಕೊಟ್ಟ ಹನ್ನೊಂದು ವ್ರತಗಳನ್ನು ಉತ್ಕಟ ರೀತಿಯಿಂದ ಪ್ರತಿಪಾಲಿಸಿದರು. ಬಿಹಾರ, ಆಸಾಮ ರಾಜ್ಯ ಗಳಲ್ಲಿ ಸಂಚಾರ ಮಾಡಿ ಗಾಂಧೀ ತತ್ತ್ವಪ್ರಣಾಲಿಯನ್ನು ಬಿತ್ತರಿಸುವಾಗ ಕಳಕೊಂಡ ದೇಹಸ್ವಾಸ್ಥ್ಯ ಕೊನೆವರೆಗೂ ಅವರಿಗೆ ತೊಂದರೆಕೊಡುತ್ತ ಇತ್ತು. ಪೌಷ್ಟಿಕ ಆಹಾರದ ಬಗ್ಗೆ ಗಾಂಧೀಜಿ ಎಂದೂ ತಾತ್ಸಾರ ಮಾಡಿರಲಿಲ್ಲವಾದರೂ ನಾಯಕ ಮಾಸ್ತರರಿಗೆ ಅದರ ತ್ಯಾಗವೂ ಅವಶ್ಯವೆನಿಸಿತು. ಇದರ ಪರಿಣಾಮ ದೇಹಸ್ವಾಸ್ಥ್ಯದ ನ್ಯೂನತೆ. ಇದರಿಂದ ಮಹತ್ಸಾಧನೆಗೆ ಬೇಕಾದ ದೇಹಸ್ವಾಸ್ಥ್ಯದಿಂದ ಲಭಿಸುವ ಉತ್ಸಾಹ ಇವರಿಗೆ ಇಲ್ಲದಾಯಿತು.

ಇಡೀ ಜೀವಮಾನದಲ್ಲಿ ವ್ರತಸ್ಥರಾಗಿ ಉಳಿದ ಅವರ ಜೀವನದ ಕೊನೆಯ ವರ್ಷಗಳಲ್ಲಿ ಆಧ್ಯಾತ್ಮಿಕ ಒಲವು ಪಕ್ವವಾಗುತ್ತ ಹೋಯಿತು. ಅಮೂಲ್ಯ ಆಧ್ಯಾತ್ಮಗ್ರಂಥಗಳು ಅವರಿಂದ ರಚಿತವಾದವು. ಆಶ್ರಮವಾಸಿಗಳಾದ ಅವರಲ್ಲಿ ಕಂಡು ಬಂದ ಸಾತ್ವಿಕತೇಜ, ಮುಗ್ಧವೃತ್ತಿ, ನಿರಾಡಂಬರ ಜೀವನ, ಸಾತ್ವಿಕ ಸಮಾಧಾನ, ನಿವೃತ್ತಿಮಾರ್ಗ, ತತ್ತ್ವಾನ್ವೇಷಣೆ ಇವೆಲ್ಲವೂ ಅವರ ಆಧ್ಯಾತ್ಮಿಕ ಜೀವನದ ಪ್ರತಿಬಿಂಬವಾಗಿದ್ದವು. ಕಾಯಕವೇ ಕೈಲಾಸವಾಗಿ ಅವರಿಗೆ ಕಂಡಿತು.

ಅವರು ಬಾಲ್ಯದಾರಭ್ಯ ಅನುಭವಿಸಿದ ಕಷ್ಟಕಾರ್ಪಣ್ಯಗಳು, ಕೌಟುಂಬಿಕ ಆಪ್ತಭಾವದ ಅಭಾವ ಇವುಗಳಿಂದ ಸಾತ್ವಿಕ ವಿಚಾರಗಳಿದ್ದರೂ ಪ್ರತ್ಯಕ್ಷದಲ್ಲಿ ನಾಯಕ ಮಾಸ್ತರರಿಗೆ ದಿವ್ಯಜೀವನದ ಸಂಗಾತ ಭವ್ಯ ಜೀವನ ಅನುಭವಿಸಲು ಶಕ್ಯವಾಗಲಿಲ್ಲ. ಇದು ನಮ್ಮೆಲ್ಲರ ದೌರ್ಭಾಗ್ಯ ಎನ್ನುವುದೇ ಈ ಲೇಖನದ ತಿರುಳು.

ಈ ಮಹಾವ್ಯಕ್ತಿಯ ವಿಷಯದಲ್ಲಿ ನನಗೆ ಅತೀವ ಪೂಜ್ಯಭಾವ. ಅವರಿಗೆ ನನ್ನ ಅನಂತ ಪ್ರಣಾಮಗಳು. ನನ್ನ ಕೋತಿಬುದ್ಧಿಗೆ ನಿಲುಕದ ಅವರ ಮಹಾತ್ಮ್ಯಕ್ಕೆ ಯಾವುದೇ ರೀತಿಯಿಂದ ಕುಂದು ತರುವ ಎಳ್ಳಷ್ಟೂ ಉದ್ದೇಶ ನನ್ನದಿಲ್ಲ. ಅವರ ತಪೋಬಲ, ತ್ಯಾಗ, ಸೇವಾನಿಷ್ಠೆಗಳ ಪರಿಣಾಮವು ಅನುರೂಪ ವಾಗಿ ನಮಗೆ ಸಿಗಲಿಲ್ಲವೆನ್ನುವ ನೈರಾಶ್ಯ ನನ್ನಲ್ಲಿ ಕಂಡು ಬಂದರೆ ಓದುಗರು ಕ್ಷಮಿಸಬೇಕು.

# "ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು" ಗ್ರಂಥದಲ್ಲಿ ತಿಮ್ಮಪ್ಪ ನಾಯಕರ ಬಗ್ಗೆ ಉಲ್ಲೇಖ

ಪುಟ್ಟೇಗೌಡ

೧. **ರಂಗನಾಥ ದೇವಪ್ಪ ಶಾನುಭಾಗ :** ಸಿರಸಿಯಲ್ಲಿ ಮಡಗಾಂವ್‌ಕರ್ ಬಂಧುಗಳು, ಮತ್ತು ವಾಮನ ಹೊದಿಕೆ, ಟಿ.ಎಸ್. ನಾಯಕ್ (ಕಾಂಗ್ರೆಸ್ಸಿನ ಪ್ರಮುಖ ರಾಗಿ) ಅಗ್ರಗಣ್ಯರಾಗಿದ್ದರು. ಟಿ. ಎಸ್. ನಾಯಕರು ಸರ್ವೋದಯ ನಾಯಕರಾಗಿದ್ದು ಇಂದಿಗೂ ಅಂಕೋಲೆಯಲ್ಲಿ ಕಾರ್ಯತತ್ಪರರಾಗಿದ್ದಾರೆ. ಅವರು ಸಕಲ ವಿಧದಲ್ಲೂ ಆದರ್ಶ ಗಾಂಧೀವಾದಿಗಳಾಗಿದ್ದಾರೆ. ಮೈಸೂರು ಸರ್ಕಾರವು ಇತ್ತೀಚೆಗೆ ಪಾನ ಪ್ರತಿಬಂಧ ರದ್ದುಮಾಡಿದಾಗ ಅವರು ಇದನ್ನು ಪ್ರತಿಭಟಿಸಲು ೨೧ ದಿನ ನಿರಶನ ಹೂಡಿದ್ದರು. ಅವರು ಜಿಲ್ಲೆಯ ಮೊದಲ ರಾಜಕೀಯ ಕೈದಿಗಳಲ್ಲಿ ಒಬ್ಬರಾಗಿದ್ದು ಆ ಕಾಲದಲ್ಲಿ ಕತ್ತಲ ಕೋಣೆಯಲ್ಲಿ ಏಕಾಂಗಿಯಾಗಿ ಬಂಧಿತರಾಗಿದ್ದರು. ಅವರು ಸರ್ವವಿಧದಲ್ಲೂ ನಿಜವಾದ ಸತ್ಯಾಗ್ರಹಿಯಾಗಿದ್ದು ಎಲ್ಲೆಡೆ ಗೌರವಾನ್ವಿತ ರಾಗಿದ್ದಾರೆ. (ಪುಟ ೨೮)

೨. **ಹರಿ ಅನಂತ ಪೈ :** ಮುಂದೆ ೧೯೪೪ರಲ್ಲಿ ಅಂಕೋಲೆಯಲ್ಲಿ ನಾಯಕ ಮಾಸ್ತರರ ಜೊತೆ ಉತ್ತರ ಕನ್ನಡ ಜಿಲ್ಲಾ ಗ್ರಾಮ ಸೇವಾ ಸಮಿತಿ ಸ್ಥಾಪಿಸಿದೆ. (ಪುಟ ೪೫)

ತಿಮ್ಮಪ್ಪ ನಾಯಕ ಮಾಸ್ತರರ ತ್ಯಾಗಮಯ ಜೀವನವು ನನ್ನ ಮೇಲೆ ಬೀರಿದ ಪ್ರಭಾವವನ್ನು ಇಲ್ಲಿ ಜ್ಞಾಪಿಸದೆ ಇರಲಾರೆ. (ಪುಟ ೪೫-೪೬)

೩. **ಬೋಳೆ ಬೊಮ್ಮಯ್ಯ ನಾಯ್ಕ :** ನಮ್ಮ ಜಿಲ್ಲೆಯ (ಉತ್ತರ ಕನ್ನಡ) ತಿಮ್ಮಪ್ಪ ನಾಯಕ ಇವರು ಸಿರಸಿಯಲ್ಲಿ ಹಾಯಸ್ಕೂಲ್ ಮಾಸ್ತರರಾಗಿದ್ದು ಆ ಹುದ್ದೆಗೆ ರಾಜೀನಾಮೆ ಕೊಟ್ಟು ಅಂಕೋಲ ತಾಲ್ಲೂಕಿನ ಹಳ್ಳಿ, ನಗರಗಳಲ್ಲಿ ಖಾದಿ ಯನ್ನು ಹೆಗಲ ಮೇಲೆ ಹೊತ್ತುಕೊಂಡು ಪ್ರಚಾರ ಮಾಡುವುದು ೧೯೨೯ರಲ್ಲಿ ನನ್ನ ಕಣ್ಣಿಗೆ ಬಿತ್ತು. ಅವರ ಸೇವೆ ನೋಡಿ ಅವರ ಮೇಲೆ ಭಕ್ತಿ ಹುಟ್ಟಿತು. (ಪುಟ ೪೬)

**ಶಂಕರ ದತಾತ್ರೇಯ ದೇಸಾಯಿ :** ದಾಂಡಿಯಲ್ಲಿ ಗಾಂಧೀಜಿಯವರು ಕಾಯಿದೆ ಭಂಗ ಚಳುವಳಿಯನ್ನು ಪ್ರಾರಂಭಿಸಿದ ಮೇಲೆ ಅಂಕೋಲೆಯಲ್ಲಿ ಉಪ್ಪಿನ ಕಾಯಿದೆಯನ್ನು ಮುರಿಯಲು ಸಿದ್ದಾಪುರದಿಂದ ತಿಮ್ಮಪ್ಪ ಎಸ್. ನಾಯಕ, ಹೊನ್ನಾವರದಿಂದ ಎಂ. ಪಿ. ನಾಡಕರ್ಣಿ ಹಾಗೂ ಇಲ್ಲಿಯವರೇ ಆದ ಲಕ್ಷ್ಮಣ ವಾಮನ ಕಾಮತ ಇವರು ಸಿದ್ಧರಾದರು. ಇವರು ಅಂಕೋಲೆಯ ಮೊದಲಿನ ಸತ್ಯಾಗ್ರಹಿಗಳು. ಒಂದು ದಿನ ಇವರು ಸಮುದ್ರದ ನೀರನ್ನು ತಂದು ಅದರಿಂದ ಬೆಂಥಿ ಬಜಾರದ ಮೈದಾನದಲ್ಲಿ ಉಪ್ಪನ್ನು ತಯಾರಿಸಿ, ಮಾರಾಟ ಮಾಡಿ ಉಪ್ಪಿನ ಕಾಯಿದೆಯನ್ನು ಮುರಿದರು. ಪೋಲಿಸರು ಇವರನ್ನು ಬಂಧಿಸಿ ಅವರ ಮೇಲೆ ಖಟ್ಲೆ ಹಾಕಿದರು.

(ಪುಟ ೫೪)

೫. **ಸಾಂತು ಬೊಮ್ಮಯ್ಯ ನಾಯಕ :** ೧೯೪೨ರ ಅಗಸ್ಟ್ ೯ರಂದು ನಾಯಕ ಮಾಸ್ತರರ ಜೊತೆ ನಾನು, ವೆಂಕಟರಮಣನಾಯಕ, ಗೋಪಾಲ ಹೆಗಡೆ, ಯಶವಂತ ಶಾನುಭಾಗ ಹೀಗೆ ಕುಮಟಾ ಊರಲ್ಲಿ ಸಂಜೆ ಫೇರಿ ಹೊರಡಿಸಿ ಶಾಂತೇರಿ ಕಾಮಾಕ್ಷಿ ದೇವಾಲಯದ ಎದುರಿಗೆ ನಾಯಕ ಮಾಸ್ತರರ ಭಾಷಣ ಆಯಿತು. ಅವರ ಬಂಧನ ಆಯಿತು. ಚಳವಳಿ ಮುಂದುವರಿಸುವ ಸಂದೇಶವನ್ನು ಡೈರಿ ಹಾಳೆಯಲ್ಲಿ ಮಾಸ್ತರರು ಬರೆದುಕೊಟ್ಟರು. ಇದರಂತೆ ಕಾರ್ಬನ್ ಹಾಕಿ ಕರಪತ್ರ ತಯಾರಿಸಿ ಪ್ರಚಾರ ಮಾಡಲು ತಿಳಿಸಿದರು. ನಾನು ಹಿಚ್ಕಡಕ್ಕೆ ಬಂದು ಸ. ಪ. ಗಾಂವಕರ, ದಯಾನಂದ ಪ್ರಭು, ವೆಂಕಟರಮಣ ನಾಯಕ ಸಗಡಗೇರಿ ಇವರಿಗೆ ತಿಳಿಸಿ ಅಂಕೋಲಾಕ್ಕೆ ಹೋದೆ. (ಪುಟ ೭೯)

೫. **ಗೋಪಾಲ ಶಿವ ಹೆಗಡೆ :** ಅಲ್ಲಿಯೇ ಇರುತ್ತಿದ್ದ (ಕುಮರಿ ಆಶ್ರಮ, ಪುದಲಿ) ತಿಮ್ಮಪ್ಪ ನಾಯಕ ಮಾಸ್ತರರನ್ನು ಕಾರವಾರ ಜಿಲ್ಲೆಗೆ ಕರೆದೊಯ್ದು ಈ ಕಾಯಿದೆಭಂಗಕ್ಕೆ (ಉಪ್ಪಿನ ಕಾಯಿದೆ ಭಂಗ) ಯೋಗ್ಯ ಸ್ಥಳವನ್ನು ನಿರ್ಣಯಿಸ ಬೇಕೆಂದು ನಿಶ್ಚಯಿಸಲಾಯಿತು. (ಪುಟ ೯೦)

ಇದರಲ್ಲಿ (ಉಪ್ಪಿನ ಕಾಯಿದೆ ಭಂಗದ ಪ್ರಚಾರ ಕಾರ್ಯಕ್ಕೆ ರಚಿಸಿದ ಅರುಣೋದಯ ಪಥಕದಲ್ಲಿ) ನಾಯಕ ಮಾಸ್ತರ, ಎಂ. ಪಿ. ನಾಡಕರ್ಣಿ, ವಿದ್ಯಾನಂದಜೀ, ಶಂಕರರಾವ್ ಗುಲವಾಡಿ, ಅನಂತ ಮಹಾಲೆ, ತಿಮ್ಮಣ್ಣ ಹೆಗಡೇಕಟ್ಟೆ, ಶ್ರೀಧರ ಕಿಣಿ ಮೊದಲಾದವರು ಮುಖ್ಯರಾಗಿದ್ದರು. (ಪುಟ. ೯೨)

೬. **ಕೃಷ್ಣಭಟ್ಟ ಪನ್ನಿ :** ಪ್ರಾಂತ್ಯದ ನಾನಾ ಭಾಗಗಳಿಂದ ಬಂದ (೧೯೨೩ ರಲ್ಲಿ) ಮುಂದಾಳುಗಳಲ್ಲಿ ಗಂಗಾಧರರಾವ್ ದೇಶಪಾಂಡೆ, ಡಾ॥ ನಾ. ಸು. ಹರ್ಡೀ

ಕರ, ಹನುಮಂತರಾವ್ ಕೌಜಲಗಿ, ಡಿ. ಕೆ. ಭಾರದ್ವಾಜ ಮುಂತಾದವರು ಹಾಗೂ ಜಿಲ್ಲೆಯ ನಾಯಕರಾದ ನಾಯಕ ಮಾಸ್ತರ, ಹೊದಿಕೆಮಾಸ್ತರ, ಶಂಕರ ಗುಲವಾಡಿ, ಗಣೇಶ ರಾಮ ಯಾಜೀ ಪ್ರಭೃತಿಗಳ ಭಾಷಣ ಮತ್ತು ಕಾರ್ಯಚಟುವಟಿಕೆಗಳನ್ನು ಮರೆಯುವಂತಿಲ್ಲ. (ಪುಟ ೧೧೬)

೮. **ಪಟ್ಟಣಶೆಟ್ಟಿ ಸಾಂತಯ್ಯ ಲಕ್ಷ್ಮಣ ಶಾನುಭಾಗ :** ಆ ಕಾಲದ (ಈ ಶತಮಾನದ ಮೂರನೇ ಮತ್ತು ನಾಲ್ಕನೇ ದಶಕದ) ಜಿಲ್ಲಾ (ಉತ್ತರ ಕನ್ನಡ) ಮುಖಂಡರೆಂದರೆ ಟಿ. ಎಸ್. ನಾಯಕ ಮಾಸ್ತರ, ವಾ. ಅ. ಹೊದ್ಕೆ, ಸುಬ್ರಾವ ರಾಮಚಂದ್ರ ಹಳದೀಪುರ್‌ಕರ, ಶಾಸ್ತ್ರಿ, ಕಲ್ಲಾಪುರ, ಹಳಿಯಾಳದ ಶಾಮರಾವ ಭದ್ರಿ, ಸಿರ್ಸಿಯ ಕೊಲ್ಲಾಳಿ ವಕೀಲ, ಹಳಕಾರ ವಕೀಲ, ಶಂಕರರಾವ್ ಗುಲವಾಡಿ, ಎಂ. ಪಿ. ನಾಡಕರ್ಣಿ, ಎಸ್. ಎನ್. ಕೇಶವೈನ್, ಕೀರ್ತನಕಾರ ಗೇರುಸೊಪ್ಪೆ ರಾಮ ಪೈ. (ಪುಟ. ೧೩೪)

೯. **ಗಣಪತಿ ಮಂಜಪ್ಪ ಭಂಡಾರಿ :** ೧೯೩೫ದ ರಿಂದ ಟಿ. ಎಸ್. ನಾಯಕ್ ಮಾಸ್ತರ್ ಅವರ ಹಿರಿಯ ನೇತೃತ್ವದಲ್ಲಿ ನಮ್ಮ ತಾಲೂಕಿನಲ್ಲಿ (ಕುಮಟ) ಕಾಂಗ್ರೆಸ್ ಸಂಘಟನೆಗಾಗಿ ಖಾದಿ, ಅಸ್ಪೃಶ್ಯತಾನಿವಾರಣೆಯ ಕಾರ್ಯ ಮಾಡಿರುತ್ತೇನೆ. (ಪುಟ ೧೪೫)

೧೦. **ಸುಬ್ರಾಯ ಪರಮೇಶ್ವರ ಭಟ್ಟ :** ತಿಮ್ಮಪ್ಪನಾಯಕ ಮಾಸ್ತರ, ವಾಮನ ಹೊದ್ಕೆ ನಮ್ಮಲ್ಲಿ (ಯಲ್ಲಾಪುರದಲ್ಲಿ) ಪ್ರಚಾರಕ್ಕೆ (ಸ್ವಾತಂತ್ರ್ಯ ಚಳುವಳಿಯ ಪ್ರಚಾರ) ಬರುತ್ತಿದ್ದರು. (ಪುಟ ೧೬೨)

೧೯೪೧ರಲ್ಲಿ ಜಿಲ್ಲಾ ಕಲೆಕ್ಟರ್ ಹಾಗೂ ಮಾಮಲೆದಾರರಿಗೆ ನೋಟೀಸು ಕೊಟ್ಟು ಕವಡಿಕೇರಿಯ ಕವಡಮ್ಮದೇವಸ್ಥಾನದಲ್ಲಿ ಸಭೆ ಕರೆದು ತಿಮ್ಮಪ್ಪ ನಾಯಕ, ವಾಮನ ಹೊದ್ಕೆ ಮತ್ತು ಅಗ್ರಹಾರ ಗಣಪತಿ ಗಾಂವ್ಕರ ಇವರ ಭಾಷಣ ಆದವು. (ಪುಟ ೧೬೨)

೧೧. **ರಾಮಾ ವೆಂಕ ಭಟ್ಟ ಗುಂಟಕಲ್ಲ :** ಜಿಲ್ಲೆಯಾದ್ಯಂತ (ಉತ್ತರ ಕನ್ನಡ) ತಿಮ್ಮಪ್ಪ ನಾಯಕ ಹಾಗೂ ವಾಮನ ಹೊದಿಕೆ ಇವರ ನೇತೃತ್ವದಲ್ಲಿ ಸ್ವಾತಂತ್ರ್ಯಚಳುವಳಿಯು ಪ್ರಾರಂಭಿಸಲ್ಪಟ್ಟಿತು. (ಪುಟ ೧೬೪)

ಸಭೆಗೆ (ಯಲ್ಲಾಪುರ ತಾಲೂಕಿನ ಕವಡಿಕೇರಿಯಲ್ಲಿರುವ ಶ್ರೀ ಕವಡಮ್ಮ ದೇವಸ್ಥಾನದಲ್ಲಿ ನಡೆದ ಜಾಹೀರ ಸಭೆ) ಜಿಲ್ಲಾ ಮುಖಂಡರಾದ ತಿಮ್ಮಪ್ಪ ಶ್ರೀನಿವಾಸ ನಾಯಕ ಹಾಗೂ ವಾಮನ ಅನಂತ ಹೊದಿಕೆ ಇವರು ಹಾಜರಿದ್ದು, ತಿಮ್ಮಪ್ಪ ನಾಯ್ಕರು ಅದ್ಯಕ್ಷತೆ ವಹಿಸಿದ್ದರು. (ಪುಟ ೧೬೪)

೧೨. **ಸುಬ್ರಾಯ ಜನಾರ್ದನ ಭಟ್ಟ ಬೆಳಖಂಡ:** ಆ ಸಭೆಗೆ (ಕವಡಿಕೇರಿ ಶ್ರೀ ಕವಡಮ್ಮ ದೇವಸ್ಥಾನದಲ್ಲಿ ನಡೆದ ಜಾಹೀರ ಸಭೆಗೆ) ತಿಮ್ಮಪ್ಪ ನಾಯಕ ಮಾಸ್ತರ ಅಧ್ಯಕ್ಷರು.

೧೩. **ವಾಮನ ಅನಂತ ಹೊದಿಕೆ:** ಆಗಲೇ (೧೯೨೧ರ ಕೊನೆಯಲ್ಲಿ) ಶಿರಸಿ ಎ. ವಿ. ಸ್ಕೂಲಿನ ಪ್ರಧಾನ ಶಿಕ್ಷಕರಾಗಿದ್ದ ತಿಮ್ಮಪ್ಪ ನಾಯಕ ಇವರು ರಾಜೀನಾಮೆ ಕೊಟ್ಟು ನಮ್ಮ ರಾಷ್ಟ್ರೀಯ ಶಾಲೆಯ (ವಾಮನ ಅನಂತ ಹೊದಿಕೆಯವರು ಶಿರಸಿಯ ಶ್ರೀ ಗೋಪಾಲಕೃಷ್ಣ ದೇವಸ್ಥಾನದಲ್ಲಿ ಸ್ಥಾಪಿಸಿದ ರಾಷ್ಟ್ರೀಯ ಶಾಲೆ) ಮುಖ್ಯೋಪಾಧ್ಯಾಯರಾದರು. ಅವರ ಜೊತೆಯಲ್ಲಿ ಗೋಪಾಲ ಮಡಗಾಂವಕರ, ಪುಂಡ್ಲೀಕ, ಶ್ರೀನಿವಾಸ ಟೆಂಗ್ಸೆ, ನಾಗಭೂಷಣ ಟೆಂಗ್ಸೆ, ಶ್ರೀಧರ ಬೈಲೂರ, ಗಜಾನನ ಕಶ್ಯಪ್ ಮೊದಲಾದ ವಿದ್ಯಾರ್ಥಿಗಳೂ ಬಂದು ಸೇರಿಕೊಂಡರು. (ಪುಟ ೨೦೭)

೧೯೨೨ರಲ್ಲಿ ಮಹಾತ್ಮಾ ಗಾಂಧಿಯವರನ್ನು ಕೈಸೆರೆ ಹಿಡಿದ ಮೇಲೆ ತಿಮ್ಮಪ್ಪ ನಾಯಕ ಮೊದಲಾದವರು ಪ್ರಕ್ಷೋಭಕ ರಾಜಕೀಯ ವ್ಯಾಖ್ಯಾನಗಳನ್ನು ಹೆಚ್ಚಾಗಿ ಮಾಡಹತ್ತಿದರು. ಅದಕ್ಕಾಗಿ ತಿಮ್ಮಪ್ಪ ನಾಯಕ, ದತ್ತಾತ್ರೇಯ ಜೋಶಿ, ನಾರಾಯಣ ಮರಾಠೆ ಈ ಮೂವರನ್ನೂ ಕೈದುಮಾಡಿ ಸೆರೆಮನೆಗೆ ಅಟ್ಟಲಾಯಿತು. (ಪುಟ ೨೦೭)

ಮುಂದೆ (೧೯೨೨) ತಿಮ್ಮಪ್ಪ ನಾಯಕ ಮೊದಲಾದವರು ಶಿಕ್ಷೆಮುಗಿಸಿ ಹೊರಗೆಬಂದರು. (ಪುಟ ೨೦೮)

ಜೇಲಿನಲ್ಲಿ ಭಂಗಿ ಕೆಲಸವನ್ನು ಕ್ರಿಮಿನಲ್ ಕೈದಿಗಳ ಕಡೆಯಿಂದ ಸಕ್ತಿಯಿಂದ ಮಾಡಿಸುತ್ತಿದ್ದರು. ಅವರೂ ಮನಸ್ಸುಗೊಟ್ಟು ಕೆಲಸ ಮಾಡುತ್ತಲೂ ಇರಲಿಲ್ಲ. ಆದ್ದರಿಂದ ಶ್ರೀಧರ ಕಿಣಿ, ಗೋಪಾಲ ಕಿಣಿ, ನಾಯಕ ಮಾಸ್ತರ, ನಾವೆಲ್ಲರೂ ವಿಚಾರ ಮಾಡಿ ನಾವಾಗಿಯೇ ಭಂಗಿ ಕೆಲಸ ಬೇಡಿಕೊಂಡು ಕ್ರಿಮಿನಲ್ ಕೈದಿಗಳ ಮೇಲೆ ನಡೆಯುತ್ತಿದ್ದ ಸಕ್ತಿಯ ಅನ್ಯಾಯವನ್ನು ನಿಲ್ಲಿಸಿದೆವು. ನಾವು ಭಂಗಿ ಕೆಲಸ ವನ್ನು ನಿಷ್ಠೆಯಿಂದಲೂ ವೈಜ್ಞಾನಿಕ ರೀತಿಯಲ್ಲೂ ಮಾಡುತ್ತಿದ್ದೆವಾದ್ದರಿಂದ ತುಂಬ ಹರ್ಷದಲ್ಲಿ ಇರುತ್ತಿದ್ದೆವು. ಅದರಿಂದ ಅನಾಯಾಸವಾಗಿ ಆಧ್ಯಾತ್ಮ ಚಿಂತನೆಯೂ ಆಗುತ್ತಿತ್ತು. (ಪುಟ ೨೧೪)

೧೪. **ವಿಠ್ಠಲ ಅನಂತ ಹೊದಿಕೆ:** ಸ್ವಾತಂತ್ರ್ಯ ಲಭಿಸಿ ಕಾಲುಶತಮಾನ ಕಳೆದುಹೋದರೂ ಕೂಡ, ಸಂಸಾರದ ಬಂಧನಕ್ಕೊಳಗಾಗದೆ, ಯಾವ ಆಮಿಷಕ್ಕೂ

ಬಲಿಬೀಳದೆ, ನಿಸ್ವಾರ್ಥ ಬುದ್ಧಿಯಿಂದ ಗಾಂಧೀಯುವರ ನಿಷ್ಠಾವಂತ ಅನುಯಾಯಿ ಗಳಾಗಿ, ಅವರ ತತ್ತ್ವಗಳ ಪರಿಪಾಲನೆ ಹಾಗೂ ಪ್ರಚಾರಕ್ಕಾಗಿ ಅವರಂತೆ ಶ್ರಮಿಸುತ್ತ ಲಿರುವ ನಮ್ಮ ಜಿಲ್ಲೆಯವರೇ (ಉತ್ತರ ಕನ್ನಡ) ಆಗಿರುವ ತಿಮ್ಮಪ್ಪ ನಾಯಕ, ವಾಮನ ಪೂದಿಕೆ, ಶಂಕರರಾವ್ ಗುಲವಾಡಿ ಮೊದಲಾದವರನ್ನೂ ಈ ಸಂದರ್ಭ ದಲ್ಲಿ ನಾನು ಸ್ಮರಿಸದೆ ಇರಲಾರೆ. (ಪುಟ ೨೨೨)

೧೫. **ಗೋಪಾಳ ವಾಮನ ಮಡಗಾಂವಕರ:** ತಿಮ್ಮಪ್ಪ ನಾಯಕ ಮಾಸ್ತರ, ಶಂಕರರಾವ್ ಗುಲ್ವಾಡಿ, ಚೌಡಾ ಕನ್ನ ನಾಯ್ಕ ಬೇಡ್ಕಣಿ, ಮೂಟಿ ಗುಂಡಪ್ಪ ಸಿರ್ಸಿ, ಪರಮೇಶ್ವರ ಹೆಗ್ಡೆ ಹೆಗಡೆಕಟ್ಟೆ, ಇವರ ಪಥಕ (ಶಿರಸಿಯಿಂದ ಮಾರ್ಚ್ ೨೬ ರಲ್ಲಿ ಉಪ್ಪಿನ ಸತ್ಯಾಗ್ರಹದಲ್ಲಿ ಭಾಗವಹಿಸಲು ಹೊರಟ ಅರುಣೋ ದಯ ಪಥಕ)ದಲ್ಲಿದ್ದ ಇತರ ಮುಖ್ಯರು. (ಪುಟ ೨೨೫)

ಇದರ (೧೯೪೧ ರಲ್ಲಿ ವೈಯುಕ್ತಿಕ ಸತ್ಯಾಗ್ರಹಕ್ಕೆ ಕಾಂಗ್ರೆಸ್ಸು ಉತ್ತರ ಕನ್ನಡ ಜಿಲ್ಲೆಯಲ್ಲಿ ನೇಮಿಸಿದ ಸಮಿತಿಯ) ಸದಸ್ಯರೆಂದರೆ ನಾಯಕ ಮಾಸ್ತರ, ವಾಮನ ಪೊದ್ಕೆ, ಹರಿ ಅನಂತ ಪೈ, ರಘುಪತಿ ಪುಂಡಲೀಕ ಶಣೈ ಚೆಂಡಿಯೆ. (ಪುಟ ೨೩೦)

೧೯೩೧ ರಲ್ಲಿ ಕರಬಂದಿಯಲ್ಲಿ ಭಾಗವಹಿಸಿ ಸಂತ್ರಸ್ತರಾದ ಜನರಿಗೆ ನೆರವು ನೀಡಲು ಸಿರ್ಸಿಯ ಎಸ್. ಎನ್. ಕೇಶವೈನ್ ಅಧ್ಯಕ್ಷರಾಗಿ ಮತ್ತು ತಿಮ್ಮಪ್ಪ ನಾಯ್ಕ ಮಾಸ್ತರ ಕಾರ್ಯದರ್ಶಿಯಾಗಿ ಸ್ಥಾಪಿತವಾದ ರಿಲೀಫ್ ಕಮಿಟಿಯ ಸ್ವಯಂ ಸೇವಕನಾಗಿ ಹಾಗೂ ಆ ಕಮಿಟಿಯ ಸಿದ್ದಾಪುರ ತಾ॥ ಸ್ಥಾನೀಯ ಕಮಿಟಿಯ ಕಾರ್ಯದರ್ಶಿಯಾಗಿ ಕೆಲಸ ಮಾಡಿದೆನು. (ಈ ಸಮಿತಿ ೧೯೩೭–೩೮ರವರೆಗೆ ಕೆಲಸಮಾಡಿತು.) (ಪುಟ ೨೩೧)

೧೬. **ಮಂಜುನಾಥ ಹೆಗ್ಡೆ ಮಕ್ಕಳತಾಯ್ಮನೆ:** ನನ್ನ ಶಾಲೆ ನಾಯಕ ಮಾಸ್ತರರ ರಾಷ್ಟ್ರೀಯ ಶಾಲೆ. ಶಿರ್ಸಿಯಲ್ಲಿದ್ದ ಈ ಶಾಲೆ ವಿದ್ಯಾರ್ಥಿಗಳಲ್ಲಿ "ದೇಶ ಪ್ರೇಮ"ದ ಭಾವನೆ ಬರಿಸುವಲ್ಲಿ ಯಶಸ್ವಿಯಾಗಿ ಕೆಲಸಮಾಡುತ್ತಿತ್ತು. (ಪುಟ ೨೩೫)

೧೭. **ಭವಾನಿಬಾಯಿ ಕಾನಗೋಡ:** ಸಭೆಯ (೧೯೪೦–೪೧ರಲ್ಲಿ ವೈಯಕ್ತಿಕ ಸತ್ಯಾಗ್ರಹದ ದೊಡ್ಡ ಸಭೆ) ಪ್ರಮುಖ ಸಂಚಾಲಕರಾದ ಪೂಜ್ಯ ನಾಯಕ ಮಾಸ್ತರರು ತಮ್ಮ ಸಾತ್ವಿಕ ಶಕ್ತಿಯ ಪ್ರಭಾವದಿಂದ ಧೈರ್ಯವನ್ನು ನೀಡುತ್ತಿದ್ದರು. (ಪುಟ. ೨೮೧)

ಜೈಲಿನಿಂದ (೧೯೪೨ರಲ್ಲಿ ಹಿಂಡಲಗಿ ಜೈಲಿನಿಂದ) ಬಿಡುಗಡೆಯಾದಮೇಲೆ ಪ್ರಾಸ್ಯ ನಾಯಕ ಮಾಸ್ತರರ ಹಿರಿಯ ಮಾರ್ಗದರ್ಶನದಲ್ಲಿ ಅಂಕೋಲಾ ಗ್ರಾಮ ಸೇವಾಸಮಿತಿಯಲ್ಲಿ ಕಾರ್ಯಕರ್ತೆಯಾಗಿ ೧೯೫೧ರವರೆಗೆ ವಿವಿಧ ಸೇವೆಯನ್ನು ಸಲ್ಲಿಸಿದೆನು. (ಪುಟ ೨೮೨)

೧೮. ದುರ್ಗಪ್ಪ ಕೃಷ್ಣಪ್ಪ ಶಾನ್ಭೈನ: ಆಗ(೧೯೨೧ರಲ್ಲಿ ಸಿದ್ಧಾಪುರದಲ್ಲಿ ರಾಷ್ಟ್ರೀಯ ಶಾಲೆ ಆರಂಭವಾದಾಗ) ಇನ್ನೂ ಕಾಂಗ್ರೆಸ್ ಸೇರಿರದ ತಿಮ್ಮಪ್ಪ ನಾಯಕ ಮಾಸ್ತರರು ನಮ್ಮ ಊರಿಗೆ ಬಂದಾಗ ಬಾಲಕರಾದ ನಮ್ಮ ಚಟುವಟಿಕೆ ಕಂಡು ನಾವು ಶಾಲೆಬಿಟ್ಟು ರಾಜಕಾರಣದಲ್ಲಿ ಸೇರಬಾರದಿತ್ತು ಎಂದರು. ನಾವು ಶಿಕ್ಷಣ ಮುಗಿಸಿ ಮುಂದೆ ವಿಧಾಯಕ ಕಾರ್ಯಕ್ಕೆ ತೊಡಗಬೇಕೆಂದು ಅವರ ಅಭಿಪ್ರಾಯ. ಆದರೆ ಮುಂದೆ ಅವರೇ ನೌಕರಿ ತ್ಯಜಿಸಿ ಚಳುವಳಿಯಲ್ಲಿ ಗಣ್ಯರಾದರು. (ಪುಟ ೨೯೮)

# ಬಿಳಗಿ ಊರ ಸಂಬಂಧ

**ರಾಮಚಂದ್ರ ಪೈ ಮೂಡ್ಲಗಿರಿ**

ಶ್ರೀ ನಾಯಕ ಮಾಸ್ತರರದು ಬಿಳಗಿಯ ಜೊತೆ ಘನಿಷ್ಟ ಸಂಬಂಧ. ಅವರ ಕುಲಪುರೋಹಿತರು ಬಿಳಗಿಯವರೇ. ತಾವು ಪುಣೆಯಲ್ಲಿ ಕಾಲೇಜು ಶಿಕ್ಷಣ ಪಡೆಯುತ್ತಿದ್ದಾಗ ಸಂಸ್ಕೃತವನ್ನೂ ಅಭ್ಯಾಸ ಮಾಡುತ್ತಿದ್ದುದರಿಂದ ಶ್ರೀ ಶ್ರೀನಿವಾಸ ಗೋಪಾಳ ಆಚಾರ್ಯ (ಡಾ॥ .ಪಿ. ಎಸ್. ಆಚಾರ್ಯರ ಅಜ್ಜ) ಅವರೊಡನೆ ಚರ್ಚೆ ನಡೆಸಲು ಬಿಳಗಿಗೆ ರಜಾ ಕಾಲದಲ್ಲಿ ಬರುತ್ತಿದ್ದರು. ಬಿಳಗಿಯ ಪ್ರಮುಖರಿಂದ ಅಲ್ಪಸ್ವಲ್ಪ ಹಣ ಕೂಡಿಸಿ ಸುಮಾರು ೨೦೦ ರೂ.ಗಳಷ್ಟು ರಖಮನ್ನು ಬೇರೆ ಬೇರೆ ಕಂತುಗಳಲ್ಲಿ ಅವರಿಗೆ ಪುಣೆಗೆ ಕಳುಹಿಸಲಾಗಿತ್ತು. ಮುಖ್ಯವಾಗಿ ವ್ಯಾಪಾರಿಗಳಿಂದ ಈ ಸಹಾಯ ಬಂದಿತ್ತು. ಈ ಉಪಕಾರ ಮರೆಯಲಾರದ ಮಾಸ್ತರರು ಬಿಳಗಿಯ ರಾಷ್ಟ್ರೀಯ ಶಾಲೆಯಲ್ಲಿ ಶಿಕ್ಷಕರಾಗಿ ಕೆಲವು ದಿನ ಕೆಲಸಮಾಡಿದರು. ಇದಲ್ಲದೆ ರಜೆಯಲ್ಲಿ ಇಲ್ಲಿಗೆ ಬಂದು ವಿದ್ಯಾರ್ಥಿಗಳಿಗೂ ನಮಗೂ ಇಂಗ್ಲಿಷ್ ಕಲಿಸುತ್ತಿದ್ದರು.

ಬಿಳಗಿ ಊರಿನ ರಾಷ್ಟ್ರೀಯ ಜಾಗೃತಿ ಉತ್ತರ ಕನ್ನಡ ಜಿಲ್ಲೆಯ ಇನ್ನೆಲ್ಲ ಊರಿಗಿಂತ ಪ್ರಬಲವಾಗಿತ್ತು. ಇದು ಗಾಂಧೀ ಯುಗಕ್ಕೂ ಹಿಂದಿನಿಂದಲೂ ನಿಜ. ಗಾಂಧಿ ಯುಗ ಆರಂಭ ಆದಾಗಲೂ ಈ ಊರ ಕಾರ್ಯಕರ್ತರೇ ಚಳವಳಿಯಲ್ಲಿ ಮೊದಲು ಮುಂದಾದರು. ಜಿಲ್ಲೆಯಲ್ಲಿ ಜಾಗೃತಿಯ ಕೆಲಸವನ್ನು ಬಿಳಗಿಯಿಂದಲೇ ಆರಂಭಿಸಲು ಆಗ ಕಾಲೇಜು ತ್ಯಜಿಸಿ ಬಂದ ಶ್ರೀ ಗುಲವಾಡಿ ಶಂಕರರಾಯರಿಗೆ ಶ್ರೀ ನಾಯಕ ಮಾಸ್ತರರು ಸೂಚಿಸಿದ್ದರೆಂದು ಅವರು ಹೇಳಿದ್ದನ್ನು ನಾನು ಕೇಳಿದ್ದೇನೆ.

ಸಾರಸ್ವತ ಸಮಾಜದ ಶ್ರೀ ಗೋಕರ್ಣ ಪರ್ತಗಾಳೀ ಮಠಕ್ಕೆ ಶ್ರೀ ನಾಯಕ ಮಾಸ್ತರರನ್ನು ಉತ್ತರಾಧಿಕಾರಿಯಾಗಿ ಮಾಡುವ ವಿಚಾರ ಹಿಂದೆ ಶ್ರೀ ಇಂದಿರಾ ಕಾಂತಸ್ವಾಮಿಯವರಿಗೆ ಇತ್ತು. ಮಾಸ್ತರರ ಜಾತಕದಲ್ಲಿ ಸಂನ್ಯಾಸ ಯೋಗ ಇದ್ದ ವಿಚಾರ ಇದಕ್ಕೆ ಕಾರಣ. ಆದರೆ ಧರ್ಮದ ಕೆಲವು ಬಾಹ್ಯ ಕಟ್ಟಳೆಗಳನ್ನು ಪಾಲಿಸಲು ಇವರು ಸಮರ್ಥರೇ, ಎಂಬ ಸಂದೇಹ ಬಂದು ಮುಂದೆ ಶ್ರೀ ಕಮಲಾಕಾಂತರ ಶಿಷ್ಯ ಸ್ವೀಕಾರ ಆಯಿತು.

ಶ್ರೀ ಮಾಸ್ತರರ ಚಿತಾಭಸ್ಮವನ್ನು ಬಿಳಗಿಯ ಸೋಮ ನದಿಯಲ್ಲಿ ವಿಸರ್ಜಿಸಲಾಯಿತು.

# ಶಿರಸಿ ಊರ ಸಂಬಂಧ

ಜಿ. ಎನ್. ದೇಸಾಯಿ

ಶಿರಸಿ ಊರಲ್ಲಿ ಶ್ರೀ ನಾಯಕ ಮಾಸ್ತರರ 'ಮಾಸ್ತರ' ಜೀವನ ಆರಂಭ ಆದದ್ದು ಹೆಮ್ಮೆಯ ವಿಷಯು. ೧೯೩೨ರಿಂದಲೂ ನಮ್ಮ ಅಣ್ಣ ಆನಂದ ದೇಸಾಯಿ ಅವರ ಜೊತೆ ಅವರಿಗೆ ಘನಿಷ್ಟ ಸಂಬಂಧ ಇತ್ತು. ೧೯೩೭-೩೮ರಲ್ಲಿ ಅವರು ಕಾಂಗ್ರೆಸ್ ಅಧ್ಯಕ್ಷರಾಗಿ ಶಿರಸಿಯಲ್ಲಿ ಇದ್ದಾಗ ನಾನು, ಶ್ರೀಧರ ಕಿಣಿ ಆಫೀಸಿನ ಕೆಲಸದಲ್ಲಿ ಅವರಿಗೆ ನೆರವಾಗುತ್ತಿದ್ದೆವು. ಹಳ್ಳಿಗಳ ಕಡೆ ಅವರ ಗಮನ ವಿಶೇಷವಾಗಿ ಇತ್ತು.

೧೯೪೨ರಲ್ಲಿ ಅವರ ಬಂಧನ ಆಗುವ ಮೊದಲು ನಾನು ಕುಮಟೆಯಲ್ಲಿ ಅವರನ್ನು ಕಂಡಿದ್ದೆ. ಚಳುವಳಿ ನಿಲ್ಲಿಸಬಾರದು, ಸಭೆ, ಮೆರವಣಿಗೆ, ಬುಲೆಟಿನ್ ಪ್ರಕಟಣೆ ಸಾಗಬೇಕು, ಎಂದು ತಿಳಿಸಿದರು. ಆದರಂತೆ ಆಗಸ್ಟ್ ೧೫(೧೯೪೨)ರಂದು ಶಿರಸಿಯಲ್ಲಿ ನಾವು ಕೆಲವರು ಮೆರವಣಿಗೆ ನಡೆಸಿ ಬಂಧಿತರಾದೆವು.

ಅವರು ಪಾನಪ್ರತಿಬಂಧದ ವಿರುದ್ಧ ಉಪವಾಸ ಕೈಕೊಂಡಾಗ ಅದರ ಮುಕ್ತಾಯದ ದಿನ ಮಾದನಗೇರಿಯಲ್ಲಿ ಭಾರೀ ಜನ ನೆರೆದಿರಲು ನಾವು ಶಿರಸಿ ಊರಿನವರು ಅಲ್ಲಿ ಎಲ್ಲರಿಗೂ ಊಟದ ವ್ಯವಸ್ಥೆ ಮಾಡಿದೆವು. ನೂರಾರು ಜನ ಅಲ್ಲಿ ನೆರೆದಿದ್ದು ಅನ್ನಸಂತರ್ಪಣೆಯಲ್ಲಿ ಪಾಲುಗೊಂಡರು.

ಅವರು ನಿಧನರಾದ ದಿನ ಶಿರಸಿ ಊರಲ್ಲಿ ಹರತಾಳ ನಡೆಸಿದ್ದೆವು. ಅವರ ಚಿತಾಭಸ್ಮವನ್ನು ಮೆರವಣಿಗೆಯಲ್ಲಿ ಬನವಾಸಿಗೆ ಒಯ್ದು ವರದಾನದಿಯಲ್ಲಿ ವಿಸರ್ಜಿಸಿದೆವು.

# ಬಾಲ್ಯಮಿತ್ರ

ಶಾಂತಾರಾಮ ರಾಮಚಂದ್ರ ಭಟ್ಕಳಕರ

ನಾನು ತಿಮ್ಮಪ್ಪ ನಾಯಕರಿಗಿಂತ ಸಿದ್ದಾಪುರದ ಪ್ರಾಥಮಿಕ ಶಾಲೆಯಲ್ಲಿ ಎರಡುವರ್ಗ ಮೇಲಿದ್ದವನು. ಆಗಿನಿಂದ ನನ್ನದೂ ಅವರದೂ ಭಾರಿ ಸ್ನೇಹ. ನಮ್ಮ ತಂದೆ ಆಗ ಸಾರ್ವಜನಿಕ ಕ್ಷೇತ್ರದಲ್ಲಿ ಗಣ್ಯ ಕಾರ್ಯಕರ್ತರಾಗಿದ್ದು, ನಮ್ಮ ಮನೆಗೆ ಎಲ್ಲ ಪತ್ರಿಕೆಗಳನ್ನು ತರಿಸುತ್ತಿದ್ದರು. ಕೇಸರಿ, ಕಾಳ ಮರಾಠಿ ಪತ್ರಿಕೆಗಳನ್ನು ನಾಯಕ ಮಾಸ್ತರರು ತಪ್ಪದೇ ನಮ್ಮಲ್ಲಿ ಬಂದು ಓದುತ್ತಿದ್ದರು. ತಮ್ಮ ವರ್ಗದಲ್ಲಿ ಅವರದು ಒಂದನೆಯ ನಂಬರ್ ಇತ್ತು. ಮುಂದಿನ ಶಿಕ್ಷಣಕ್ಕೆ ಅವರು ಕುಮಟೆಗೆ ಹೋದರು. ನಾನು ಅನುಕೂಲ ಇಲ್ಲದೇ ಶಿಕ್ಷಣ ನಿಲ್ಲಿಸಿದೆ.

ಆಟ ಮುಂತಾದ ಸಂಗತಿಗಳಲ್ಲಿ ಅವರಿಗೆ ಆಸ್ಥೆಯೇ ಇರಲಿಲ್ಲ. ಕಾಲಯಾಪನೆ ಮಾಡುವ ಅಭ್ಯಾಸವೂ ಇರಲಿಲ್ಲ. ಮುಂದೆ ಅವರು ಕಾಂಗ್ರೆಸ್ ಕಾರ್ಯಕರ್ತ ರಾದಾಗ ಶಿರಸಿಯಿಂದ ಸಿದ್ದಾಪುರಕ್ಕೆ ಬಂದಾಗಲೆಲ್ಲ ನಮ್ಮಲ್ಲಿ ಇಲ್ಲವೇ ದುರ್ಗಪ್ಪ ಶಾಮೈನ ಅವರಲ್ಲಿ ಇರುತ್ತಿದ್ದರು. ಮುರಾರಜಿಭಾಯಿ ದೇಸಾಯಿ ಅವರು ಮುಂಬೈ ಯಲ್ಲಿ ಮಂತ್ರಿ ಆದಾಗ ಅವರು ಸಿದ್ದಾಪುರಕ್ಕೆ ಬಂದಿರಲು ಅವರನ್ನು ನಮ್ಮಲ್ಲಿಗೇ ಮಾಸ್ತರರು ಕರೆದು ತಂದಿದ್ದರು.

ಅವರು ಪದವೀಧರರಾದ ನಂತರ ಅವರಿಗೆ ಸಾಗರಕಡೆಯ ನಗರಕರ್ ಶ್ರೀಮಂತ ಮನೆತನದ ಕನ್ಯೆಯೊಬ್ಬಳ ಜೊತೆ ವಿವಾಹದ ಸನ್ನಾಹ ನಡೆದಿತ್ತು.* ನಗರಕರರು ಮಾಸ್ತರರಿಗೆ ಮುಂದೆ ಓದಿಸಲೂ ಸಿದ್ಧರಿದ್ದರು. ಆದರೆ ಈ ವಿಷಯ ಮಾಸ್ತರರ ಅಸಮ್ಮತಿಯಿಂದ ಅಲ್ಲಿಗೇ ನಿಂತಿತು. ಒಂದುವೇಳೆ ಅವರು ಈ ವಿವಾಹ ಮಾಡಿಕೊಂಡಿದ್ದರೆ ಅವರ ಜೀವನದ ಪಥವೇ ಬೇರಾಗುತ್ತಿತ್ತೋ ಏನೋ.

---

* ಈ ವಿವಾಹದ ಪ್ರಸ್ತಾಪದ ವಿಚಾರವನ್ನು ಶ್ರೀ ಮಾಸ್ತರರು ಶ್ರೀಮತಿ ಸುನಂದಾ ಪ್ರಭು ಅವರಲ್ಲೂ ಇತ್ತೀಚೆಗೆ ಹೇಳಿದ್ದರೆಂದು ನಾನು ಕೇಳಿರುವೆ. ಶ್ರೀ ಹರಿ ದಾಮೋದರ ಬಿಳಗಿ (ಮಡಗಾಂವಕರ್) ಅವರು ಈ ಬಗ್ಗೆ ವಿವರಗಳನ್ನು ನನಗೆ ತಿಳಿಸಿದ್ದರು. ಅವರಿಂದ ಲೇಖನಕ್ಕಾಗಿ ಪಡೆದ ಟಿಪ್ಪಣಿಗಳು ನನ್ನ ಅಜಾಗ್ರತೆಯಿಂದ ಕಳೆದುಹೋದಬಗ್ಗೆ ವಿಷಾದವೆನಿಸುತ್ತದೆ. ಶ್ರೀ ಬಿಳಗಿ ಅವರು ಶ್ರೀ ಮಾಸ್ತರರ ಸಹಪಾಠಿಯಾಗಿದ್ದರು—ಸಂ।

# ದಾರಿದೀಪ

ಡಾ॥ ಜಿ. ಪಿ. ನಾಯಕ್

ಶ್ರೀ ತಿಮ್ಮಪ್ಪ ನಾಯಕ ಮಾಸ್ತರರ ಜೀವನ ಮುಂದಿನ ಪೀಳಿಗೆಗೆ ದಾರಿದೀಪ. ೧೯೫೭–೬೦ರ ಅವಧಿಯಲ್ಲಿ ಕಾಂಗ್ರೆಸ್ ಸರಕಾರ ಮುಂಬೈಯಲ್ಲಿ ಇದ್ದಾಗ ಜಿಲ್ಲೆಯಲ್ಲಿ ಎಲ್ಲೆಡೆ ದಾರುಬಂದಿ ಪ್ರಚಾರ ನಡೆದಾಗ, ಶ್ರೀ ನಾಯಕ ಮಾಸ್ತರ ಮತ್ತು ಶ್ರೀ ಹೊದಿಕೆ ಮಾಸ್ತರರ ಮಾರ್ಗದರ್ಶನದಂತೆ ನಾನು ಕುಮಟಾ ತಾಲೂಕಿನಲ್ಲಿ ಆ ಕೆಲಸ ಮಾಡುತ್ತಿದ್ದೆ. ಹರಿಜನರ ಕೆಲಸವೂ ಅವರಿಗೆ ಪ್ರಿಯವಾಗಿತ್ತು. ಮಾದನಗೇರಿ ಆಶ್ರಮಕ್ಕೆ ಮಣ್ಣಿನ ಇಮಾರತು ಕಟ್ಟುವಾಗ, ಅವರು ಸ್ವತಃ ಮಣ್ಣಿನ ಕೆಲಸ ಮಾಡುವುದನ್ನು ನಾನು ನೋಡಿದ್ದೇನೆ.

ಜಿಲ್ಲಾ ಆಹಾರ ಸಮಿತಿ, ಜಿಲ್ಲಾ ದಾರುಬಂದಿ ಸಮಿತಿಗಳಲ್ಲಿ ಅವರು ಕೆಲಸ ಮಾಡಿದ್ದುಂಟು. ಜಿಲ್ಲಾ ಕಲೆಕ್ಟರ್ ಕ್ಯಾಪ್ಟನ್ ನಂಜಪ್ಪ ಅವರು ಒಮ್ಮೆ ಇವರಿಗೆ, "ನಿಮಗೆ ಇಂಗ್ಲಿಷ್ ಬರುತ್ತದೋ?" ಎಂದು ಕೇಳಿದರಂತೆ. ನಿಗರ್ವಿ, ಸಾದಾಜೀವಿ ಮಾಸ್ತರರು ಮುಗುಳು ನಕ್ಕು ಏನೂ ಜವಾಬು ಕೊಡದೇ ಇದ್ದರು.

ಸ್ವಾತಂತ್ರ್ಯ ಚಳವಳಿಯ ಎಲ್ಲ ಸಂಗ್ರಾಮಗಳಲ್ಲೂ ಪಾಲುಗೊಂಡು ಜೈಲು ಕಂಡ ಅವರು ಸ್ವರಾಜ್ಯ ಬಂದ ನಂತರವೂ ತಮ್ಮ ಜೀವನ ಕ್ರಮದಲ್ಲಿ ಬದಲಾವಣೆ ಮಾಡಿಕೊಳ್ಳಲಿಲ್ಲ.

ಅವರು ಎರಡು ಬಾರಿ ನಮ್ಮ ಮನೆಗೆ ಬಂದು ಉಂಡುದು ನೆನಪಿದೆ. ಉಪ್ಪು ಖಾರ ಅವರಿಗೆ ವರ್ಜ್ಯ. ನಾನು ಅಂಕೋಲೆಗೆ ಒಮ್ಮೆ ಅವರನ್ನು ಕಾಣಲು ಹೋದಾಗ, ರಾತ್ರಿ ನನ್ನನ್ನು ಊಟಕ್ಕೆ ನಿಲ್ಲಿಸಿಕೊಂಡರು, ಸಮಿತಿಯ ನೆರೆಮನೆಯಲ್ಲಿ ನನಗಾಗಿಯೇ ಅಡಿಗೆ ಮಾಡಿಸಿ ತಂದರು. ನಾನು ಸಪ್ಪೆ ಊಟವೇ ದೊರಕುವುದೆಂದು ಭಾವಿಸಿದ್ದೆ. ಇದು ಅವರ ವಾತ್ಸಲ್ಯದ ವ್ಯವಹಾರಕ್ಕೆ ನಿದರ್ಶನ.

ಮಾದನಗೇರಿ ಆಶ್ರಮದ ಜಾಗ ಒಬ್ಬ ರಾಷ್ಟ್ರೀಯ ಕೆಲಸಗಾರರದು. ಅದನ್ನು ಆಶ್ರಮಕ್ಕೆ ಕೊಳ್ಳುವ ವಿಚಾರ ಮಾಸ್ತರರು ಮಾಡಲಿಲ್ಲ. ಬೇಡವಾದಾಗ ಈ ಸ್ಥಳ ಬಿಟ್ಟು ಹೋಗಲು ಅನುಕೂಲ, ಎಂಬುದು ಮಾಸ್ತರರ ನಿಲುವು. ಅವರ ಅಸಂಗ್ರಹ ವೃತ್ತಿ, ನಿರ್ಲಿಪ್ತ ಜೀವನಕ್ಕೆ ಇದು ಉದಾಹರಣೆ.

# ಚಳವಳಿಗೆ ಸ್ಫೂರ್ತಿ

ಮಹಾದೇವ ಗಣಪತಿ ಶಾಸ್ತ್ರಿ

೧೯೨೯ರಲ್ಲಿಯೇ ಶ್ರೀ ನಾಯಕ ಮಾಸ್ತರರು ನಮ್ಮ ಊರು ಸ್ವಾದಿಗೆ ಬಂದಿದ್ದರು. ಸ್ವಾತಂತ್ರ್ಯ ಚಳವಳಿಯ ಪ್ರಚಾರವೇ ಅವರ ಆಗಮನದ ಉದ್ದೇಶ. ವಾಜಗದ್ದೆ ಬಯಲಲ್ಲಿ ಅವರ ಭಾಷಣವೂ ಆಗಿತ್ತು. ಅವರ ಭಾಷಣ ಮತ್ತು ಸಂಭಾಷಣೆಗಳಲ್ಲಿ ಪೊಳ್ಳು, ಪೋಕಳು ಮಾತುಗಳು ಇರುತ್ತಿರಲಿಲ್ಲ. ಪ್ರತಿಯೊಂದು ಸಂಗತಿಯನ್ನು ತಾವು ಅನುಸರಿಸಿ ಇತರರಿಗೆ ಹೇಳುತ್ತಿದ್ದರು. ತಾವು ಎಂದೂ ಜಾತಿಜಾತಿಗಳಲ್ಲಿ ಭೇದಮಾಡಿದವರಲ್ಲ.

೧೯೩೧-೩೨ರಲ್ಲಿ ಅವರು ಹೊರಡಿಸುತ್ತಿದ್ದ ಬುಲೆಟಿನ್‌ಗಳಲ್ಲಿನ ಬರಹ ತೀರ ಪರಿಣಾಮಕಾರಿಯಾಗಿ ಇರುತ್ತಿತ್ತು. ಇದರಂತೆ ನಡೆದರೇ ಸರಿ, ಎಂಬ ಭಾವನೆ ಜನರಲ್ಲಿ ಬರುವಂತೆ ಇತ್ತು. ಆ ಕರಪತ್ರಗಳನ್ನು ನೋಡಿ ಅದರಂತೆ ನಾನು ಯಲ್ಲಾಪುರ ತಾ॥ನಲ್ಲಿ ಕರಪತ್ರಗಳನ್ನು ಹೊರಡಿಸುತ್ತಿದ್ದೆ. ಸರ್ದಾರ್ ವೆಂಕಟ ರಾಮಯ್ಯನವರು ನನಗೆ ಒಂದು ಸೈಕ್ಲೊಸ್ಟೈಲ್ ಯಂತ್ರಕೊಟ್ಟಿದ್ದರು.

ಶ್ರೀ ಮಾಸ್ತರರಿಂದ ಸ್ವಾತಂತ್ರ್ಯ ಹೋರಾಟದ ಕಾಲದಲ್ಲಿ ನಮಗೆ ಸಿಕ್ಕ ಸ್ಫೂರ್ತಿ ಅಪಾರ.

# ನಿರಾಡಂಬರದ ವಿದ್ವಾಂಸ

ಎಸ್. ಯು. ರಾಮಚಂದ್ರರಾವ್

ದಿ॥ ಶ್ರೀ ತಿಮ್ಮಪ್ಪ ನಾಯಕ ಮಾಸ್ತರರು ಸರ್ವೋದಯ ಕಾರ್ಯರಂಗದಲ್ಲಿ ಒಬ್ಬ ಮುಖ್ಯ ಕಾರ್ಯಕರ್ತರಾಗಿದ್ದರು. ಅವರ ಪರಿಚಯವು ನನಗೆ ಈಗ ಮುಂಬೈ ಬೋರಿವಿಲಿ ಕೋರಾಕೇಂದ್ರದ ಮುಖ್ಯ ರಚನಾತ್ಮಕ ಕಾರ್ಯಕರ್ತ ರಾಗಿರುವ ಶ್ರೀ ದತ್ತುಭಾಯ್ ಪಟ್ಟಂಗಡಿಯವರಿಂದ ಆಗಿತ್ತು. ಸರ್ವೋದಯದ ವಿಷಯದಲ್ಲಿ ದಿ॥ ತಿಮ್ಮಪ್ಪ ನಾಯಕ ಮಾಸ್ತರರು ಬಹಳ ನಿಷ್ಠಾವಂತರಾಗಿದ್ದು ಸರ್ವೋದಯದ ಮಂಡಳದಲ್ಲಿ ಒಳ್ಳೆಯ ಹೆಸರು ಪಡೆದಿದ್ದರು. ಆ ಕ್ಷೇತ್ರದಲ್ಲಿ ೧೯೫೦ರಿಂದ ಲಾಗಾಯಿತು ಅವರಿಗೂ ನನಗೂ ನಿಕಟ ಸಂಪರ್ಕವಾಯಿತು. ಅವರ ವಿದ್ವತ್ತು ಬಹಳವಿದ್ದರೂ ಅವರು ಒಬ್ಬ ಸಾಧಾರಣ ವ್ಯಕ್ತಿಯಂತೆ ನಿರಾಡಂಬರವಾಗಿ ವರ್ತಿಸುತ್ತಿದ್ದರು. ಅವರ ಮರಣದಿಂದ ಕರ್ಣಾಟಕ ಸರ್ವೋದಯ ಮಂಡಲಕ್ಕೆ ತುಂಬಲಾರದ ನಷ್ಟವಾಗಿದೆ.

ದಿವಂಗತರ ಆತ್ಮಕ್ಕೆ ಶಾಂತಿ ದೊರಕಿ, ಸರ್ವೋದಯ ಮಂಡಳಕ್ಕೆ ಹಾಗೂ ಬಾವೀ ಪೀಳಿಗೆಗೆ ಅವರ ನೆನಪಿನಿಂದ ಉತ್ತಮ ಮಾರ್ಗದರ್ಶನ ದೊರಕಲಿ.

# ಗೌರವಾರ್ಪಣೆ

ದಿನಕರ ದೇಸಾಯಿ

ನನ್ನ ದೀನ ಗೌರವಗಳನ್ನು ದಿವಂಗತ ತಿಮ್ಮಪ್ಪ ನಾಯಕ ಮಾಸ್ತರರಿಗೆ ಸಲ್ಲಿಸುತ್ತೇನೆ. ಪ್ರತಿಯೊಂದು ದೃಷ್ಟಿಯಿಂದಲು ಅವರು ಘನವ್ಯಕ್ತಿಯಾಗಿದ್ದರು. ತಮ್ಮ ಇಡೀ ಜೀವನವನ್ನು ದೇಶದ ಸೇವೆಯಲ್ಲಿ ಅವರು ಕಳೆದರು. ದೇಶ ಸೇವೆ ಗೈಯ್ಯಲು ತಮ್ಮ ಎಲ್ಲಾ ಕಾಲವನ್ನ ಮೀಸಲಿಡಬೇಕೆಂದು ಅವರು ಆಜೀವ ಅವಿವಾಹಿತರಾಗಿ ಉಳಿದರು. ಅವರ ಜೀವನವಿಧಾನ ತೀರ ಸರಳವಾದದು. ಅವರು ಎರಡು ಹೊತ್ತು ಸಾದಾ ಊಟವನ್ನಷ್ಟೇಮಾಡಿ ತೃಪ್ತರಾಗಿರುತ್ತಿದ್ದರು. ಚಹಾ ಪಾನವನ್ನೂ ಅವರು ಮಾಡುತ್ತಿರಲಿಲ್ಲ.

ಗಾಂಧೀಜಿಯುವರ ಕರೆಬಂದಕೂಡಲೇ ಅವರ ತಮ್ಮ ಹೈಸ್ಕೂಲು ಅಧ್ಯಾಪಕ ವೃತ್ತಿಗೆ ರಾಜೀನಾಮೆ ನೀಡಿದರು. ಇಡೀ ತಮ್ಮ ಜೀವನವನ್ನು ದೇಶಕ್ಕಾಗಿ ಮೀಸಲಾಗಿ ಇಟ್ಟರು. ಉತ್ತರ ಕನ್ನಡ ಜಿಲ್ಲೆಯ ಮೊತ್ತಮೊದಲ ಪದವೀಧರರಲ್ಲಿ ಅವರು ಒಬ್ಬರಾಗಿದ್ದರು. ಅವರು ಕನ್ನಡದಲ್ಲಿ ಕೆಲವು ಪುಸ್ತಕಗಳನ್ನು ಬರೆದಿದ್ದಾರೆ. ಈ ಪುಸ್ತಕಗಳಲ್ಲಿ ಕೆಲವನ್ನು ನಾನು ಆಸ್ಥೆಯಿಂದ ಓದಿದ್ದೇನೆ.

ಅವರನ್ನು ಉತ್ತರ ಕನ್ನಡ ಜಿಲ್ಲೆಯ "ಗಾಂಧಿ" ಎಂದು ಕರೆಯುತ್ತಿದ್ದರು. ದೇಶಕ್ಕಾಗಿ ನಮ್ಮದೇ ದೀನ ಮಾರ್ಗದಲ್ಲಿ ನಾವು ಏನನ್ನಾದರು ಮಾಡಲು ಮುಂದಾದಲ್ಲಿ, ನಾವು ದಿವಂಗತ ತಿಮ್ಮಪ್ಪ ನಾಯಕ ಮಾಸ್ತರರಿಗೆ ನಿಜವಾದ ಗೌರವ ಸಲ್ಲಿಸಿದಂತಾಗುತ್ತದೆ.

# ಆದರ್ಶ ಸತ್ಯಾಗ್ರಹಿ

ಪ್ರೊ॥ ಎಂ. ಎಂ. ರಾಮರಾವ್

ನಾಯಕ ಮಾಸ್ತರ (ಹಾಗೆ ನಾವು ಅವರನ್ನು ಕರೆಯುತ್ತಿದ್ದೆವು)ರ ಜೊತೆ ನನಗೆ ಮೊದಲು ಸಂಪರ್ಕ ಬಂದುದು ೧೯೩೫ರಲ್ಲಿ. ಅವರಜೊತೆಯೇ ದೀರ್ಘಕಾಲ ಕೆಲಸಮಾಡುವ ಅವಕಾಶ ನನಗೆ ಸಿಕ್ಕಿರಲ್ಲಿಲ್ಲವಾದರೂ ಅವರ ಸಹವಾಸದಲ್ಲಿ ಇರುವ ಹೆಮ್ಮೆಯ ಅವಕಾಶಗಳು ನನಗೆ ಅನೇಕ ಬಾರಿ ಬಂದಿವೆ. ಅವರು ಗಾಂಧೀಜಿಯವರ ಪರಮ ಭಕ್ತರಾಗಿದ್ದರು, ಮತ್ತು ಗಾಂಧೀಜಿ ರೂಪಿಸಿದ ಆದರ್ಶ ಸತ್ಯಾಗ್ರಹಿಯ ಜೀವನವನ್ನು ಅದಕ್ಕೆ ಲವಲೇಶವೂ ಚ್ಯುತಿಬರದಂತೆ ನಡೆಸಲು ಸದಾ ಶ್ರಮಿಸಿದರು. ಅವರು ನಡೆಸುತ್ತಿದ್ದ ವ್ರತಸ್ಥ ಮತ್ತು ಸ್ವಾರ್ಥತ್ಯಾಗಿಯ ಜೀವನದಿಂದ ಅವರಿಗಿದ್ದ ದೇಹಶಕ್ತಿಗೂ ಹೆಚ್ಚಿನ ಶಕ್ತಿಯುಳ್ಳವರ ಆರೋಗ್ಯವೂ ನಷ್ಟವಾಗದೆ ಇರುತ್ತಿರಲಿಲ್ಲ. ಡಾ॥ ಸೂರ್ಯನಾಥ ಕಾಮತರು ಸಂಪಾದಿಸಿದ "ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು" ಪುಸ್ತಕದಲ್ಲಿ ಶ್ರೀ ಮಾಸ್ತರರೇ ನೀಡಿರುವ ನಿಗರ್ವಿಯಾದ ಆತ್ಮಕಥನವು ಕನ್ನಡ ಜಿಲ್ಲೆಯ ಜನ್ಮವಿತ್ತ ಒಬ್ಬ ಎದ್ದು ಕಾಣುವ ಸವನರೋಲನ ಜೀವನದ ಘನತೆ, ಆಳ ಹಾಗೂ ಸಂನ್ಯಾಸವೃತ್ತಿಯ ತ್ಯಾಗದ ಕಲ್ಪನೆಯನ್ನು ನೀಡಲಾರದು. ಗಾಂಧಿ ಸೇವಾ ಸಂಘದ ಸದಸ್ಯರಾಗಿ ಅವರು ಇದ್ದಾಗ ಜಮ್ನಾಲಾಲ್ ಬಜಾಜರ ಔದಾರ್ಯದಿಂದ ಬರುತ್ತಿದ್ದ ಒಂದು ಅತಿ ಅಲ್ಪವಾದ ಮಾಸಿಕವೇತನವನ್ನು ಅವರು ಪಡೆಯುತ್ತಿದ್ದರು ಅದರಲ್ಲಿ ತನ್ನ ದೈಹಿಕ ಅವಶ್ಯಕತೆಗಳನ್ನು ಪೂರೈಸಲೆಂದು ಎಷ್ಟು ಬೇಕೋ ಅಷ್ಟು ಮಾತ್ರ ವೆಚ್ಚಮಾಡಿ ಉಳಿದ ಹಣವನ್ನು ಮರಳಿಸುತ್ತಿದ್ದರು. ಸ್ವಾಮಿ ವಿವೇಕಾನಂದರು ಪಾಶ್ಚಿಮಾತ್ಯ ದೇಶಗಳ ಜನರ ಜೀವನದ ವಿಚಾರ ಹೇಳುತ್ತ, "ಜೀವನದ ಮಟ್ಟವನ್ನು ಎತ್ತರಿಸಲು" ತನ್ನ ಅವಶ್ಯಕತೆಗಳನ್ನು ಮುಗಿಲೆತ್ತರವೇ ಮಿತಿಯೆಂದು ಭಾವಿಸಿ ಹೆಚ್ಚಿಸುತ್ತ ಹೋಗುವ ಕಲ್ಪನೆಗೆ ತದ್ವಿರುದ್ಧವಾಗಿ ಪೌರ್ವಾತ್ಯ ಕಲ್ಪನೆಯಂತೆ ದಿನದಿನಕ್ಕೆ ತಮ್ಮ ಅವಶ್ಯಕತೆಗಳನ್ನು ಕಡಿಮೆ ಮಾಡುತ್ತ ಮಾಸ್ತರರು ಬಾಳಿದ್ದರು.

ಮಹಾಭಾರತದ ಯುಧಿಷ್ಠಿರನಂತೆ ಮಾಸ್ತರರು "ಅಜಾತಶತ್ರು"ವಾಗಿದ್ದರು. ಕೆಲವು ಕಾಲದವರೆಗಾದರೂ ಅವರ ಜೊತೆ ಸ್ನೇಹವನ್ನು ತ್ಯಜಿಸಿದ ಕೆಲವು ವ್ಯಕ್ತಿಗಳಿದ್ದರೂ ಅವರು ಮಾತ್ರ ಯಾರಬಗ್ಗೆಯೂ ಶತ್ರುತ್ವ ಹೊಂದಿರಲಿಲ್ಲ. ನಾಯಕ ಮಾಸ್ತರರಂಥ ಆದರ್ಶ ಉದಾಹರಣೆಗಳು ಕೆಟ್ಟಜೀವನ ನಡೆಸುವವರಂತೆ ಶೀಘ್ರ ಸಾಂಕ್ರಾಮಿಕವಾಗದೆ ಇರುವುದು ನಿಸರ್ಗದಲ್ಲಿನ ಅಲ್ಲಗಳೆಯಲಾಗದ ಒಂದು ದುರಂತ. ಅಂಟುರೋಗಗಳು ನಮಗೆ ಶೀಘ್ರ "ತಗಲು"ತ್ತವೆ; ಆರೋಗ್ಯ "ತಗಲು"ವುದಿಲ್ಲ.

# ಕರ್ನಾಟಕದ ಗಾಂಧಿ

ಸರ್ದಾರ್ ಕೆ. ಎ. ವೆಂಕಟರಾಮಯ್ಯ

ಜನಮನವನ್ನು ಒಳಹೊಕ್ಕು ಅಲುಗಾಡಿಸಿ ಕಲಕಿ ತಳಮಳವನ್ನು ಹುಟ್ಟಿಸಿದ ಗಾಂಧೀ ವಿಚಾರಧಾರೆಯು ಅನೇಕ ಸಜ್ಜನರ ಅಂತಃಕರಣವನ್ನು ಕೆಣಕಿತು. ಅದೊಂದು ದೊಡ್ಡ ಸಮುದ್ರಮಥನ. ಅದರಲ್ಲಿ ಅನೇಕ ಅನರ್ಘ್ಯ ರತ್ನಗಳು ಮೇಲಕ್ಕೆ ತೇಲಿ ಬಂದವು. ಅವರಲ್ಲಿ ಶ್ರೀ ತಿಮ್ಮಪ್ಪ ಶ್ರೀನಿವಾಸ ನಾಯಕರು ಒಂದು ಅನರ್ಘ್ಯ ರತ್ನ.

ಶ್ರೀ ನಾಯಕರನ್ನು ಭೆಟ್ಟಿಯಾದವರಿಗೆ ಅವರ ಅಂತಃಕರಣದ ನಿರ್ಮಲತೆಯ ಅನುಭವವಾಗುತ್ತಿದ್ದುದು ಸಹಜ. ಕರ್ಮ-ಧರ್ಮ ಸಂಯೋಗದಿಂದ ೧೯೩೦ ರಲ್ಲಿ ಸತ್ಯಾಗ್ರಹ ಚಳುವಳಿಯು ನನ್ನನ್ನು ಕಾನಡಾ ಜಿಲ್ಲೆಗೆ ಒಯ್ಯಿತು. ಇದು ನನ್ನ ಸಂದೈವವಾಗಿ ಪರಿಣಮಿಸಿತು. ಕಾನಡಾ ಜಿಲ್ಲೆಯ ಕಾರ್ಯಕರ್ತರು ಶುದ್ಧ ಗಾಂಧೀ ವಾದಿಗಳು. ಹೆಜ್ಜೆ ಹೆಜ್ಜೆಗೆ ತಾವು ಮಾಡುವ ಕೆಲಸವು ಗಾಂಧೀ ವಿಚಾರಗಳಿಗೆ ಹೊಂದುತ್ತದೆಯೇ ಎಂಬ ಪರೀಕ್ಷೆಮಾಡಿ ಹಜ್ಜೆ ಇಡುವರು. ಈ ಪರೀಕ್ಷೆಗೆ ಒರೆ ನಾಯಕ ಮಾಸ್ತರರು. ಆದ್ದರಿಂದ "ನಾಯಕ ಮಾಸ್ತರರನ್ನು ಕೇಳಿನೋಡಬೇಕು" ಎಂದು ಎಲ್ಲರ ಮುಖದಿಂದ ನಾಯಕ ಮಾಸ್ತರರ ಹೆಸರು ಕೇಳಿಬರುತ್ತಿತ್ತು. ಇಂಥ ಶ್ರೇಷ್ಠ ಗಾಂಧೀವಾದಿಗಳ ದರ್ಶನ ಮಾಡಬೇಕೆಂಬ ಕುತೂಹಲ ನನ್ನಲ್ಲಿ ಹುಟ್ಟಿದ್ದರಿಂದ ನಾನು ಅವರನ್ನು ಭೆಟ್ಟಿಯಾದೆನು. ಅಲ್ಲಿನಿಂದ ನನಗೂ ಅವರಿಗೂ ಇದ್ದ ಸ್ನೇಹ ಗುರು-ಶಿಷ್ಯ ಸಂಬಂಧವಾಯ್ತು.

ಗಾಂಧೀಜಿಯವರು ತಮ್ಮ ವಿಚಾರಗಳನ್ನು ಯಂಗ್ ಇಂಡಿಯಾ, ಹರಿಜನ ಪತ್ರಿಕೆಗಳಲ್ಲಿ ಬರೆಯುತ್ತಿದ್ದರು. ಶ್ರೀ ನಾಯಕರು ಅವರ ಮಾತುಗಳನ್ನು ಕೂಡಲೇ ತಮ್ಮ ಜೀವನದಲ್ಲಿ ಆಚರಣೆಗೆ ತರುತ್ತಿದ್ದರು. ಸಂಶಯ ನಿವಾರಣೆಗಾಗಿ ಗಾಂಧೀಜಿಯವರಿಗೆ ಪತ್ರ ಬರೆದು ಉತ್ತರ ಪಡೆಯುತ್ತಿದ್ದರು. ಅಹಿಂಸಾ ತತ್ತ್ವವನ್ನು ಸರಿಯಾಗಿ ಅರ್ಥಮಾಡಿಕೊಂಡು ಆಚರಣೆಗೆ ತರಬೇಕೆಂಬ ಪೂರ್ಣಶ್ರದ್ಧೆಯುಳ್ಳ ಸಾಧಕನೆಂದು ಶ್ರೀ ತಿಮ್ಮಪ್ಪ ನಾಯಕರ ಜೀವನ ಗಾಂಧೀಜಿಯವರ ಮನಸ್ಸಿನಮೇಲೆ ಬಿಂಬಿತವಾಯ್ತು. ಅಂತಲೇ ಗಾಂಧೀಜಿಯವರು ಮೇಲಿಂದ ಮೇಲೆ ಅವರ ಉಲ್ಲೇಖ ಮಾಡುತ್ತಿದ್ದರು. ಕಾನಡಾ ಜಿಲ್ಲೆಯಲ್ಲಿ ನಡೆದ ಮಹಾಸಾಹಸ ತ್ಯಾಗಗಳ ಹಿನ್ನಲೆಯಲ್ಲಿ ಶ್ರೀ ನಾಯಕರ ಜೀವನಸಿದ್ಧಾಂತಗಳು, ಆಚರಣೆಗಳು ಅಚಲಶಕ್ತಿಯಾಗಿದ್ದವು.

ಗಾಂಧೀಜಿಯವರ ಸರ್ವೋದಯ ವಿಚಾರಗಳಲ್ಲಿ ಅಪರಿಗ್ರಹವು ಅಮೂಲ್ಯ ವಾದುದು. ಅಪರಿಗ್ರಹದ ನಿಷ್ಠುರ ಆಚರಣೆಯನ್ನು ನಾವು ಶ್ರೀ ನಾಯಕರ ಜೀವನ ವಲ್ಲಿ ಕಂಡೆವು. ಪ್ರಜಾರಾಜ್ಯದ ಯಶಸ್ಸಿಗೆ ನಿಷ್ಠುರ ಅಪರಿಗ್ರಹ ವ್ರತವನ್ನು ರಕ್ತ ಗತ ಮಾಡಿಕೊಂಡವರು ಅಧಿಕಾರ ಸ್ಥಾನಕ್ಕೆ ಆರಿಸಿ ಬರುವುದು ಅವಶ್ಯವೆಂದು ತಿಳಿ ದವರು ಹೇಳುತ್ತಾರೆ. ಇಲ್ಲದಿದ್ದರೆ ಪ್ರಜಾರಾಜ್ಯವು ಪರಿಣಾಮಕಾರಿಯಾಗ ಲಾರದೆನ್ನುತ್ತಾರೆ. ಶ್ರೀ ನಾಯಕರಂಥ ಅಪರಿಗ್ರಹಿಗಳು ಅಧಿಕಾರಸ್ಥಾನಕ್ಕೆ ಬರದೇ ಹೋದದ್ದು ದೇಶದ ದುರದೃಷ್ಟವಿರಬಹುದು. ಆದರೆ ಆ ಅಸಿಧಾರಾವ್ರತವನ್ನು ಜೀವನದಲ್ಲಿ ಆಚರಿಸುವ ಮಹತ್ವವೇನೆಂಬುದನ್ನು ಶ್ರೀ ನಾಯಕರು ಸಿದ್ಧಮಾಡಿ ತೋರಿಸಿದ್ದಾರೆ. ಅವರು ಧನ್ಯರು, ಪ್ರಾತಃಸ್ಮರಣೀಯರು.

# ಇಣುಕು ನೋಟಗಳು

## ನಿಕಟವರ್ತಿಯಿಂದ

ನಾಗಪುರ ಕಾಂಗ್ರೆಸ್ಸಿನ ಅಸಹಕಾರದ ನಿರ್ಣಯವಾಗಿ, ಅನೇಕರು ಕಾಲೇಜು ತ್ಯಜಿಸಿದ ಪ್ರಸಂಗದಲ್ಲಿ ಉತ್ತರ ಹಾಗೂ ದ. ಕನ್ನಡ ಜಿಲ್ಲೆಗಳ ೧೨ ಜನ ವಿದ್ಯಾರ್ಥಿಗಳು ಮುಂಬೈಯಲ್ಲಿನ ತಮ್ಮ ಶಿಕ್ಷಣ ತ್ಯಜಿಸಿ ಚಳವಳಿಯ ಸಂಘಟನೆಗಾಗಿ ಕಾರವಾರ ಜಿಲ್ಲೆಗೆ ಬಂದೆವು. (೧೯೨೧). ಮುಂಬೈಯ ಉತ್ತರ–ದಕ್ಷಿಣ ಕನ್ನಡ ಜಿಲ್ಲಾ ವಾಸಿಗಳು ನಮಗೆ ಭಾರೀ ಬೀಳ್ಕೊಡುವ ಸಮಾರಂಭ ಏರ್ಪಡಿಸಿದ್ದರು. ಶಿವರಾತ್ರಿಯ ದಿನ ನಾವು ಗೋಕರ್ಣದಲ್ಲಿ ಇಳಿದೆವು. ಎರಡೆರಡು ಜನರ ತಂಡವಾಗಿ ಜಿಲ್ಲೆಯಲ್ಲೆಲ್ಲ ಸಂಚಾರ ಮಾಡಿದೆವು. ಎಲ್ಲೆಡೆ ಭಾರೀ ಸಭೆಗಳಾದುವು. ಆದರೆ ಸಹಿಕೊಟ್ಟು ಕಾಂಗ್ರೆಸ್ಸಿನ ಸದಸ್ಯರಾಗಲು ಒಬ್ಬರೂ ಮುಂದೆ ಬರಲಿಲ್ಲ. ಕಾಂಗ್ರೆಸ್ ಸಮಿತಿ ಸ್ಥಾಪನೆ ಮಾಡುವ ವಿಚಾರವಂತು ಕನಸೇ ಆಗಿ ಉಳಿಯಿತು. ಒಂದು ತಿಂಗಳು ನಾವು ಎಲ್ಲೆಡೆ ಸಂಚಾರಮಾಡಿ ಪ್ರಚಾರಮಾಡಿದರೂ ಸಂಘಟನೆಯ ಕೆಲಸ ಆಗುವ ಲಕ್ಷಣ ಕಾಣಿಸಲಿಲ್ಲ. ನಮಗೆಲ್ಲ ನಿರಾಶೆಯೇ ಆಗಿತ್ತು.

ಶ್ರೀ ನಾಯಕ ಮಾಸ್ತರರು ಈ ಕಾಲದಲ್ಲಿ ಶಿರಸಿಯ ಮುನ್ಸಿಪಲ್ ಶಾಲೆಯಲ್ಲಿ ಮುಖ್ಯೋಪಾಧ್ಯಾಯರಾಗಿದ್ದರು. ಆಗಲೇ ಅವರು **"Fairplay"** ಎಂಬ ಹೆಸರಿಟ್ಟುಕೊಂಡು ಸ್ಥಳೀಯ 'ಕೆನರಾ ಲೀಡರ್' ಮತ್ತು 'ಕೆನರಾ ನ್ಯೂಸ್' ನಲ್ಲಷ್ಟೇ ಅಲ್ಲ 'ಬಾಂಬೆ ಕ್ರಾನಿಕಲ್' ನಲ್ಲೂ ರಾಷ್ಟ್ರೀಯ ಜಾಗೃತಿಗೆ ಸಂಬಂಧಿಸಿ ಲೇಖನಗಳನ್ನು ಬರೆಯುತ್ತಿದ್ದರು. ಮತ್ತು ಅವರ ಹೆಸರು ಮುಂಬೈಯಲ್ಲೂ ಕಿವಿಗೆ ಬಿದ್ದಿತ್ತು. ಅವರನ್ನು ಭೇಟಿಯಾಗಲು ನಮಗೆ ಸೂಚನೆ ನೀಡಲಾಗಿತ್ತು. ನಾವೂ ಅವರನ್ನು ಕಂಡಿದ್ದೆವು. ಒಂದು ತಿಂಗಳ ಕಾಲ ನಾವು ಜಿಲ್ಲೆಯಲ್ಲೆಲ್ಲ ಸಂಚರಿಸಿದರೂ ಯಾವುದೇ ಖಚಿತ ಕಾರ್ಯ ಆಗದಿರಲು, ಆ ನಿರಾಶೆಯ ಪ್ರಸಂಗದಲ್ಲಿ ನಾವು ಅವರನ್ನು ಕಾಣಲು ಹೋದಾಗ, ತೀರ ಆಶಾದಾಯಕವಾದ ಒಂದು ಸಲಹೆಯನ್ನು ಅವರು ನೀಡಿದರು ಜಿಲ್ಲೆಯ ಮುಂದಣ ಸಂಘಟನಾ ಕಾರ್ಯಕ್ಕೆ ಅವರು ನೀಡಿದ ಸಲಹೆ ಬೀಜರೂಪದ್ದಾಯಿತು. ಅದೆಂದರೆ, ಬಿಳಗಿ ಊರಲ್ಲಿ ಹೋಗಿ ಅಲ್ಲಿಂದ ಕೆಲಸ ಆರಂಭಿಸಬೇಕು, ಎಂಬುದು.

ಕಾಲೇಜು ವಿದ್ಯಾರ್ಥಿಯಾಗಿದ್ದಾಗ ಶ್ರೀ ಮಾಸ್ತರರು ಬಿಳಗಿಗೆ ರಜಾಕಾಲದಲ್ಲಿ ಹೋಗಿ ಅಲ್ಲಿ ಕೆಲವು ತರುಣರಿಗೆ ಇಂಗ್ಲಿಷ್ ಶಿಕ್ಷಣ ನೀಡುತ್ತಿದ್ದರಂತೆ. ಹೀಗೆ

ಶಿಕ್ಷಣ ಪಡೆದವರಲ್ಲಿ ಮೂಡ್ಲಗಿರಿ ರಾಮಚಂದ್ರ ಪೈ ಕೂಡ ಒಬ್ಬರು. ಮತ್ತು ಆ ಊರಜನ ಶ್ರೀ ಮಾಸ್ತರರ ಶಿಕ್ಷಣಕ್ಕೆ ನೆರವಾಗಲೆಂದು ಸ್ವಲ್ಪ ಹಣವನ್ನೂ ಸಂಗ್ರಹಿಸಿ ಕೊಡುತ್ತಿದ್ದರಂತೆ. ಆ ಊರ ಜನರ ಸ್ವಭಾವ, ಉತ್ಸಾಹಗಳ ಹಾಗೂ ರಾಷ್ಟ್ರೀಯ ಭಾವನೆಗಳ ಪರಿಚಯ ಅವರಿಗೆ ಚೆನ್ನಾಗಿ ಇತ್ತು. ಸಿದ್ದಾಪುರದ ಶ್ರೀ ಪುತ್ತಪ್ಪ ಚಂದ್ರಘಟ್ಟಿ, ಬಿಳಗಿಯ ಶ್ರೀ ದಾಸಪ್ಪ ಮಡಗಾಂವಕರ ಹಾಗೂ ಅವರ ಮಕ್ಕಳು ಮತ್ತು ಶ್ರೀ ಮಾಸ್ತರರ ಪುರೋಹಿತರಾಗಿದ್ದ ಶ್ರೀ ಶ್ರೀನಿವಾಸಾಚಾರ್ಯ ಇವರು ನಮಗೆ ನೆರವಾಗುವರೆಂದು ನಮಗೆ ಶ್ರೀ ಮಾಸ್ತರರು ಹೇಳಿದರು. ಅವರ ಮಾತು ನಿಜವಾಯಿತು. ಬಿಳಗಿಯಲ್ಲಿ ನಮಗೆ ಆಹಾರ ಸ್ವಾಗತ ದೊರೆಯಿತು. ಮಡಗಾಂವಕರ ದಾಸಪ್ಪನವರು ಉತ್ಸಾಹದಿಂದ ಮುಂದೆ ಬಂದರು. ಊರ ಪಟೇಲ ವಯೋವೃದ್ಧ ಶ್ರೀ ಗಣಪತರಾವ್ ಜೈಂದೂರರೂ ಖಾದಿಟೋಪಿ ಧರಿಸಿ ಕಾಂಗ್ರೆಸ್ ಸದಸ್ಯರಾದರು. ಒಂದು ದಿನ ೨೦೦ ಸದಸ್ಯರನ್ನು ಮಾಡಿಯಾಯಿತು. ಬಿಳಗಿಯ ಜನರ ಉತ್ಸಾಹದಿಂದಲೇ ಮುಂದೆ ಹೊನ್ನಾವರದ ಟಪ್ಪಾರ್ ಹಾಲ್‌ನಲ್ಲಿ ಜಿಲ್ಲೆಯ ನಾಯಕರ ಸಭೆಯಾಯಿತು. ಅಲ್ಲಿ ಬಿಳಗಿಯ ಹರಿ ರಾಜವೈದ್ಯ ಮಡಗಾಂವಕರರು ನೆರೆದಿದ್ದ ವಕೀಲರನ್ನು ಹೀಯಾಳಿಸಿ ಮಾತನಾಡಿದರು. ಇದರಿಂದ ನೆರೆದ ವಕೀಲರು ಸದಸ್ಯರಾಗಲು ಮುಂದಾದರು. ಹೊನ್ನಾವರದ ಶ್ರೀ ಎಸ್. ಎಸ್. ಶಾಸ್ತ್ರಿ ವಕೀಲರ ಅಧ್ಯಕ್ಷತೆಯಲ್ಲಿ ಜಿಲ್ಲಾ ಕಾಂಗ್ರೆಸ್ ಸಮಿತಿಯ ಸ್ಥಾಪನೆ ೧೯೨೧ರ ಮಾರ್ಚ್‌ನಲ್ಲಿ ಆಗುವುದು ಸಾಧ್ಯ ಆಯಿತು. ಇದಕ್ಕೆಲ್ಲ ಮೂಲ ಕಾರಣ ಶ್ರೀ ನಾಯಕ ಮಾಸ್ತರರು ನೀಡಿದ ಸೂಕ್ತ ಸಕಾಲಿಕ ಸೂಚನೆ.

* * * * *

೧೯೨೨ರಲ್ಲಿ ತಮ್ಮ ನೌಕರಿ ತ್ಯಜಿಸುವ ಮೊದಲು ಶ್ರೀ ನಾಯಕ ಮಾಸ್ತರರು ಕಾಂಗ್ರೆಸ್‌ನಲ್ಲಿ ಬಹಿರಂಗವಾಗಿ ಕೆಲಸಮಾಡದಿದ್ದರೂ ಕಾರ್ಯಕರ್ತರಿಗೆ ಸಯುಕ್ತಿತವಾದ ಸಲಹೆ ಸೂಚನೆ ಕೊಡುತ್ತಿದ್ದರೂ. ಅವರು ಗೋಖಲೆಯವರ ವಿಚಾರಗಳಿಂದ ಪ್ರಭಾವಿತರಾದವರು. ತಮ್ಮ ನೌಕರಿಯಲ್ಲಿ ಮುಂದುವರಿಯುವ ವಿಚಾರ ಅವರಿಗೆ ಇರಲಿಲ್ಲ. ದೇಶದ ಸರ್ವತೋಮುಖ ವಿಕಾಸಕ್ಕೆ ಕಾರ್ಯಕ್ರಮಗಳನ್ನು ಇಟ್ಟುಕೊಂಡಿರುವ ಸರ್ವೆಂಟ್ಸ್ ಆಫ್ ಇಂಡಿಯ ಸೊಸೈಟಿಯನ್ನು ಸೇರುವ ವಿಚಾರ ಅವರಿಗೆ ಇತ್ತು. ಮುಂದೆ ತಾವು ನೌಕರಿತ್ಯಜಿಸಿ ಚಳುವಳಿಯಲ್ಲಿ ಸೇರಿಕೊಂಡ ಸಂಗತಿ, ಅದಕ್ಕೆ ಕಾರಣೀಭೂತವಾದ ಪ್ರಸಂಗ ಇವುಗಳ ವಿಚಾರ ಬೇರೆಡೆ ಬಂದಿದೆ. ಅವರು ಶಿರಸಿಯ ರಾಷ್ಟ್ರೀಯ ಶಾಲೆಯ ಮುಖ್ಯೋಪಾಧ್ಯಾಯರಾಗಿದ್ದಾಗಲೇ, ಸ್ವಾಮಿ ಧರ್ಮಾನಂದರು ಶಿರಸಿಗೆ ಬಂದರು. ಮಂಗಳೂರಲ್ಲಿ ಶ್ರೀಮತಿ ಸರೋಜಿನಿ ನಾಯ್ಡು ಅವರ ಅಧ್ಯಕ್ಷತೆಯಲ್ಲಿ ನಡೆದ ಪ್ರಾಂತೀಯ ರಾಜಕೀಯ ಪರಿಷತ್ತಿಗೆ ಬಂದ ಈ ತೇಜಸ್ವಿ ಸಂನ್ಯಾಸಿ ಕಾಲ್ನಡೆಯಿಂದಲೇ, ಎಲ್ಲೆಡೆ ಭಾಷಣಮಾಡುತ್ತ, ಶಿರಸಿ

ತಲುಪಲು ಅಲ್ಲಿ ಅವರು ಭಾಷಣಮಾಡಿದರು. ಅದೇ ದಿನ ಗಾಂಧೀಜಿಯ ಬಂಧನದ ವಾರ್ತೆ ಬಂದು ವಾತಾವರಣ ಉದ್ವಿಗ್ನವಾಗಿತ್ತು. ಅದೇ ಸಭೆಯಲ್ಲಿ ಶ್ರೀ ಮಾಸ್ತರರು ಭಾಷಣಮಾಡಿದರು. ಈವರ ವಿಚಾರಧಾರೆ ಗೊಖಲೆ ಪಂಥದ್ದಾಗಿತ್ತು. ಜನರಿಗೆ ಆಡಳಿತದಲ್ಲಿ ಜವಾಬ್ದಾರಿ ನೀಡಬೇಕು, ಎಂಬ ವಿಚಾರ ಒತ್ತಿಹೇಳುತ್ತ, "No taxation without representation" ಎಂಬ ಮಾತನ್ನು ವಿವರಿಸಿ ಅವರ ಭಾಷಣ ಆಗುತ್ತಿತ್ತು. ಮುಂದೆ ಇದೇ ಪ್ರಸಂಗಕ್ಕೆ ಸಂಬಂಧಿಸಿ ಅವರ ಬಂಧನ ಆಯಿತು. ಅವರು ಪತ್ರಿಕೆಗಳಲ್ಲಿ ಬರೆದ ಲೇಖನಗಳ ಬಗ್ಗೆ ಅಧಿಕಾರಿಗಳಿಗೆ ಇದ್ದ ಸಿಟ್ಟು ಬಂಧನಕ್ಕೆ ಮುಖ್ಯ ಕಾರಣ.

* * * * *

ಬೆಳಗಾವಿ ಕಾಂಗ್ರೆಸ್ಸು ಯಶಸ್ವಿಯಾದನಂತರ ಶ್ರೀ ಗಂಗಾಧರರಾವ್ ದೇಶಪಾಂಡೆಯವರು ತಾವೂ ಒಂದು ಆಶ್ರಮ ಸ್ಥಾಪಿಸಬೇಕೆಂಬ ವಿಚಾರದಲ್ಲಿ ಇದ್ದರು. ರಾಜಾಜಿ, ರಾಜೇಂದ್ರ ಬಾಬು ಮುಂತಾದ ನಾಯಕರು ತಮ್ಮ ತಮ್ಮ ಪ್ರಾಂತಗಳಲ್ಲಿ ಆಶ್ರಮಸ್ಥಾಪಿಸಿ ವಿಧಾಯಕ ಕಾರ್ಯಗಳನ್ನು ಮಾಡುತ್ತ ಗ್ರಾಮೀಣ ಜನತೆಯ ಜೊತೆ ಸಂಪರ್ಕ ಸಾಧಿಸುತ್ತಿರಲು ತಾವೂ ಹಾಗೆಮಾಡಬೇಕೆಂಬುದು ಗಂಗಾಧರರಾಯರ ಆಶೆ. ಇಂಥ ಆಶ್ರಮ ನಡೆಸಬಲ್ಲ ಸಮರ್ಥರು ಯಾರು, ಎಂಬ ಪ್ರಶ್ನೆಯನ್ನು ಶ್ರೀ ಗಂಗಾಧರರಾಯರು ಶ್ರೀ ಕಾಕಾ ಕಾಲೇಲ್ಕರರಲ್ಲಿ ಕೇಳಿದರು. ಆಗ ಸಾಬರ್ಮತಿ ಆಶ್ರಮದಲ್ಲಿ ಆಗ ಇದ್ದ ಶ್ರೀ ನಾಯಕ ಮಾಸ್ತರರ ಹೆಸರನ್ನು ಸೂಚಿಸಲಾಯಿತು. "ಯಾರು ಆ ನಾಯಕರು? ಸ್ವಲ್ಪದರಲ್ಲೇ ನನಗೆ ಅವರ ವಿಚಾರ ಹೇಳಿ" ಎಂದು ಶ್ರೀ ಕಾಲೇಲ್ಕರರು ಉತ್ಸುಕತೆಯಿಂದ ಕೇಳಲಾಗಿ, "ಅವರು ರಾಮಕೃಷ್ಣ ಪರಮಹಂಸರ ಹಟವನ್ನೂ ರವೀಂದ್ರನಾಥ ಠಾಕೂರರ ಬುದ್ಧಿವೈಶಾಲ್ಯವನ್ನೂ ಗಾಂಧೀಜಿಯವರ ಕರ್ಮಪ್ರಣಾಲಿಯನ್ನೂ ಹೊಂದಿದವರು," ಎಂದು ತಿಳಿಸಲಾಯಿತು. ಶ್ರೀ ಕಾಲೇಲ್ಕರರು ತೀರ ಕುತೂಹಲಿಯಾಗಿ ಸಾಬರ್ಮತಿಗೆ ಹೋಗಿ ಅಲ್ಲಿ ಶ್ರೀ ಮಾಸ್ತರರ ಪರಿಚಯಮಾಡಿಕೊಂಡರು. ಆಗಿನಿಂದಲೇ ಅವರದೂ ಮಾಸ್ತರರದೂ ಆತ್ಮೀಯ ಸಂಪರ್ಕ, ಅಂತಃಕರಣದ ಸಾಮರಸ್ಯ ಆರಂಭ ಆಯಿತು. ಮುಂದೆ ಶ್ರೀ ಮಾಸ್ತರರು ಶ್ರೀಗಂಗಾದರರಾಯರ ಹೊಸ ಆಶ್ರಮಕ್ಕೆ ಕರೆತರಲ್ಪಟ್ಟರು. ಶ್ರೀ ಮಾಸ್ತರರ ಬಗ್ಗೆ ಪ್ರಥಮ ಪರಿಚಯದಲ್ಲಿಯೇ ನೀಡಲಾದ ಕಲ್ಪನೆ ವೃದ್ಧಿಯಾಗುತ್ತಹೋಯಿತು.

* * * * *

೧೯೩೯ರ ಫೆಬ್ರುವರಿ ೭-೮ರ ಸುಮಾರಿಗೆ ಕಾಂಗ್ರೆಸ್ ಸಮಿತಿ ಸಭೆನಡೆದ ಕಾಲಕ್ಕೆ ಶ್ರೀ ಮಾಸ್ತರರು ಅಲ್ಲಿಗೆ ಹೋಗಿದ್ದರು. ಕರಾಚಿ ಕಾಂಗ್ರೆಸ್ಸಿನಲ್ಲಿ "ಪೂರ್ಣ

ಸ್ವರಾಜ್ಯ"ದ ಠರಾವು, ಮುಂದೆ ಜನವರಿ ೨೬ಕ್ಕೆ ಸ್ವಾತಂತ್ರ್ಯದಿನದ ಆಚರಣೆ, ಇದೆಲ್ಲ ಆದನಂತರ ಮುಂದೇನು? ಎಂದು ಗಾಂಧೀಜಿಗೆ ಕಾರ್ಯಕರ್ತರು ಪ್ರಶ್ನೆ ಕೇಳಿದರು. ಭಾರೀ ಚಳವಳಿ ನಡೆಸುವ ಸಿದ್ಧತೆ ಗಾಂಧೀಜಿಯವರ ಮನಃಪಟಲದಲ್ಲಿ ಆಗ ಆಗುತ್ತಿದ್ದ ಬಗ್ಗೆ ಸುಳಿವು ಪಡೆದು ಶ್ರೀ ಮಾಸ್ತರರು ಉತ್ತರ ಕನ್ನಡಕ್ಕೆ ಮರಳಿದ್ದರು. "ಗಾಂಧೀಜಿಗೆ ಚಳವಳಿಯ ಬಗ್ಗೆ ಬೆಳಕು ಕಂಡಿದೆ. ನಾವೆಲ್ಲ ಈಗ ಸಿದ್ಧರಾಗಬೇಕು", ಎಂದು ಅವರು ನಮಗೆಲ್ಲ ಹೇಳುತ್ತಿದ್ದರು. ಆಶ್ರಮ ಸ್ಥಾಪಿಸಿ, ವಿಧಾಯಕ ಕಾರ್ಯದಲ್ಲಿಯೇ ಮಗ್ನರಾದ ಶ್ರೀ ಗಂಗಾಧರರಾಯರಿಗೆ ಈಗ ಚಳವಳಿ ನಡೆಸಲು ಸಕಾಲವೇ, ಜನ ಸಿದ್ಧರಾಗಿರುವರೇ ಎಂಬ ಬಗ್ಗೆ ಸಂಶಯವಿತ್ತು. ಈ ಬಗ್ಗೆ ಸಮೀಕ್ಷೆ ನಡೆಸಲು ಅವರು ಕೌಜಲಗಿ ಹಣಮಂತರಾಯರ ಜೊತೆ ಮಂಗಳೂರಿನಿಂದ ಮೊದಲುಗೊಂಡು ಸಮೀಕ್ಷಾ ಸಂಚಾರ ಆರಂಭಿಸಿದರು. ಆ ಕಾಲಕ್ಕೆ ಉತ್ತರ ಕನ್ನಡ ಜಿಲ್ಲೆಯಲ್ಲಿ ಜನಜಾಗೃತಿ ಮಾಡಿ, ಶ್ರೀ ಗಂಗಾಧರರಾಯರು ಬಂದಾಗ ಇಲ್ಲಿ ಚಳವಳಿಗೆ ಅನುಕೂಲ ವಾತಾವರಣ ಇದೆ, ಎಂದು ತೋರಿಸುವ ಯತ್ನಮಾಡಲು ನಾವು ಕೆಲವರು ನಿರ್ಧರಿಸಿದೆವು. ಶ್ರೀ ಮಾಸ್ತರರು ಶಿರಸಿ ತಾಲ್ಲೂಕಿನಲ್ಲಿ ಈ ಕೆಲಸ ಮಾಡಲು ಒಪ್ಪಿಕೊಂಡರು. ಶ್ರೀ ಗಂಗಾಧರರಾಯರು ಭಟ್ಕಳ ಮಾರ್ಗವಾಗಿ ಜಿಲ್ಲೆಯನ್ನು ಪ್ರವೇಶಿಸಿದರು. ಶಿರಾಲಿ, ಮುರ್ಡೇಶ್ವರ, ಮಂಕಿ, ಕಾಸರಕೋಡ್‌ಗಳಲ್ಲಿ ಸಭೆಗಳಾದವು. ಹೊನ್ನಾವರದಲ್ಲಿ ಭಾರಿ ಸಭೆ ಆಯಿತು. ಗೆರಸೊಪ್ಪೆ, ಬಿಳಗಿ, ಸಿದ್ದಾಪುರಗಳ ಸಭೆಗಳಿಂದ ಶ್ರೀ ಗಂಗಾಧರರಾಯರು ತೀರ ಉತ್ತೇಜಿತರಾದರು.

ಶಿರಸಿಗೆ ಬರುವಷ್ಟೊತ್ತಿಗೆ ಅವರಲ್ಲಿನ "ಕರ್ನಾಟಕ ಸಿಂಹ" ಕೆರಳಿಬಿಟ್ಟಿದ್ದನೆನ್ನಬೇಕು. ಶಿರಸಿಗೆ ಪ್ರವೇಶಿಸುವ ಮೊದಲು ನೀಲೆಕಣಿಬಳಿ ಸಾವಿರಾರು ಜನರ ಜೊತೆ ಶ್ರೀ ಮಾಸ್ತರರು ಅವರ ಸ್ವಾಗತಕ್ಕೆ ಸಿದ್ಧರಾಗಿದ್ದರು. "ಭಾರತಮಾತಾಕಿ ಜೈ," "ಮಹಾತ್ಮಾಗಾಂಧೀಕಿ ಜೈ," ಎಂದು ಶ್ರೀ ಮಾಸ್ತರರು ಘೋಷಣೆಮಾಡುತ್ತಿರಲು ಶ್ರೀಗಂಗಾಧರರಾಯರು ಕಾರಿನಿಂದ ಕೆಳಕ್ಕೆ ಹಾರಿ, ಜನಜಂಗುಳಿಯನ್ನು ಕಂಡು ಉತ್ಸಾಹಿತರಾಗಿ "ಗಾಂಧಿ ಸರ್ಕಾರ್ ಕೀ ಜೈ" ಎಂದರು. ಶ್ರೀ ಮಾಸ್ತರರು ಭಾವನಾಪರವಶರಾಗಿ ಇದೇ ಘೋಷಣೆ ಮೂಡಿಸಿದರು. ಶ್ರೀಮಾಸ್ತರರ ಸ್ವಭಾವವನ್ನು ಚನ್ನಾಗಿಬಲ್ಲ ನೆರೆದ ಜನರು ಅವರ ಈ ಆವೇಶವನ್ನು ಕಂಡು ಅಚ್ಚರಿಪಟ್ಟರು. ಭಾರಿ ಮೆರವಣಿಗೆ ಶಿರಸಿಗೆ ಬಂತು. ಅಲ್ಲಿ ನಡೆದ ಸಭೆಯಲ್ಲಿ ಶ್ರೀ ಮಾಸ್ತರರು, "ನಮ್ಮ ಜಿಲ್ಲೆಯ ಜನ ಕಾನೂನುಭಂಗಕ್ಕೆ ಈಗಲೇ ಸಿದ್ಧರಾಗಿದ್ದಾರೆ"ಎಂದರು. "ಜನರ ಈ ಸಿದ್ಧತೆಯ ಬಗ್ಗೆ ನನಗೆ ಎಳ್ಳಷ್ಟೂ ಸಂಶಯವಿಲ್ಲ. ಈ ವಿಚಾರ ನಾನು

ಗಾಂಧೀಜಿಗೆ ತಿಳಿಸಿ ಅವರ ಅನುಮತಿ ಖಂಡಿತ ಪಡೆಯುವೆ. ಆ ತನಕ, ಅವರ ಆಜ್ಞೆ ಪಡೆಯದೆ ನೇರ ಚಳವಳಿ ಆರಂಭಿಸಬೇಡಿ", ಎಂದು ಹೇಳುವ ಪ್ರಸಂಗ ಶ್ರೀ ಗಂಗಾಧರರಾಯರಿಗೆ ಬಂತು.

* * * *

ಉತ್ತಮ ಸಾರ್ವಜನಿಕ ವಿಧಾಯಕ ಕಾರ್ಯಕರ್ತರ ಸೃಷ್ಟಿ ನಾಯಕ ಮಾಸ್ತರರ ಅಪೂರ್ವ ಕೊಡುಗೆ. ಅಂಥ ಕೆಲವು ಕಾರ್ಯಕರ್ತರ ಹೆಸರನ್ನಾದರೂ ಇಲ್ಲಿ ಹೇಳಬಹುದು: ಇಮಾಂ ಸಾಹೇಬ್, ಮೊಗಟಾ ವೆಂಕಟರಮಣ ನಾಯಕ, ಬಿ. ಎ, ಭೂಮಾ, ಪುಂಡಲೀಕ ಮತ್ತು ಗೋಪಾಳ ಮಡಗಾವಂಕರ, ಗೋಪಾಳ ಹೆಗಡೆ, ರಾಮಚಂದ್ರ ಭಟ್ಟ, ರಮಾಕಾಂತ ಮಡಗಾಂವಕರ, ರಮಾನಂದ ರಂಗೈನ, ಭವಾನಿ ಬಾಯಿ ಕಾನಗೋಡ, ಬಿ. ಲಕ್ಷ್ಮೀ, ಶಾರದಾ ಗಂಗಾಧರ ನಾಯಕ, ಕಮಲ ಸದಾನಂದ ನಾಯಕ, ಮುಂಬೈ ಕೋರಾಕೇಂದ್ರದ ದತ್ತುಭಾಯಿ ಹಟ್ಟಂಗಡಿ, ವಾಸುದೇವ ಪ್ರಭು ಶ್ರೀಧರ ಕಿಣಿ, ಗೋಪಾಳ ಕಿಣಿ........ನಾಯಕ ಮಾಸ್ತರರ ಜೀವನದೀಪವು ಬೆಳಗಿದ ಜ್ಯೋತಿಗಳು ಇವು.

# ಮದ್ಯಪಾನದ ಕುರಿತು

ಇದ್ದುದನ್ನು ಇದ್ದಂತೆ ಹೇಳಬೇಕಾದರೆ ಅಪಾರ ಪಾಂಡಿತ್ಯದ ಅವಶ್ಯಕತೆಯೇ ಬೇಕೆಂದಿಲ್ಲ. ಅದಕ್ಕೆ ಸ್ಪಷ್ಟ ಆಡುವ ತೆರೆದ ಬಾಯಿಯೊಂದೇ ಸಾಕು. ಮದ್ಯಪ್ರತಿಬಂಧದ ಪ್ರಚಾರಕಾರ್ಯದಲ್ಲಿಯೂ ನಮ್ಮಗಳ ಕರ್ತವ್ಯವೂ ಇದೇ ಆಗಿದೆ. ಆದರೆ ಒಂದು ಮಾತ್ರ ನಿಜ. ಹೇಳಿದುದನ್ನು ನಿಧಾನವಾಗಿ ಕೇಳಿ ಆಳವಾಗಿ ವಿಚಾರಿಸಿ, ಸತ್ಯಾನುಸರಣೆಗೆ ಮುಂದರಿವ ಸಹೃದಯತೆ ಬೇಕು. ಇಂದಿನ ಜನತೆಯಲ್ಲಿ ನಾವು ಕೋರುವ ಪ್ರಗತಿಯೂ ಇದೇ.

ಅಂಧಾನುಕರುಣೆಯಿಂದ ವ್ಯವಹಾರದ ನಿತ್ಯಕಾರ್ಯಗಳಲ್ಲಿ ಸೇರಿಹೋದ ಅದೆಷ್ಟೋ ಕೆಟ್ಟ ಸಂಗತಿಗಳು ಚಿರಪರಿಚಯದಿಂದ ಸಾಧುರೂಪ ಹೊಂದಿ ಇನ್ನೂ ಬದುಕಿಕೊಂಡಿವೆ. ತಿಳಿದೂ ತಿಳಿದೂ ಅವನ್ನು ದೂರ ಮಾಡುವುದು ಅವುಗಳ ತೆಕ್ಕೆಯಲ್ಲಿ ಸಿಕ್ಕಿಹೋದ ವ್ಯಕ್ತಿಗೇನೋ ಸಹಜ ಸಾಧ್ಯವಲ್ಲ. ಆದರೂ ಇದರಿಂದ ಅವುಗಳ ದುಷ್ಪರಿಣಾಮಗಳೇನೂ ಕಡಿಮೆಯಾಗರಲಾರವು. ಪ್ರಗತಿಪರೇಚ್ಛಿ ಪ್ರತಿಯೊಬ್ಬನೂ ಇವುಗಳ ನಿರ್ಮೂಲನಕ್ಕಾಗಿ ನಡುಕಟ್ಟಲೇಬೇಕು. ಈ ಬಗೆಯ ದುಶ್ಚಟಗಳ ಪಂಗಡಕ್ಕೆ ಸೇರಿದ ಮದ್ಯಮಾದಕ ಸೇವನೆಯೂ ಪ್ರಪಂಚದಲ್ಲಿ ಅತೀವ ತ್ಯಾಜ್ಯ ಕರ್ಮವಾಗಿದೆ. ಈ ಕುರಿತು ನಮ್ಮ ಮಾತುಗಳನ್ನಿಲ್ಲಿ ಬರೆಯುವುದಕ್ಕಿಂತಲೂ ವಿಶ್ವದ ಸತ್ಯದೃಷ್ಟಾರರಾದ ವಿಭೂತಿಗಳ ಸಂದೇಶಗಳನ್ನೇ ಉದ್ಧರಿಸಿ ಈ ಮುನ್ನುಡಿಯ ಅಸ್ತಿವಾರವನ್ನು ಕಟ್ಟುವುದು ಹೆಚ್ಚು ಹಿತಕರವೂ ಹೃದ್ಯವೂ ಆಗಿದೆ.

"ಸರಾಯಿ ವಗೈರೆ ಸೇವನೆಮಾಡುವುದು ಯೋಗ್ಯವಲ್ಲ. ಇದರಿಂದ ಬಂಧುಗಳ ಕೇಡಾಗುವದು, ಪಾಪವು ಘಟಿಸುವದು".

**—ಭಗವಾನ್ ಯೇಸುಕ್ರಿಸ್ತರ ಪರಮ ಶಿಷ್ಯರಾದ ಸಂತಪಾಲರು**

Romans X1V 21

"ಸೆರೆ ಸೇಂದಿಗಳು ಸೈತಾನನ ಕೃತಿಗಳು. ಅವನ್ನು ಸರ್ವಥಾ ತ್ಯಜಿಸಿರಿ".

**—ಮಹಾತ್ಮಾ ಮಹಮ್ಮದ ಪೈಗಂಬರರು**

"ಮದ್ಯ ಮಾರುವವರನ್ನು ಜುಗಾರಾಡುವವರನ್ನು ಊರಿಂದ ಹೊರತಳ್ಳಬೇಕು".

**—ಮನುಮಹರ್ಷಿ**

# ಗಾಂಧೀಜಿಯವರ ಪತ್ರಗಳು

ಪ್ರಿಯ ತಿಮ್ಮಪ್ಪ,

ನೀವು ಕೃಷಿ ಕೆಲಸವನ್ನು ಕೈಗೊಳ್ಳುವುದರಲ್ಲಿ ನನಗೇನೂ ನೈತಿಕ ಆಕ್ಷೇಪಣೆಯು ಕಾಣಿಸುವುದಿಲ್ಲ. ನೀವು ಒಂದು ಕಡೆ ಸ್ಥಿರವಾಗಿ ನೆಲಸದೆ ಇರುವ ಸ್ಥಿತಿಯಲ್ಲಿ ಇರುವಾಗ ಅದನ್ನು ಕಾರ್ಯಗತ ಮಾಡುವುದು ಕಠಿಣ. ನೀವು ಈ ಬಗ್ಗೆ ನಿಮ್ಮ ವಿವೇಕವನ್ನೇ ಉಪಯೋಗಿಸಬೇಕು. ನಮ್ಮ ತೀರ್ಮಾನಕ್ಕೆ ಬಾಧಕ ಪರಿಣಾಮ ಬೀರುವ ಸಂಗತಿಗಳೂ ಇರುವ ಸಂಭವವಿದೆ. ಆದ್ದರಿಂದ ನಾನು ನಿಮಗೆ ನಿಶ್ಚಿತ ಉತ್ತರವನ್ನು ಕೊಡಲಾರೆ.

ಜೇಲಿನಲ್ಲಿ ಸಿದ್ಧವಾದ ವಸ್ತುಗಳನ್ನು ಅದರಲ್ಲೂ ಅವನ್ನು ನಾವೇ ಮಾಡಿರುವಾಗ ಕೊಂಡುಕೊಳ್ಳುವುದರಲ್ಲಿ ಏನೂ ತಪ್ಪಿಲ್ಲ.

ನಿಮ್ಮ ವಿಶ್ವಾಸ ಪಾತ್ರ

೧೯-೫-೧೯೩೬ ಮೋ. ಕ. ಗಾಂಧೀ

---

ಸೇವಾಗ್ರಾಮ, ವರ್ಧಾ
೩೧-೮-೧೯೪೧

ಪ್ರಿಯ ತಿಮ್ಮಪ್ಪ,

ಕಿಶೋರಭಾಯಿಗೆ ಬರೆದ ನಿಮ್ಮ ಜುಲೈ ೧೭ರ ಪತ್ರಕ್ಕೆ ಎಂದೋ ಉತ್ತರವನ್ನು ಕೊಡಬೇಕಾಗಿತ್ತು. ಆದರೆ ನನಗೆ ಸಮಯವಿಲ್ಲ, ಆದ್ದರಿಂದ ಇಂಥ ಉತ್ತರಗಳನ್ನು ಕೊಡಲು ಮೇಲಿನಿಂದ ಮೇಲೆ ತಡವಾಗುತ್ತದೆ.

ನಿಜವಾದ ದಾಳಿಯಾದಾಗ ಸವಿನಯ ಕಾಯಿದೆ ಭಂಗವು ಇರುವುದಿಲ್ಲ, ಇಷ್ಟೇ ಅಲ್ಲ, ಯಾರು ಜೇಲಿನಲ್ಲಿರುವರೊ ಅವರೆಲ್ಲರೂ ಬಿಡುಗಡೆ ಹೊಂದುವರು, ಮತ್ತು ಯಾರು ಪ್ರತ್ಯಕ್ಷ ಅಪ್ರತ್ಯಕ್ಷ ರೀತಿಯಿಂದ ಯುದ್ಧ ಮಾಡುವುದಿಲ್ಲವೋ ಅವರನ್ನು ಜೇಲಿಗೆ ಕಳುಹಿಸಲಾಗುವುದು. ಯುದ್ಧದಲ್ಲಿ ಭಾಗ ತೆಗೆದುಕೊಳ್ಳದವರನ್ನು ಜೇಲಿಗೆ ಹಾಕಿದ ಪಕ್ಷದಲ್ಲಿ ಅದೊಂದು ಅಹಿಂಸೆಯ ಕೊಡುಗೆ. ಯಾಕೆಂದರೆ ಯಾರಿಗೆ ಹಿಂಸೆಯಲ್ಲಿ ವಿಶ್ವಾಸವಿಲ್ಲವೋ ಅವರು ಯುದ್ಧದಲ್ಲಿ ಎಂದೂ ಭಾಗವಹಿಸಲಾರರು.

ನಾವೆಲ್ಲರೂ ಹೊರಗೆಬರುವೆವು. ಮತ್ತು ನಮ್ಮ ಸಂಖ್ಯೆಯು ಸಾಕಷ್ಟು ದೊಡ್ಡದಿದೆ ಎಂದು ತಿಳಿಯೋಣ. ನಾವು ಸ್ವಲ್ಪ ಜನರಿದ್ದು ಅಹಿಂಸಾತ್ಮಕ ಪ್ರತಿರೋಧವನ್ನು ಮಾಡುವುದಾಗದಿದ್ದರೆ ನಾವು ಸುಮ್ಮನೆ ಕುಳಿತು ಪ್ರಾರ್ಥಿಸೋಣ. ಇದೆಲ್ಲವೂ ಒಂದು ಊಹೆ. ನಿಜವಾದ ಸಮಯ ಬಂದಾಗ ಉಪಾಯವು ತಾನಾಗಿ ಹೊಳೆಯುವುದು. ಸತ್ಯಾಗ್ರಹದಲ್ಲಿ ಆಳವಾಗಿ ವಿಚಾರಮಾಡಿದ ಯೋಜನೆಗಳೇನೂ ಇರುವುದಿಲ್ಲ.

ಈ ಉತ್ತರಗಳಿಂದ ನಿಮಗೆ ಸಮಾಧಾನವಾಗದಿದ್ದರೆ ಪುನಃ ಬರೆಯಿರಿ.

ನಿಮ್ಮ ವಿಶ್ವಾಸಪಾತ್ರ
ಮೋ. ಕ. ಗಾಂಧೀ

SEVAGRAM
Via WARDHA, C.P.

31-8-41

Dear Timmappa

Your letter to K.bhai of 17th July should have been answered long ago. But I have no time & therefore such answers are often delayed.

When the real invasion takes place there will be not only be no C.D. but those who are in prison will

೧೯೪೧ರಲ್ಲಿ ಗಾಂಧೀಜಿ ನಾಯಕ ಮಾಸ್ತರರಿಗೆ ಬರೆದ ಪತ್ರಗಳಲ್ಲಿ ಒಂದು. ನಾಲ್ಕು ಹಾಳೆಗಳಲ್ಲಿ ಇದೆ. ಇದರ ಕನ್ನಡ ಭಾಷಾಂತರ ಹಿಂದಿನಪುಟದಲ್ಲಿ ಕೊಟ್ಟಿದೆ.

be discharged or those
who don't fight directly
or indirectly will be
imprisoned. In the
latter case the im-
prisonment will
be ahimsa's contri-
bution. For those who
have no faith in
violence will never
take part in it.

Assuming that
we are all out and
are respectable
members, we will

there can be no deep-
laid plans.
If the answers do
not satisfy you,
you will write again
Yours
Bapu

“ಡಿಯರ್ ತಿಮ್ಮಪ್ಪ” ಎಂದು ಆರಂಭವಾಗಿ “ಬಾಪು” ಎಂದು ಪತ್ರ ಮುಗಿದಿದೆ. ಪಡಿಯಚ್ಚುಗಳು ಗಾಂಧೀ ಸ್ಮಾರಕ ನಿಧಿ, ಬೆಂಗಳೂರು ಇವರ ಕೃಪೆ.

# ಭಾರತದ ನವನಿರ್ಮಾಣ ಗಾಂಧೀಜಿ :

ತಿಮ್ಮಪ್ಪ ನಾಯಕ; ಪ್ರಕಾಶಕರು : ಕರ್ನಾಟಕ ಸರ್ವೋದಯ ಸಾಹಿತ್ಯ ಸಮಿತಿ, ಗಾಂಧೀಭವನ, ಬೆಂಗಳೂರು–೧ ಬೆಲೆ : ರೂ. ೨

ವಿಮರ್ಶೆ : ಕೆ. ಎಸ್. ನಾರಾಯಣಸ್ವಾಮಿ

ಕನ್ನಡದ ಜನ ಗಾಂಧೀಜಿಯನ್ನು ನೆನೆದಾಗಲೆಲ್ಲ ನಾಯಕ ಮಾಸ್ತರರನ್ನು ಸಹಜವಾಗಿ ಸ್ಮರಿಸಿಕೊಳ್ಳುತ್ತಾರೆ. ಆ ಮಹಾಜೀವದ ಅತಿ ಸಮೀಪದ ಪ್ರತಿಧ್ವನಿ ಯಂತಿದ್ದ ಮಾಸ್ತರರ ಸಾನಿಧ್ಯವನ್ನನುಭವಿಸಿದವರಿಗೆ ಆ ವಿನಯಶೀಲ ತಪಸ್ವಿ ಎಂಥ ಸಾತ್ವಿಕ ತೇಜಸ್ಸನ್ನು ಗಳಿಸಿದ್ದರು, ಎಂದು ಅರಿವಾಗುತ್ತಿತ್ತು. ಗಾಂಧೀ ವಿಚಾರ ಮಾರ್ಗದ ಮೂಲ ಮೌಲ್ಯಗಳ ನಾಡಿಹಿಡಿದವರು ವಿರಳ. ಅದರಂತೆ ಬಾಳಿದವರು ಮತ್ತೂ ಅಪರೂಪ. ನಾಯಕ ಮಾಸ್ತರರ ಸರಳ ಸಜ್ಜನಿಕೆ ಗಾಂಧೀ ಬಳಗದ ಅಮೂಲ್ಯ ನಿಧಿಯಾಗಿತ್ತು. ಅವರೊಡನೆ ನಾಲ್ಕು ನಿಮಿಷ ಕಳೆದರೆ ಯಾವುದೋ ಊರ್ಧ್ವಮುಖ ಬೆಳಕು ಮೂಡಿದಂತೆ ಭಾಸವಾಗುತ್ತಿತ್ತು. ಯಾವ ಕನಸುಗಳು ಅಹಿಂಸಾತ್ಮಕ ಸತ್ಯನಿಷ್ಠ ಸ್ವಾತಂತ್ರ್ಯಯೋಧರ ಅಂತಃಪ್ರೇರಣೆಯಾಗಿ ನಿಸ್ಸೀಮ ತ್ಯಾಗ ಬಲಿದಾನಗಳಿಗಣಿಮಾಡಿದವೋ ಅವರ ನಿಚ್ಚಳ ವ್ಯಾವಹಾರಿಕ ಸ್ವರೂಪ ಅನೇಕ. ಅಗ್ರಗಣ್ಯ ನಾಯಕರಿಗೂ ನಿಲುಕದ ಕ್ಷಿತಿಜವಾಗಿ ದೂರದೂರ ಸರಿದುಹೋಯಿತು. ಆದರೆ ಯಾರಲ್ಲಿ ಗಾಂಧೀ ಜೀವನಮೌಲ್ಯಗಳು ಆತ್ಮ ಭೂಯಿಷ್ಠವಾಗಿ, ಅಚಲವಾಗಿ, ಆನಂದದಾಯಕವಾಗಿ ನೆಲೆಗೊಂಡಿದ್ದವೋ ಅವರ ಜೀವನದೃಷ್ಟಿ ಸರ್ವೋದಯದ ವ್ಯಾವಹಾರಿಕ ಪಥವನ್ನು ಅನಾವರಣ ಮಾಡಿತು. ಗಾಂಧೀಜಿ ನಂತರ ವಿನೋಬಾ ಈ ಮಂಗಳಕರ ಬೆಳವಣಿಗೆಯ ಅಧ್ವರ್ಯುವಾಗಿ ಅಖಂಡ ಸಾಧನೆಯಲ್ಲಿ ತೊಡಗಿದರು. ಅದಕ್ಕೆ ಮಾರ್ದನಿಸಿದ ಅನೇಕ ಶ್ರೇಷ್ಠ ಚಿಂತಕರಲ್ಲಿ ದಿ॥ ತಿಮ್ಮಪ್ಪ ನಾಯಕರು ಅವಿಸ್ಮರಣೀಯರು. ಸದಾ ಯಾವುದಾದ ರೊಂದು ಹೊಸ ಚಿಂತನಧಾರೆಯ ಮನನದಲ್ಲೇ ತೊಡಗಿರುತ್ತಿದ್ದ ನಾಯಕ ಮಾಸ್ತರರು ಗಾಂಧೀ ವಿಚಾರಮಾರ್ಗಕ್ಕನುಗುಣವಾದ ಪಾಶ್ಚಾತ್ಯ ಪೌರ್ವಾತ್ಯ ವಿಚಾರವೇತ್ತರ ಸಾರಗ್ರಹಣ ಮಾಡಿದ್ದರು. ಅವರ ಕೃತಿ "ಭಾರತದ ನವ ನಿರ್ಮಾಣ ಗಾಂಧೀಜಿ" ಈ ಆಳವಾದ ಅಭ್ಯಾಸಕ್ಕೆ ಸಾಕ್ಷಿ.

ಗಾಂಧೀಜಿಯ ನಿಕಟಾನುವರ್ತಿ ಆಚಾರ್ಯ ಕಾಕಾ ಕಾಲೇಲ್ಕರರು ಈ ಪುಸ್ತಕಕ್ಕೆ ಆಶೀರ್ವಚನ ಬರೆದು "ಗಾಂಧೀ ಮಾರ್ಗವನ್ನು ಅರಿತುಕೊಂಡು ಆ ಮಾರ್ಗದಲ್ಲಿ

ಮುಂವಡಿಯಿಡುವ ದೃಢಸಂಕಲ್ಪ ಕೈಗೊಂಡು, ಯಶಸ್ಸು ಸಿಗಲಿ, ಸಿಗದಿರಲಿ ಹಿಡಿದ ಮಾರ್ಗ ಬಿಡತಕ್ಕದಲ್ಲ ಎಂಬ ನಿಶ್ಚಯದಿಂದ ಜೀವನಕ್ರಮವನ್ನು ರೂಪಿಸಿಕೊಂಡ ಕೆಲವೇ ನಿಷ್ಠಾವಂತ ಗಾಂಧೀ ಮಾರ್ಗಾನುಯಾಯಿಗಳಲ್ಲಿ ಶ್ರೀ ತಿಮ್ಮಪ್ಪ ನಾಯಕರ ಹೆಸರನ್ನು ತೆಗೆದುಕೊಳ್ಳಲೇ ಬೇಕಾಗುತ್ತದೆ. ನಮ್ಮ ದೇಶದಲ್ಲಿ ಗಾಂಧೀ ಯುಗ ಪ್ರಾರಂಭವಾದಂದಿನಿಂದ ಶ್ರೀ ನಾಯಕರು ಗಾಂಧೀ ಸೇನೆ ಸೇರಿದವರು," ಎಂದಿದ್ದಾರೆ. ಕೃತಿವಿಮರ್ಶೆ ಮಾಡುತ್ತಾ, "ಶ್ರೀ ನಾಯಕರು ಗಾಂಧೀಜಿಯ ಮಾತುಗಳನ್ನೇ ಮಂಡಿಸಿದ್ದರೂ ಒಂದು ಕಲಾತ್ಮಕ ಗುಚ್ಛವನ್ನವರು ನಿರ್ಮಾಣ ಮಾಡಿದ್ದರು. ಅನೇಕ ಶಂಕೆಗಳು ಅಪೂರ್ಣ ಜ್ಞಾನದ ಮೂಲಕ ಉಂಟಾದ ತಪ್ಪು ತಿಳಿವಳಿಕೆಗಳು ನಿವಾರಣೆಯಾಗುವ ರೀತಿಯಲ್ಲಿ ಶ್ರೀ ನಾಯಕರು ಸಂಕಲನ ಮಾಡಿದ್ದಾರೆ. ಇದರಲ್ಲಿ ಕೌಶಲ್ಯವಿದೆ. ರಚನಾ ಚಾತುರ್ಯವಿದೆ" ಎಂದು ನುಡಿದಿದ್ದಾರೆ. ವಯೋವೃದ್ಧರೂ ಜ್ಞಾನವೃದ್ಧರೂ ಗಾಂಧೀ ವಿಚಾರಮಾರ್ಗದ ಅದ್ವಿತೀಯ ವ್ಯಾಖ್ಯಾನಕಾರರೂ ಆದ ಶ್ರೀ ಕಾಲೇಲ್ಕರರ ಈ ಮೆಚ್ಚಿಗೆಯ ಮಾತುಗಳು ಕೃತಿಯ ಗುಣಕ್ಕೆ ಕನ್ನಡಿಯಂತಿವೆ.

ಮತ್ತೊಬ್ಬ ತಪಸ್ವಿ ಅಪ್ಪಾಸಾಹಿಬ್ ಪಟವರ್ಧನ ಅವರೂ ಇದಕ್ಕೆ ಧ್ವನಿಗೂಡಿಸಿ "ನಾವಿಬ್ಬರೂ ಒಂದೇ ಸ್ಫೂರ್ತಿಚಿಲುಮೆಯಿಂದ ಪ್ರೇರಣೆ ಪಡೆದೆವು. ಹೀಗಿದ್ದೂ ನಾಯಕರು ನನ್ನ ಕಾರ್ಯದಲ್ಲಿ ಸಂಗಾತಿಯಾಗಿದ್ದು ಅವರಿಂದ ನನಗೆ ಆಶ್ವಾಸನೆ ಸಿಗುತ್ತ ಬಂದಿದೆ," ಎಂದು ಬರೆದಿದ್ದಾರೆ.

ಗಾಂಧೀಜಿಯೊಡನೆ ಗಾಂಧಿಯುಗ ಪರಿಸಮಾಪ್ತಿಯೆಂದು ಬಿಟ್ಟಿದ್ದರೆ ಮತ್ತೆ ಅವರ ನುಡಿಗಳನ್ನು ಮೆಲುಕು ಹಾಕುವ ಆಗತ್ಯವಿರುತ್ತಿರಲಿಲ್ಲ. ಆದರೆ ಗಾಂಧೀಯುಗ ಎಂದರೆ ಕೇವಲ ವಿಚಾರ ಸ್ಫೋಟವಲ್ಲ. ಜಗತ್ತಿನ ವ್ಯಾವಹಾರಿಕ ಅಂಗ ರಚನೆಯನ್ನು ಅತಿಸೂಕ್ಷ್ಮ ಅಹಿಂಸಕ ಶಸ್ತ್ರಚಿಕಿತ್ಸೆಗಳಿಂದ ಶುದ್ಧಿಗೊಳಿಸಿ ಒಂದು ಸೃಜನಾತ್ಮಕ, ನೀತಿಪ್ರಧಾನ, ಮಾನವೀಯ ಅಡಿಪಾಯದ ಮೇಲೆ ಪುನರ್ರಚಿಸಿಕೊಳ್ಳುವುದೇ ಗಾಂಧಿಯುಗ ಪ್ರವರ್ತನೆ. ಒಂದು ನೇಮಕ ಚೌಕಟ್ಟಿನಲ್ಲಿ ಪ್ರತಿಭಾವಂತ ವಿಜ್ಞಾನಿಯಂತೆ ಆತ್ಮದ್ಭುತಶಕ್ತಿ ಸಂಚಯನದ ಮೂಲಗಳನ್ನು ಸಂಶೋಧಿಸಿದ ಕೀರ್ತಿ ಗಾಂಧೀಜಿಯದು. ಸತ್ಯಾಗ್ರಹ ಸಮರ ಮತ್ತು ಭಾರತದ ಸ್ವಾತಂತ್ರ್ಯ ಸಾಧನೆ ಜಗತ್ತಿನ ಇತಿಹಾಸದಲ್ಲೇ ನೂತನಪಥ. ರಾಜಕೀಯ, ಆರ್ಥಿಕ, ಸಾಮಾಜಿಕ ಸಾಂಸ್ಕೃತಿಕ ಸಂಸ್ಥಾರಚನೆಗಳೆಲ್ಲ ಇನ್ನು ಮುಂದೆ ಅಹಿಂಸಾತ್ಮಕವಾಗುವುದು ಅನಿವಾರ್ಯ. ಮಾನವನ ಮಾನವೀಯತೆ ಯಾವ ದಬ್ಬಾಳಿಕೆಯ ಹಿಂಸಾಚಾರಕ್ಕೂ ಮಣಿಯದೆ ಶೋಷಣೆಯಿಂದ ಪಾರಾಗಿ ಕಟ್ಟಕಡೆಯ ಮನುಷ್ಯಜೀವಿ ಆತ್ಮವಿಶ್ವಾಸದಿಂದ ತುಂಬು ಬಾಳನ್ನೂ ಬಾಳಲು ಈಗ ಜಗತ್ತಿನ ಮುಂದಿರುವ ಪ್ರಭಾವಯುತ ಮಾರ್ಗ

ಅಹಿಂಸಾ ಮಾರ್ಗ. ಇದನ್ನು ಸಿದ್ಧಮಾಡಿಕೊಟ್ಟವರು ಗಾಂಧೀಜಿ. ಆದ್ದರಿಂದ ಇದು ಗಾಂಧೀಯುಗ. ಈ ಅಂಶ ಪದರಪದರವಾಗಿ ಶ್ರೀ ನಾಯಕ ಮಾಸ್ತರರ ಪುಸ್ತಕದಿಂದ ಸ್ಪಷ್ಟವಾಗುತ್ತ ಸಾಗಿದೆ. ಅಣುಶಕ್ತಿ ಆತ್ಮಶಕ್ತಿಗಳು ಪರಸ್ಪರ ಪೂರಕವೋ ಮಾರಕವೋ ಎಂಬ ಜಟಿಲ ಪ್ರಶ್ನೆ ಮಾನವ ಕುಲದ ಮುಂದೆ ಈ ಶತಮಾನ ಒಡ್ಡಿರುವ ಯಕ್ಷಪ್ರಶ್ನೆ. ಅವ್ಯವಸ್ಥೆಯ ಗೋಜಿನಲ್ಲಿ ಸಿಕ್ಕಿ ಹೋಗಿರುವ ಒಂದೊಂದು ಕ್ಷೇತ್ರವನ್ನೂ ತಾಳ್ಮೆಯಿಂದ ಬಿಡಿಸಿ ನೈತಿಕತೆಯ ಮೂಲಾಧಾರದ ಮೇಲೆ ನಿಲ್ಲಿಸುವ ಪ್ರಯತ್ನ ಮಾಡದೆ ವಿಧಿಯಿಲ್ಲ.

ನಾಯಕ ಮಾಸ್ತರರು ಹೆಜ್ಜೆಹೆಜ್ಜೆಯಾಗಿ ಗಾಂಧೀ ವಿಚಾರದೆಡೆಗೆ ಆಧುನಿಕ ತರ್ಕಶಾಸ್ತ್ರಿಗಳನ್ನು ಕೊಂಡೊಯ್ಯುವ ಸಾಹಸ ಮಾಡಿದ್ದಾರೆ. ಅನೇಕ ಪಾಶ್ಚಾತ್ಯ ವಿಚಾರವೇತ್ತರನ್ನು ಉದಾಹರಿಸಿ ವಾದಕ್ಕೆ ಪುಷ್ಟಿಕೊಟ್ಟಿದ್ದಾರೆ. ಗಾಂಧೀ ವಿಚಾರ ಕೇವಲ ಗೊಡ್ಡು ವೇದಾಂತವಾಗಿ ಪರಿಣಮಿಸಬಾರದು. ಈ ನಿಮಿಷದಲ್ಲಿ ಯಾವ ಸಮಸ್ಯೆಗಳನ್ನು ಕುರಿತು ಮಾನವ ಸಮಾಜ ಆಲೋಚಿಸುತ್ತಿದೆಯೋ ಅದೇ ಸಮಸ್ಯೆಗಳಿಗೆ ತರ್ಕಬದ್ಧ ವಿಜ್ಞಾನ ದೃಷ್ಟಿಯ ನಿಜವಾದ ಕ್ಷಕಿರಣವನ್ನು ಹಾಯಿಸಿದಾಗ ಗಾಂಧೀಜಿಯ ಅನೇಕ ಮಾತುಗಳು ನಮಗೆ ಅತ್ಯಂತ ವ್ಯಾವಹಾರಿಕವೆನಿಸುತ್ತವೆ. ಅದು ಸಮಾಜವಾದದ ಚರ್ಚೆಯಾಗಿರಲಿ, ಶೈಕ್ಷಣಿಕ ಪುನರ್ರಚನೆಯ ವಿಷಯವಾಗಲಿ, ಅರ್ಥಶಾಸ್ತ್ರದ ಜಟಿಲ ಪ್ರಶ್ನೆಗಳಾಗಿರಲಿ, ಕುಟುಂಬ ಯೋಜನೆ, ನೈಸರ್ಗಿಕ ಚಿಕಿತ್ಸೆಗಳಂತಹ ನೇರ ಸರಳ ವಿಚಾರಗಳಾಗಲಿ ಗಾಂಧೀನುಡಿಗಳು ಗಂಟೆ ಹೊಡೆದಂತೆ ನಿಖರವಾಗಿ ಪ್ರಖರವಾಗಿ ಪ್ರಯೋಗ ನಿಶ್ಚಿತ ಪ್ರಣಾಳಿಕೆಗಳಾಗಿ ನಮ್ಮ ಮುಂದೆ ನಿಲ್ಲುತ್ತವೆ. ನಾವು ಸಾಗಿರುವ ದಿಕ್ಕು ಇದಕ್ಕೆ ತೀರ ವಿರೋಧವಾಗಿದೆ ಎಂದು ಮನದಟ್ಟುಮಾಡಿಕೊಡುವ ಪ್ರಯತ್ನದಲ್ಲಿ ನಾಯಕ ಮಾಸ್ತರರು ಯಶಸ್ವಿಯಾಗಿದ್ದಾರೆ.

ಅಷ್ಟಕ್ಕೆ ಅವರು ನಿರಾಶಾವಾದಿಗಳಾಗಿ ಚಿಂತನ ಮಾರ್ಗವನ್ನು ನಿರಾಕರಿಸಿಲ್ಲ. ನಾವು ಸಮಾಜವಾದ ಸಾಧಿಸಲು, ಪ್ರಜಾಪ್ರಭುತ್ವವನ್ನು ರೂಢಿಸಿಕೊಳ್ಳಲು, ಶಿಕ್ಷಣ ಯೋಜನೆಗಳನ್ನು ರೂಪಿಸಲು, ಅರ್ಥನೀತಿಯನ್ನು ಪರಿವರ್ತಿಸಲು, ಜೀವನ ದೃಷ್ಟಿಯನ್ನು ಪರಿಷ್ಕರಿಸಿಕೊಳ್ಳಲು ಇಗೋ ಇಲ್ಲಿದೆ ನಿಶ್ಚಿತ ಮಾರ್ಗದರ್ಶನ, ಎಂದು ಗಾಂಧೀಜಿಯ ಮಾತುಗಳನ್ನು ಎತ್ತಿತೋರಿಸಿದ್ದಾರೆ.

ಸಮಾಜವಾದವಾದರೋ ಒಂದು ಪವಿತ್ರವಿಚಾರ, ಒಂದು ಧರ್ಮ ವಿಚಾರ; ಆದುದರಿಂದ ಪವಿತ್ರ ಸಾಧನಗಳಿಂದಲೇ ಅದನ್ನು ಸ್ಥಾಪಿಸಲು ಸಾಧ್ಯ. ನಿಂದೆ ಮತ್ತು ಮಿಥ್ಯಾಚಾರಗಳಿಂದ ಸಮತೆಯನ್ನೂ ಬಂಧುಭಾವವನ್ನೂ ಸಮಾಜದಲ್ಲಿ ಸ್ಥಾಪಿಸುವ ಹವಣಿಕೆ ಕೇವಲ ಹುಚ್ಚು ಹವ್ಯಾಸ....ಪರಕೀಯ ಸತ್ತೆಯ ವಿಷಯದಲ್ಲಿ ಹೇಗೆ ಸತ್ಯಾಗ್ರಹಕ್ಕೆ ಸ್ಥಾನವಿದೆಯೋ ಹಾಗೆಯೇ ಇಂಥ ಶ್ರೀಮಂತ ವಿಷಯದಲ್ಲೂ ಸತ್ಯಾಗ್ರಹ ಅವಶ್ಯವಾಗುತ್ತದೆ....ಆತ್ಮಕ್ಲೇಶದಿಂದ ಸತ್ಯಕ್ಕಾಗಿ ತಾನು ಕಷ್ಟ ಸಹನೆ ಮಾಡಿ ಎದುರಾಳಿಯ ವಿವೇಕವನ್ನೂ ಜಾಗೃತಗೊಳಿಸುವುದು; ಅವನಲ್ಲಿ ಸದ್ಭಾವನೆ

ಗಳನ್ನೂ ಜಾಗೃತಗೊಳಿಸುವುದು....ಭಾವಾತ್ಮಕ (ಪಾಸಿಟಿವ್) ಸತ್ಯಾಗ್ರಹದ ಹಿನ್ನೆಲೆ ಯಿದ್ದರೆ ಮಾತ್ರ ಅಹಿಂಸಾತ್ಮಕ ಅಸಹಕಾರವು ನಿಜವಾಗಿಯೂ ಪ್ರೇಮಮಯ ಅಸಹಕಾರವೆನಿಸುವುದು. ಶುದ್ಧ ಸತ್ಯಾಗ್ರಹವಾಗುವುದು....ಜನತೆಯಲ್ಲಿ ಆತ್ಮಶಕ್ತಿಯ ಅರಿವೇ ಕ್ರಾಂತಿಯ ಬೀಜಮಂತ್ರ...ಸುರಾಜ್ಯವು ಸ್ವರಾಜ್ಯಕ್ಕೆ ಸಾಟಿಯಾಗಲಾರದು. ಬೃಹತ್ ಔದ್ಯೋಗೀಕರಣ ಮತ್ತು ಸೈನೀಕರಣ ಇವೆರಡೂ ಆಸುರೀಭೋಗ ಲಾಲಸೆಯ ಅವಳಿಜವಳಿಗಳು. ಅಹಿರಾವಣ-ಮಹಿರಾವಣರಂತೆ....ಶಾಲೆ ವಿದ್ಯಾರ್ಥಿ ಗಳಲ್ಲಿ ಸಾಮೂಹಿಕ ಜೀವನವನ್ನು ಅರಳಿಸುವ ಸಂಸ್ಥೆ, ಸ್ವಾವಲಂಬೀ ಸಹಕಾರಿ ಗ್ರಾಮಜೀವನದ ಪ್ರತಿಬಿಂಬ....ಮಿಕ್ಕ ರಾಷ್ಟ್ರಗಳ ವಿಷಯವೇನೇ ಇರಲಿ; ನೂರರಲ್ಲಿ ಎಂಬತ್ತುಜನ ಒಕ್ಕಲುತನದ ಮೇಲೆ ಅವಲಂಬಿಸಿರುವವರು ಇರುವ ನಮ್ಮ ಭಾರತದಲ್ಲಿ ಕೇವಲ ಪುಸ್ತಕೀ ಶಿಕ್ಷಣ ಮಕ್ಕಳಿಗೆ ಕೊಟ್ಟು ಅವರನ್ನು ಶರೀರಶ್ರಮಕ್ಕೆ ಅಸಮರ್ಥರನ್ನಾಗಿ ಮಾಡುವುದು ಅಪರಾಧ....ವಿಜ್ಞಾನವು ಸಿರಿವಂತರ ಅರಮನೆ ಗಳನ್ನು ಬಿಟ್ಟು ಬಡವರ ಗುಡಿಸಿನಲ್ಲ ಬೆಳೆದು ಬರಬೇಕು. ..ಔದ್ಯೋಗಿಕ ತಂತ್ರಗಳು ಉತ್ಪಾದನಾ ಸಾಧನಗಳನ್ನು ದುಡಿಮೆಗಾರನಿಂದ ಕಸಿದು ಬಂಡವಾಳದ ಅಡಿಯಾ ಳನ್ನಾಗಿ ಮಾಡಿವೆ.....ಬಂಡವಾಳಶಾಹಿಯಾಗಲಿ ಸಾಮ್ಯವಾದೀ ರಾಜ್ಯಶಕ್ತಿಯಾಗಲಿ ಎರಡು ಕೇಂದ್ರೀಕರಣದ ಉಪಾಸಕರು. ಇದರ ಕ್ರಮಪ್ರಾಪ್ತ ಪರಿಣಾಮ ಕೋಟಿ ಕೋಟಿ ಜನರ ಜೀವನಸೂತ್ರಗಳು ಕೆಲವೇ ಜನರ ಕೈಯಲ್ಲಿ. ಯಾಂತ್ರೀಕರಣದ ವಿಪ ರೀತ ಬಡಾವಣೆಯಿಂದ ನಿರುದ್ಯೋಗ ಅನಿವಾರ್ಯ....ಬಡವರ ಕ್ರಿಯಾಶಕ್ತಿ ಗ್ರಾಮ ದ್ಯೋಗಗಳಿಂದ ಮಾತ್ರವೇ ಬೆಳೆದೀತು. ಅದರಿಂದಲೇ ನಿಜವಾದ ರಾಷ್ಟ್ರಸಂಪತ್ತು ವೃದ್ಧಿಯಾದೀತು.....ಆಧುನಿಕ ಸಮಾಜವು ನೀತಿಪ್ರಜ್ಞೆಯನ್ನು ಸಂಪೂರ್ಣವಾಗಿ ದುರ್ಲಕ್ಷಿಸಿ ನಡೆದಿದೆ.....ಭೂಮಿಯು ಸವಕಳಿ ಒಂದೇ ಸಮನೆ ಸಾಗಹತ್ತಿದರೆ ರಾಷ್ಟ್ರ ವಿನಾಶವು, ಸಂಸ್ಕೃತಿ ವಿನಾಶವು ನಿಶ್ಚಿತ....ಸಂಯಮವೇ ಸಂಸ್ಕೃತಿಯ ಪ್ರಾಣ. ಸ್ವಚ್ಛಂದದಿಂದ ಸರ್ವನಾಶ, ಇದು ಶಾಶ್ವತ ಸನಾತನ ತತ್ತ್ವ.

ಇಂಥ ಸೂತ್ರ ವಾಕ್ಯಗಳ ಸರಣಿ ಗ್ರಂಥದ ಆಧಾರಭೂತ ಹಂದರವಾಗಿ ನಿಂತಿದೆ. ಗಾಂಧೀಜಿಯ ಅನುಕರಣೀಯ ಸರಳತೆಯ ಛಾಯೆ ನಾಯಕ ಮಾಸ್ತರರ ಸಂಕಲನದು- ದ್ದಕ್ಕೂ ಹರಿದುಬಂದಿದೆ. ಪ್ಯಾರೇಲಾಲರ ಗ್ರಂಥಗಳನ್ನೇ ಹೆಚ್ಚು ಆಧರಿಸಿದ್ದರೂ ರಿಚರ್ಡ್‌ಗ್ರೇಗ್, ಆಲ್ಡಸ್ ಹಕ್ಸಲಿ, ರವೀಂದ್ರನಾಥ ಠಾಕೂರ, ಶ್ರೀಮನ್ನಾರಾಯಣ, ಜಯಪ್ರಕಾಶ ನಾರಾಯಣ, ಮುಂತಾದವರ ಬರಹಗಳಿಂದ ವಿಷಯ ಸಂಗ್ರಹಿಸಿ ಭಾಷಾಂತರಿಸಿದ್ದಾರೆ. ಮಾಸ್ತರರು ಹುಟ್ಟು ಅಧ್ಯಾಪಕ ಮನೋಧರ್ಮದವರು. ಒಂದೂ ತರ್ಕಬದ್ಧ ಸಮಂಜಸತೆ ಅವರ ಆಯ್ಕೆಯಲ್ಲಿ ಸ್ಫುಟವಾಗಿದೆ. ನುಡಿಗಟ್ಟಿನಲ್ಲಿ ಅಲ್ಲಲ್ಲಿ ಶಿಥಿಲತೆ ತೋರಿದರೂ ಮೂಲ ವೈಚಾರಿಕ ಕ್ರಮಬದ್ಧತೆಗೆ ಎಲ್ಲೂ ಲೋಪ ವಿಲ್ಲ. "ಭಾರತದ ನವನಿರ್ಮಾಣ-ಗಾಂಧೀಜಿ" ಈ ಪುಟ್ಟಗ್ರಂಥ ಕನ್ನಡದ ಸಂತಪುರುಷ ರೊಬ್ಬರು ಕಂಡ ಗಾಂಧೀ ಪ್ರತಿಮೆಯಾಗಿ ಚಿರಕಾಲ ಸಾಧಕರಿಗೆ ಸತ್ವಪೂರ್ಣ ಮಾರ್ಗದರ್ಶನ ನೀಡುತ್ತಿರುತ್ತದೆ.

# ಧರ್ಮಸಮನ್ವಯದರ್ಶನ:

**ತಿಮ್ಮಪ್ಪನಾಯಕರು ; ಪ್ರಕಾಶಕರು : ಭೂದಾನಕಾರ್ಯಾಲಯ,**

**ಪೋ. ಕಡೊಲಿ, ಜಿ. ಬೆಳಗಾವ್ ; ಪುಟ : ೪೦೦**

**ಮೂಲ್ಯ : ಸಾದಾಪ್ರತಿ= ಐದು ರೂಪಾಯಿಗಳು;ಕ್ಯಾಲಿಕೋಪ್ರತಿ =ಏಳು ರೂ.ಗಳು**

**ವಿಮರ್ಶೆ : ವರದದೇಶಿಕಾಚಾರ್ಯ ರಂಗಪ್ರಿಯ**

ವಿಶ್ವದಲ್ಲಿನ ಚೇತನಾಚೇತನರೂಪವಾದ ಎಲ್ಲ ಪದಾರ್ಥಗಳನ್ನು ಯಾವ ಒಂದು ನಿಯಮವು ಧರಿಸಿಭರಿಸುತ್ತಿದೆಯೋ ಅದನ್ನು ತತ್ತ್ವದರ್ಶಿಗಳಾದ ಮಹರ್ಷಿಗಳು "ಧರ್ಮ"ವೆಂದು ಕರೆದರು ("ಧಾರಣಾತ್ ಧರ್ಮ ಇತ್ಯಾಹು:", "ಧರ್ಮೋವಿಶ್ವಸ್ಯ ಜಗತಃ ಪ್ರತಿಷ್ಠಾ" "ಧರ್ಮೋರಕ್ಷತಿರಕ್ಷಿತಃ" "ಧರ್ಮಂ ಚರ್ಯಮಾಣಮರ್ಥಕಾಮಾವನೂತ್ಪದ್ಯೇತೇ") ಮತ್ತು ಅದರ ಅರಿವು ಆಚರಣೆಗಳು ಎಲ್ಲರ ಐಕ್ಯವನ್ನೂ ಸಾಧಿಸುತ್ತವೆ, ಎಲ್ಲ ಸುಖ–ಶಾಂತಿಗಳಿಗೂ ಕಾರಣವಾಗುತ್ತವೆ— ಎಂದೂ ಸಾರಿದರು. ("ಯತೋಽಭ್ಯುದಯನಿಃಶ್ರೇಯಸಸಿದ್ಧಿಃ ಸಧರ್ಮಃ). ಇಂಗ್ಲಿಷ್ ಭಾಷೆಯಲ್ಲಿ ಧರ್ಮದ ಒಂದು ಅಂಶಕ್ಕೆ ಪರ್ಯಾಯವಾಗಿ ಬಳಸಲ್ಪಡುತ್ತಿರುವ "ರಿಲಿಜನ್" ಎಂಬ ಶಬ್ದವೂ Religere ಎಂಬ ಬಂಧಿಸುವುದು, ಒಂದುಗೂಡಿಸಿ ಕಟ್ಟುವುದು ಎಂಬರ್ಥದ ಧಾತುವಿನಿಂದಲೇ ಬಂದಿದೆ.

ಆದರೆ ಸತ್ಯವನ್ನು ನೇರವಾಗಿ ಕಂಡ ಜ್ಞಾನಿಗಳು ಕಣ್ಮರೆಯಾದಾಗ 'ಧರ್ಮ' ಶಬ್ದವು ರಾಗದ್ವೇಷ ಪ್ರಧಾನರಾದ ಜನರ ಕೈಯಲ್ಲಿ ಸಿಲುಕಿ ಅಪಾರ್ಥಕ್ಕೆ ವಿಷಯವಾಗುತ್ತದೆ. "ಗುರುವಿಗೆ ಶಿಷ್ಯರು ಶಾಪ, ಭಗವಂತನಿಗೆ ಭಕ್ತರು ಶಾಪ" ಎಂಬ ಹೇಳಿಕೆಯಂತೆ ಕೊಳಕು ಮನಸ್ಸಿನ ಜನರು ಧರ್ಮದ ಹೆಸರಿನಲ್ಲಿ ಅಕಾರ್ಯಗಳನ್ನು ಮಾಡುತ್ತಾರೆ. ಜನರನ್ನು ಒಂದುಗೂಡಿಸಲು ಕಾರಣವಾಗಬೇಕಾದ ಧರ್ಮವು ಜನರನ್ನು ಬೇರ್ಪಡಿಸಲು ಸಾಧನವಾಗುವಂತೆ ಮಾಡುತ್ತಾರೆ. ಶಾಂತಿಯ ಸಾಧನವನ್ನು ಕಲಹಕಚ್ಚಾಟಗಳಿಗೆ ಫಲವಾದ ಅಶಾಂತಿ ಉಪಕರಣವಾಗುವಂತೆ ಮಾಡುತ್ತಾರೆ. ಜನರು ತಮ್ಮತಮ್ಮ ಧರ್ಮಗಳನ್ನು ಅರಿತು ಶುದ್ಧರೂಪದಲ್ಲಿ ಅನುಷ್ಠಿಸುವಂತೆ ಮಾಡುವುದಲ್ಲದೆ, ಇತರ ಧರ್ಮಗಳ ಸಾಹಿತ್ಯವನ್ನು ಪೂರ್ವಗ್ರಹದ ಕನ್ನಡಕವಿಲ್ಲದೆ ಅಧ್ಯಯನ ಮಾಡಿ ಧರ್ಮಸಮನ್ವಯವನ್ನು ತಿಳಿಯುವಂತೆ ಮಾಡಬೇಕು. ಈ ಸನ್ಮಾರ್ಗದಲ್ಲಿ ಹೆಜ್ಜೆಯಿಟ್ಟು, ಬೇರೆಬೇರೆ ದೇಶ ಕಾಲಗಳಲ್ಲಿ ಬೆಳಗಿ ಧರ್ಮ—

ಸಮನ್ವಯವನ್ನು ಬೋಧಿಸಿದ ಪ್ರಸಿದ್ಧರಾದ ಕೆಲವು ಧರ್ಮಾಚಾರ್ಯರುಗಳ ಉಪದೇಶಾಮೃತವನ್ನು ಸಂಕಲನಮಾಡಿರುವ ಧರ್ಮದ ಕೈಪಿಡಿ ಶ್ರೀ ತಿಮ್ಮಪ್ಪ ನಾಯಕರ 'ಧರ್ಮಸಮನ್ವಯದರ್ಶನ'ವೆಂಬ ಶ್ರೇಷ್ಠ ಕೃತಿ.

ಧರ್ಮಗಳ ನಾಮರೂಪಗಳು ಬೇರೆಬೇರೆಯಾಗಿದ್ದರೂ ಅವುಗಳ ಲಕ್ಷ್ಯ ಒಂದೇ ಆಗಿರುತ್ತದೆ—ಎಂಬ ಸದಭಿಪ್ರಾಯವು ಭಾರತ ದೇಶದಲ್ಲಿ ಅತಿ ಪ್ರಾಚೀನ ಕಾಲದಿಂದಲೂ ಸಿದ್ಧಾಂತಿಕವಾಗಿ, ಅದು ಈ ದೇಶದ ವಿಶ್ವಕ್ಕೆ ದಯಪಾಲಿಸಿರುವ ವರಪ್ರದಾನವಾಗಿವೆ. ಈ ಹಿನ್ನೆಲೆಯಲ್ಲಿ ನಮ್ಮ ದೇಶವು ಹೊರಗಿನಿಂದ ಬಂದ ಪಾರಸೀಕ ಧರ್ಮ, ಇಸ್ಲಾಂ ಮತ್ತು ಕ್ರೈಸ್ತಧರ್ಮಗಳಿಗೂ ಮನ್ನಣೆಯನ್ನು ಕೊಟ್ಟಿರುವುದು, ಭಾರತೀಯ ಸಂಸ್ಕೃತಿಯಲ್ಲಿ ಅವಗಾಹನೆ ಮಾಡಿದವರು "ಸರ್ವ ಧರ್ಮ ಸಮನ್ವಯ ಸಾಹಿತ್ಯ" ಸಂಗ್ರಹ ಮಾಡುವುದು ಸಹಜವೇ ಆಗಿದೆ. ಇತರೇ ದೇಶಗಳ ಅನೇಕ ಮಹಾಪುರುಷರೂ ಧರ್ಮಸಮನ್ವಯಕ್ಕೆ ಪೋಷಕವಾದ ಮಾತುಗಳನ್ನಾಡಿದ್ದಾರೆ.

ಗ್ರಂಥದ ಮೊದಲನೆಯ ಖಂಡವು ವೇದೋಪನಿಷತ್ತುಗಳ ಸಾರವಾದ ಪರಿಪೂರ್ಣ ಪರಬ್ರಹ್ಮ ಸಾಕ್ಷಾತ್ಕಾರವನ್ನು ಪಡೆದವರಾಗಿ, ಕ್ರೈಸ್ತ ಮತ್ತು ಇಸ್ಲಾಂ ಧರ್ಮಗಳೂ ಆ ಪರತತ್ತ್ವದ ಕಡೆಗೇ ನಿರ್ದೇಶ ಮಾಡುತ್ತಿವೆಯೆಂಬುದನ್ನು ಅನುಭವಿಸಿ ಬೋಧಿಸಿದ, ಶ್ರೀರಾಮಕೃಷ್ಣ ಪರಮಹಂಸರ ಧರ್ಮಸಮನ್ವಯ ಪರವಾದ ಉಪದೇಶಗಳನ್ನು ಸಂಗ್ರಹಿಸುತ್ತದೆ. ಮತ್ತು ಅವರ ಶಿಷ್ಯೋತ್ತಮ ರಾಗಿ ಎಲ್ಲ ಧರ್ಮಗಳ ಅರಿವಿನಿಂದಲೇ ವಿಶ್ವಮಾನದ ಧರ್ಮದ ವಿಕಾಸವೆಂದು ಸಾರಿದ ಸ್ವಾಮಿ ವಿವೇಕಾನಂದರ ಉಪನ್ಯಾಸದ ಸಾರವನ್ನು ಕ್ರೋಢೀಕರಿಸುತ್ತದೆ. ಸತ್ಯಶೋಧನೆಗಾಗಿ ಜೀವನವನ್ನು ಮುಡುಪಾಗಿಟ್ಟು ಸತ್ಯ ನೀತಿಗಳ ಮೌಲ್ಯವನ್ನು ಜೀವನದಲ್ಲಿ ಬೆಳಗಿಸಿದ ಮಹಾತ್ಮಾ ಗಾಂಧಿಯವರ ಸರ್ವಧರ್ಮಸಮಭಾವದ ಹಿನ್ನೆಲೆ, ವಿಕಾಸ ಮತ್ತು ಸಿದ್ಧಾಂತಗಳನ್ನು ನಿರೂಪಿಸಿ, ಅವರ ಶಿಷ್ಯೋತ್ತಮರಾಗಿ, ಧರ್ಮ ಸಮನ್ವಯವನ್ನು ಶಾಸ್ತ್ರೀಯವಾಗಿ ವೈದುಷ್ಯದಿಂದ ತೋರಿಸಿರುವ ಶ್ರೀ ವಿನೋಬಾ ರವರ ವಚನಗಳನ್ನು ಮಂಡಿಸಿದೆ. ಈ ಬಗ್ಗೆ ಶ್ರೀ ಕಾಕಾ ಕಾಲೇಲ್‌ಕರ್ ಅವರ ಆಶಯವನ್ನೂ ಸಂಕಲನ ಮಾಡಿದೆ. ಅಂತರಾತ್ಮಗುರುವಿನಿಂದ ದೀಕ್ಷೆಪಡೆದು ಸತ್ಯ ಸಾಕ್ಷಾತ್ಕಾರ ಸಂಪನ್ನರಾದ ಭಗವಾನ್ ಶ್ರೀ ರಮಣಮಹರ್ಷಿಗಳು ಭೋಧಿಸಿದ ಸಮನ್ವಯ ದರ್ಶನದ ನುಡಿಮುತ್ತುಗಳನ್ನು ನಿರೂಪಿಸಿ ರಷ್ಯದ ಸಂತ ಶಿರೋಮಣಿ ಟಾಲ್‌ಸ್ಟಾಯರ ಉದಾರವಾದ ಸಮನ್ವಯ ದೃಷ್ಟಿಯನ್ನು ಹೃದಯಂಗಮವಾಗಿ ವಿವರಿಸಿದೆ. ದ್ವಿತೀಯಖಂಡವು ಮಹಾತ್ಮರಾದ ಶ್ರೀ ಏಸುಕ್ರಿಸ್ತ, ಶ್ರೀ ಮಹಮ್ಮದ್ ಪೈಗಂಬರ್, ಸೂಫೀ ಮತ್ತು ಚೀನೀ ಸಂತರ ಮತ್ತು ಈ ಮತಧರ್ಮಗಳ ಪವಿತ್ರ

ಗ್ರಂಥಗಳ ಸಂದೇಶವನ್ನು ಶ್ರದ್ಧೆಯಿಂದ ಅವಲೋಕಿಸುತ್ತದೆ. ಕೊನೆಯ ಖಂಡದಲ್ಲಿ ಎಲ್ಲ ಜಾತಿ ಪಂಥಗಳೂ ಹೇಗೆ ಸಾಂಸ್ಕೃತಿಕ ಮತ್ತು ಆಧ್ಯಾತ್ಮಿಕ ಐಕ್ಯವನ್ನು ಪ್ರಾಯೋಗಿಕವಾಗಿ ಸಾಧಿಸಬಹುದು ಎಂಬ ವಿಷಯದ ಬಗ್ಗೆ ಶ್ರೀ ವಿನೋಬಾಜೀ ಮತ್ತು ಕಾಲೇಲ್‌ಕರ್ ಅವರು ನೀಡಿರುವ ಕಾರ್ಯಕ್ರಮದ ವಿವರಣೆಯನ್ನು ಸಂಗ್ರಹಿಸಿ, ಸರ್ವಧರ್ಮ ಸ್ಮರಣ ಸ್ತೋತ್ರದೊಡನೆ ಗ್ರಂಥಕ್ಕೆ ಮಂಗಳ ಮುಕ್ತಾಯ ವನ್ನು ಮಾಡಿದೆ.

ಗ್ರಂಥದ ಆರಂಭದಲ್ಲಿ ಜೋಡಿಸಿರುವ ಪ್ರಸ್ತಾವನೆ ಮತ್ತು ಸಮೀಕ್ಷೆ ಪ್ರಚೋದಕವಾಗಿವೆ. ಗ್ರಂಥದ ಭಾಷೆ ಸರಳ, ನಿರಾಡಂಬರ, ವಿಚಾರ ವಿಷಯ ನಿರೂಪಣೆ ವೈಜ್ಞಾನಿಕವಾಗಿದೆ. ಮುದ್ರಣ ಮನೋಜ್ಞವಾಗಿದೆ.

ಗ್ರಂಥದಲ್ಲಿ ಬೇರೆ ಬೇರೆ ಧರ್ಮಗಳ ವಿಶಿಷ್ಟವಾದ ಶ್ರೇಷ್ಠತೆಯನ್ನು ಪ್ರತಿ ಪಾದಿಸಿದೆ. ಅವುಗಳಲ್ಲಿ ಹಿಂದೂ, ಬೌದ್ಧ, ಜೈನ ಧರ್ಮಗಳ ವಿಶಿಷ್ಟತೆಯನ್ನು ನಿರೂಪಿಸುವಾಗ ಈ ಎರಡು ಅಂಶಗಳನ್ನು ಹೇಳಬಹುದಿತ್ತು. ಈ ಧರ್ಮಗಳಲ್ಲಿ (೧) ಮೋಕ್ಷಕ್ಕೆ ಯಾವನಾದರೊಬ್ಬ ಐತಿಹಾಸಿಕವ್ಯಕ್ತಿಯ ಅವಲಂಬನೆ ಅನಿವಾರ್ಯ— ಎಂದು ಹೇಳಿಲ್ಲ. ತತ್ತ್ವನಿಷ್ಠೆಯಿಂದ ಮುಕ್ತಿ ಎಂದು ಸಾರಿದೆ.

(೨) ಜೀವರಿಗೆ ಪುನರ್ಜನ್ಮವನ್ನು ಹೇಳಿರುವುದರಿಂದ ಒಂದು ಜನ್ಮದಲ್ಲಿ ಮುಗಿಸಲಾಗದ ತತ್ತ್ವ ಸಾಧನೆಯನ್ನು ಮುಂದಿನ ಜನ್ಮದಲ್ಲಿ ಸಾಧಿಸಬಹುದೆಂಬ ಆಶಾವಾದಕ್ಕೆ ಅವಕಾಶವಿದೆ.

ಉಪನಿಷತ್ತುಗಳಿಂದ ಬುದ್ಧ ದೇವನೂ ಆತನ ಧರ್ಮದಿಂದ ಕ್ರೈಸ್ತ ಮತವೂ ಆ ಮತದಿಂದ ಇಸ್ಲಾಂ ಮತವೂ ಸ್ಪಷ್ಟವಾಗಿ ಸ್ಫೂರ್ತಿ ಪಡೆದಿರುವುದರಿಂದ ಸನಾತನ ವೈದಿಕ ಧರ್ಮವು ಎಲ್ಲ ಧರ್ಮಗಳಿಗೆ ಆಕರವಾಗಿದೆ—ಎಂಬ ವಿಷಯವನ್ನು ಸ್ವಾಮಿ ವಿವೇಕಾನಂದರು ಘೋಷಿಸಿದ್ದಾರೆ. ಇದನ್ನು ಈ ಗ್ರಂಥದಲ್ಲಿ ಸಂಕೋಚವಿಲ್ಲದೆ, ಹಿಂದೂ ಧರ್ಮದ ವಿಶಿಷ್ಟತೆಯನ್ನು ನಿರೂಪಿಸುವಾಗ ಸೇರಿಸಬಹುದಾಗಿತ್ತು.

ಶ್ರೀ ತಿಮ್ಮಪ್ಪ ನಾಯಕರ ಈ ಕೃತಿಯ ಅಧ್ಯಯನವು ಎಲ್ಲ ಧರ್ಮಗಳ ಪರಿಷ್ಕರಣಕ್ಕೆ, ಭಾರತದಲ್ಲಿ ಹಾಗೂ ವಿಶ್ವದಲ್ಲಿ ಭಾವೈಕ್ಯ ಸಾಧನೆಗೆ, ಮತ್ತು "ವಿಶ್ವಧರ್ಮ"ದ ಸಾಧನೆಗೆ ನೆರವಾಗುವುದರಲ್ಲಿ ಸಂಶಯವಿಲ್ಲ. ಕನ್ನಡದ ಧಾರ್ಮಿಕ ಸಾಹಿತ್ಯ ಭಂಡಾರಕ್ಕೆ ಇದು ಒಂದು ಉತ್ತಮವಾದ ಕೊಡುಗೆ.

# ಗಾಂಧೀಜಿಯವರ ಆಧ್ಯಾತ್ಮಿಕ ಜೀವನ:

**ತಿಮ್ಮಪ್ಪ ನಾಯಕ:** ಪುಟ: 224; ಮೂಲ್ಯ: **ಎರಡು ರೂಪಾಯಿಗಳು**

ಪ್ರಕಾಶಕರು : **ಭೂದಾನ ಕಾರ್ಯಾಲಯ, ಪೋ ಕಡೋಲಿ,**

ವಿಮರ್ಶೆ : **ವರದೇಶಿಕಾಚಾರ್ಯ ರಂಗಪ್ರಿಯ**

ಶ್ರೀ ನಾಯಕರ ಈ ಮಹಾಗ್ರಂಥವು ಆಧುನಿಕಯುಗದ ಮಹಾಪುರುಷ ಸತ್ಯ ಶೋಧಕ ಶ್ರೀ ಗಾಂಧೀಜಿಯವರು ಸತ್ಯಶೋಧನೆಯ ವಿಷಯದಲ್ಲಿ ಮಾಡಿದ ಪ್ರಯೋಗಗಳ ಮತ್ತು ಅವುಗಳ ಆಧಾರದಿಂದ ಅವರು ಬೋಧಿಸಿದ ಸಿದ್ಧಾಂತ ಸಂದೇಶಗಳ ಸುಂದರ ನಿರೂಪಣೆಯಾಗಿದೆ. ಆಧ್ಯಾತ್ಮವೇ ಅವರ ಜೀವನದ ಎಲ್ಲ ಕಾರ್ಯಗಳಿಗೂ ಸ್ಫೂರ್ತಿದಾಯಕವಾಗಿತ್ತು, ಎಂದು ಪ್ರತಿಪಾದಿಸುವ ಈ ಗ್ರಂಥವು ಆಚಾರಸಂಹಿತೆ ಮತ್ತು ವಿಚಾರಸಂಹಿತೆ–ಎರಡೂ ಆಗಿದೆ.

ಪ್ರಾರಂಭದಲ್ಲಿ ಗಾಂಧೀಜಿಯವರ ಆಧ್ಯಾತ್ಮಿಕ ಸಾಧನ ಪಥದ ಹೊಸಬೆಳಕು, ಸಾಧನಸೇವಾ ಸಮನ್ವಯ, ಮುಂತಾದ ಮುಖ್ಯ ವಿಷಯಗಳು ವೈಜ್ಞಾನಿಕ ವಿಶ್ಲೇಷ ಣೆದಿಂದ ಗ್ರಂಥದ ಅಧ್ಯಯನಕ್ಕೆ ಪ್ರವೇಶ ಮಾಡಿಸಲಾಗಿದೆ. ಮೊದಲನೇ ಎರಡು ಖಂಡಗಳು ಮಹಾತ್ಮರ ಆಧ್ಯಾತ್ಮಿಕ ಜೀವನದ ಉಷಃಕಾಲ, ಮತ್ತು ಸಮಗ್ರ ಸಮಾಜ ಜೀವನದಲ್ಲಿ ಅವರ ಆಧ್ಯಾತ್ಮ ಪ್ರತಿಷ್ಠೆಯನ್ನು ಜೀವನದ ಘಟನೆಗಳ ಮೂಲಕ ನಿರೂಪಿಸುತ್ತದೆ. ಅವರ ಸತ್ಯಶೋಧನೆಯ ಮೌಲಿಕತ್ವವನ್ನು ಪ್ರತಿಪಾದಿಸಿ ಪ್ರಾರ್ಥನೆ, ಅಹಿಂಸೆ, ಬ್ರಹ್ಮಚರ್ಯ ಉಪವಾಸ ಕಾಯಕ ಗೋಸೇವೆ ಮುಂತಾದ ವಿಷಯುಗಳ ಬಗ್ಗೆ ಅವರ ನಿಷ್ಕೃಷ್ಟವಾದ ವಿಚಾರಗಳನ್ನು ಪ್ರತಿಪಾದಿಸಿದೆ. ಮೂರನೆಯ ಖಂಡವು ಬಹುಮಟ್ಟಿಗೆ ಮಹಿಳಾ ವಿಷಯಕ್ಕೆ ಮೀಸಲಾಗಿದೆ. ಗಾಂಧೀಜಿಯವರು ಮಹಿಳೆಯರಿಗೆ ಕೊಡುತ್ತಿದ್ದ ಸಾಮೂಹಿಕ ಆಧ್ಯಾತ್ಮಿಕ ದೀಕ್ಷೆಯನ್ನು ವಿವರಿಸಿ ಅವರ ಅಭಿಪ್ರಾಯದಂತೆ ಅಹಿಂಸಾಯುಗದಲ್ಲಿ ಮಹಿಳೆಯರಿಗಿರುವ ಅಗ್ರಸ್ಥಾನವನ್ನು ನಿರೂ ಪಿಸುತ್ತದೆ. ಆಶ್ರಮದ ಭಗಿನಿಯರನ್ನು ಕುರಿತು ಅವರು ಆತ್ಮನಿರ್ಭರತೆ, ಕಾಯಕ ದೊಡನೆ ಪರಮಾತ್ಮ ಚಿಂತನೆ, ನಿರ್ಭಯತೆ, ಶೀಲರಕ್ಷಣೆ, ಹೃದಯ ವಿಕಾಸ, ಮುಂತಾದ ವಿಷಯುಗಳ ಮೇಲೆ ಕಾಲಕಾಲದಲ್ಲಿ ನೀಡುತ್ತಿದ್ದ ಪ್ರೇರಣಾಪರವಾದ ಉಪದೇಶವನ್ನು ಸಂಗ್ರಹಿಸಿ ಅವರು ಸತ್ಯಾಗ್ರಹದ ಆಶ್ರಮವನ್ನು ವಿಸರ್ಜಿಸಿ "ಜಂಗ ಮ ಆಶ್ರಮ"ಕ್ಕೆ ಬಂದ ಪ್ರಸಂಗವನ್ನು ಮಂಡಿಸುತ್ತದೆ. ಕೊನೆಗೆ ಗಾಂಧೀತತ್ತ್ವದ

ಹಿನ್ನೆಲೆಯಲ್ಲಿ ವೇದಾಂತ ಸಾರವನ್ನು ಸಂಗ್ರಹಿಸಿ ಗಾಂಧೀಜಿಯವರು ರಚಿಸಿದ ಪ್ರಾರ್ಥನಾ ಶ್ಲೋಕದೊಡನೆ ಮಂಗಳವನ್ನು ಮಾಡಿದೆ.

ಜೀವನವು ಆಧ್ಯಾತ್ಮಭಾವದಿಂದ ಪ್ರೇರಿತವಾಗಿರಬೇಕು, ಅಂತೆಯೇ ಆಧ್ಯಾತ್ಮವು ಅಂತಃಪ್ರಪಂಚದಲ್ಲಿ ಉಳಿಯದೆ, ಜೀವನಕ್ಕೆ ಅಭಿಮುಖವಾಗಿರಬೇಕು. ಜೀವನವನ್ನು ವಿಕಾಸಗೊಳಿಸಬೇಕು, ಎಂಬ ಬಹುಮೂಲ್ಯವಾದ ಪಾಠವನ್ನು ಸಾಧಕ ಶ್ರೇಷ್ಠರೊಬ್ಬರ ಆಧ್ಯಾತ್ಮ ಜೀವನದ ನಿರೂಪಣೆಯ ಮೂಲಕ ಮುಂದಟ್ಟುಮಾಡಿ ಕೊಡುವ ಅಮೂಲ್ಯ ಗ್ರಂಥ ಶ್ರೀ ತಿಮ್ಮಪ್ಪ ನಾಯಕರ. ಗಾಂಧೀ ಅನುಯಾಯಿಗಳಿಗೆ ಮಾತ್ರವಲ್ಲದೆ ಒಳ್ಳೆಯ ಗುರಿಯುಳ್ಳ ಜೀವನವನ್ನು ನಡೆಸಬೇಕೆನ್ನುವ ಎಲ್ಲ ಜನರಿಗೂ ಉಪಯೋಗಪಡುವ ಕೃತಿಯಿದು. ಕಾಲೇಲಕರ ಅವರು ಬರೆದಿರುವ ಮುನ್ನುಡಿ ವಿಚಾರಪೂರ್ಣವಾಗಿದೆ. ಗ್ರಂಥದ ಭಾಷೆ ಸರಳ, ಸುಂದರ, ವಿಷಯ ನಿರೂಪಣೆ ವೈಜ್ಞಾನಿಕವಾಗಿದೆ. ಕನ್ನಡದಲ್ಲಿ ಹಗುರವಾದ ಸಾಹಿತ್ಯ ಹಬ್ಬುತ್ತಿರುವ ಈ ಕಾಲದಲ್ಲಿ ಗಂಭೀರವಾದ ವಿಷಯವನ್ನು ಅವಗಹನೆಮಾಡಿರುವ ಇಂತಹ ಗ್ರಂಥಗಳು ಅತ್ಯಂತ ಉಪಯೋಗಕರವಾಗಿವೆಯೆಂಬುದರಲ್ಲಿ ಸಂದೇಹವಿಲ್ಲ.

* * * *

"**ಶಿವಶರಣರ ಸಾಧನಾಪಥ**" ಕೃತಿಯ ವಿಮರ್ಶೆ ಸಕಾಲದಲ್ಲಿ ಕೈಸೇರದೆ ಅದನ್ನು ಇಲ್ಲಿ ಪ್ರಕಟಿಸಲು ಸಾಧ್ಯವಾಗದ ಬಗ್ಗೆ ತೀವ್ರ ವಿಷಾದವಾಗುತ್ತದೆ–ಸಂ ॥

# ಲೇಖಕರ ಪರಿಚಯ

**ಕಾಕಾ ಕಾಲೇಲ್ಕರ:** ಗಾಂಧೀಜಿಯವರ ಅನುಯಾಯಿಗಳೂ ಅವರ ನಿಕಟವರ್ತಿಗಳಲ್ಲಿ ಒಬ್ಬರೂ ಆದ ಇವರು ೧೮೮೫ರ ಬೆಳಗಾವಿಯ ಬಳಿಯ ಷಾಪುರದಲ್ಲಿ ಜನಿಸಿದವರಿದ್ದು ಕಾರವಾರದಲ್ಲಿ ಹೈಸ್ಕೂಲು ಶಿಕ್ಷಣ ಪಡೆದವರು. ಟಿಳಕರ ಪ್ರೇರಣೆಯಿಂದ ಗಂಗಾಧರರಾವ್ ದೇಶಪಾಂಡೆಯವರು ನಡೆಸುತ್ತಿದ್ದ "ರಾಷ್ಟ್ರಮತ" ಮರಾಠಿ ಪತ್ರಿಕೆಯಲ್ಲಿ ದುಡಿಯುತ್ತಿದ್ದರಲ್ಲದೆ, ಮುಂದೆ ಶಾಂತಿನಿಕೇತನದಲ್ಲಿ ಇದ್ದರು. ರವೀಂದ್ರನಾಥರು, ೧೯೧೫ರಲ್ಲಿ ಭಾರತಕ್ಕೆ ಬಂದ ಗಾಂಧೀಜಿಗೆ ಕಾಕಾಸಾಹೇಬರನ್ನು "ಎರವಲು" ನೀಡಿದ್ದು, ೧೯೨೦ಕ್ಕೂ ಪೂರ್ವದಲ್ಲಿಯೇ ಉತ್ತರ ಕನ್ನಡ ಜಿಲ್ಲೆಯ ಅನೇಕ ಜನ ಗಾಂಧೀಜಿಯ ನಿಕಟ ಸಂಪರ್ಕಕ್ಕೆ ಬರಲು ಇವರು ಕಾರಣರು. ವರ್ಧಾಶಿಕ್ಷಣ ಪದ್ಧತಿಯ ಶಿಲ್ಪಿ. ಗುಜರಾಥ ವಿದ್ಯಾಪೀಠದ ಕುಲಪತಿಗಳಾಗಿದ್ದರು. ಗುಜರಾಥಿ, ಮರಾಠಿ, ಹಿಂದಿ, ಇಂಗ್ಲಿಷ್‌ಗಳಲ್ಲಿ ಅನೇಕ ಗ್ರಂಥ ಬರೆದಿದ್ದಾರೆ. ಗಣ್ಯ ವಿಚಾರವೇತ್ತರು.

**ಹರಿ ಅನಂತ ಪೈ :** ಅಂಕೋಲೆಯ ಗಣ್ಯ ಸಾಮಾಜಿಕ ಕಾರ್ಯಕರ್ತರು. ಸ್ವಾತಂತ್ರ್ಯ ಸಂಗ್ರಾಮದಲ್ಲಿ ಅನೇಕ ಬಾರಿ ಜೈಲುಕಂಡವರು. ೧೯೩೭–೩೮ರಲ್ಲಿ ಕಾಂಗ್ರೆಸ್‌ಪತಿಯಿಂದ ಉ. ಕ. ಜಿಲ್ಲಾ ಬೋರ್ಡಿಗೆ ಆರಿಸಿ ಬಂದು ಅದರ ಅಧ್ಯಕ್ಷರಾಗಿದ್ದರು. ಗ್ರಾಮಸೇವಾ ಸಮಿತಿಯ ಸ್ಥಾಪಕರಲ್ಲಿ ಒಬ್ಬರು. ನಾಯಕ ಮಾಸ್ತರರ ತೀರ ನಿಕಟವರ್ತಿಗಳು. ಉ. ಕ. ಡಿ. ಸಿ. ಸಿ. ಕಾರ್ಯದರ್ಶಿಗಳೂ ಆಗಿದ್ದರು.

**ಜೋಗಿ ಬೀರಣ್ಣ ನಾಯಕ :** ಅಂಕೋಲೆ ತಾಲೂಕಿನ ಗಣ್ಯ ಸಾಮಾಜಿಕ ಕಾರ್ಯಕರ್ತರು. ಸ್ವಾತಂತ್ರ್ಯ ಸಂಗ್ರಾಮದಲ್ಲಿ ಪಾಲುಗೊಂಡು ಜೈಲು ಕಂಡವರು, ಹಾಗೂ ವಿಧಾಯಕ ಕಾರ್ಯಕರ್ತರು ಸಹಕಾರ ಚಳವಳಿಯಲ್ಲಿ ಅಗ್ರಗಣ್ಯರು. ಶೆಟಗೇರಿಯ ನಿವಾಸಿಗಳಾದ ಇವರು ಸಹಕಾರಿ ಹಂಚಿನ ಕಾರ್ಖಾನೆಯೊಂದರ ಪದಾಧಿಕಾರಿಯಾಗಿದ್ದಾರೆ. ಇವರ ಬರಹದಿಂದಲೇ ನಾಯಕ ಮಾಸ್ತರರಿಗೆ ಇವರು ಎಷ್ಟು ನಿಕಟರಾಗಿದ್ದಾರೆಂದು ಸ್ಪಷ್ಟವಾಗುತ್ತದೆ.

**ಡಾ॥ ರಂ. ರಾ. ದಿವಾಕರ :** ಈಗ ಬೆಂಗಳೂರಲ್ಲಿ ನೆಲೆಸಿರುವ ಇವರು ೧೮೯೪ರಲ್ಲಿ ಧಾರವಾಡದಲ್ಲಿ ಜನಿಸಿದವರಾಗಿದ್ದು ಸ್ವಾತಂತ್ರ್ಯಯೋಧರಾಗಿ,

ಪತ್ರಿಕೋದ್ಯಮಿಯಾಗಿ, ಬರಹಗಾರರಾಗಿ, ರಾಜಕಾರಣಿಯಾಗಿ, ಧಾರ್ಮಿಕ ವಿಚಾರ ವೇತ್ತರಾಗಿ ಖ್ಯಾತರು. ಈಗ "ಸಂಯುಕ್ತ ಕರ್ನಾಟಕ" ಗುಂಪಿನ ಪತ್ರಿಕೆಗಳ ವ್ಯವಸ್ಥಾಪಕ ಸಂಪಾದಕರಾಗಿದ್ದಾರೆ. ಕೇಂದ್ರ ಆಕಾಶವಾಣಿ ಇಲಾಖೆಯ ಮಂತ್ರಿ ಗಳೂ ಬಿಹಾರದ ರಾಜ್ಯಪಾಲರೂ ಆಗಿದ್ದರಲ್ಲದೆ ಕೆ. ಪಿ. ಸಿ. ಸಿ. ಅಧ್ಯಕ್ಷರಾಗಿಯೂ ಇದ್ದರು. ಇವರು ಕನ್ನಡ, ಇಂಗ್ಲಿಷ್‌ಗಳಲ್ಲಿ ಬರೆದ ಅನೇಕ ಗ್ರಂಥಗಳಲ್ಲಿ "Saga of Satyagraha" ಅಗ್ರಗಣ್ಯ ಕೃತಿ. ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರೂ ಆಗಿದ್ದರು.

**ಮಾಮನ ಅನಂತ ಹೊದಿಕೆ:** ಈಗ ಹುಬ್ಬಳ್ಳಿ ಬಳಿಯ ಬೆಂಗೇರಿಯಲ್ಲಿ ನಿಂತು "ಆರೋಗ್ಯ ಮತ್ತು ಆಹಾರ" ಎಂಬ ನಿಸರ್ಗ ಚಿಕಿತ್ಸಾ ಸಂಬಂಧಿ ಪತ್ರಿಕೆ ನಡೆಸುತ್ತಿರುವ ಇವರು ಶಿರಸಿಯಲ್ಲಿ ಜನಿಸಿದವರಾಗಿದ್ದು, ೧೯೨೦ರಲ್ಲಿ ಧಾರವಾಡದ ಟ್ರೈನಿಂಗ್ ಕಾಲೇಜಿನಲ್ಲಿ ಓದುತ್ತಿದ್ದವರು ಶಿಕ್ಷಣ ತ್ಯಜಿಸಿ ಶಿರಸಿಯಲ್ಲಿ ರಾಷ್ಟ್ರೀಯ ಶಾಲೆ ನಡೆಸಿದರು. ಸ್ವಾತಂತ್ರ್ಯ ಹೋರಾಟದಲ್ಲಿ ಅನೇಕ ಬಾರಿ ಜೈಲು ಕಂಡವರಿದ್ದು ನಾಯಕ ಮಾಸ್ತರರ ನಿಕಟವರ್ತಿಗಳು ಹಾಗೂ ಸರಿಜೋಡಿಯ ಕಾರ್ಯಕರ್ತರು. "ಭೂದಾನ" ಪತ್ರಿಕೆಯ ಸಂಪಾದಕರಾಗಿದ್ದರು. ಕನ್ನಡದಲ್ಲಿ ಗಾಂಧೀವಿಚಾರದ ಅನೇಕ ಪುಸ್ತಕ ಬರೆದಿದ್ದು ನಾಡಿನ ಗಣ್ಯ ವಿಧಾಯಕ ಕಾರ್ಯಕರ್ತರು.

**ರಾಖಾಲಚಂದ್ರ ದೇ:** ಬಂಗ್ಲಾ ದೇಶದ ಚಿಟ್ಟಗಾಂಗ್ ಜಿಲ್ಲೆಯಲ್ಲಿ ೧೯೦೧ರಲ್ಲಿ ಜನಿಸಿದ ಇವರು ಖ್ಯಾತ ಕ್ರಾಂತಿಕಾರಿ ಮಾಸ್ಟರ್‌ದಾ (ಸೂರ್ಯಸೇನ್) ಅವರ ಕ್ರಾಂತಿಕಾರಿ ತಂಡದಲ್ಲಿದ್ದು ದಕ್ಷಿಣೇಶ್ವರ ಬಾಂಬ್ ಖಟ್ಲೆ ಹಾಗೂ ಇತರ ಪ್ರಕರಣಗಳಲ್ಲಿ ೧೪ ವರ್ಷ ಜೈಲಿನಲ್ಲಿದ್ದರು. ಈ ಪೈಕಿ ೫ ವರ್ಷ ಅಂಡಮಾನ್ ವಾಸ. ೧೯೨೬ರಿಂದ ೧೯೩೩ರ ವರೆಗೆ ಇವರನ್ನು ಕಾರವಾರ ಜೈಲಿನಲ್ಲಿಟ್ಟಿದ್ದಾಗ ನಾಯಕ ಮಾಸ್ತರರ ಸಂಪರ್ಕದಿಂದ ಅಹಿಂಸಾತ್ಮಕ ಮಾರ್ಗದ ಗಾಂಧೀವಾದಿಗಳಾಗಿ ಪರಿವರ್ತನೆ ಹೊಂದಿದ್ದರು. ಈಗ ವಿಧಾಯಕ ಕಾರ್ಯಕರ್ತರಾಗಿ ಜಲಪೈಗುಡಿ ಜಿಲ್ಲೆಯಲ್ಲಿ ಇದ್ದಾರೆ. "ಬಂಧೀರ್ ಜೀವನ್ ಸ್ಮರಣಿಕ" ಹಾಗೂ "ಮಾನಬೀಯ ಸಮಸ್ಯಾ ಸಮಾಧಾನೆ ಅಧ್ಯಾತ್ಮ" ಎಂಬ ಬಂಗಾಳಿ ಪುಸ್ತಕಗಳನ್ನು ಬರೆದಿದ್ದಾರೆ. "ಕಾರವಾರದಲ್ಲಿ ಕರ್ನಾಟಕದ ಸಂತ ಟಿ. ಎಸ್. ನಾಯಕರನ್ನು ಭೇಟಿ ಆದೆ. ಮನಃಪರಿಕೆ ಹೊಂದಿದ ಗಾಂಧೀವಾದಿಯಾದೆ", ಎಂದು ಇತ್ತೀಚಿಗಿನ ತಮ್ಮ ಪತ್ರದಲ್ಲಿ ಅವರು ಹೇಳಿದ್ದಾರೆ.

**ಗೋಪಾಲ ಶಿವ ಹೆಗಡೆ:** ಕುಮಟಾ ಬಳಿಯ ಮಾಸೂರಲ್ಲಿ ನೆಲೆಸಿರುವ ಹರಿಜನಸೇವಕರಾದ ಇವರು ಅಸಹಕಾರದ ಅವಧಿಯಿಂದಲೂ ಸ್ವಾತಂತ್ರ್ಯ ಚಳವಳಿ

ಯಲ್ಲಿ ಪಾಲುಗೊಂಡವರಿದ್ದು, ಹುಬ್ಬಳ್ಳಿಯಲ್ಲಿ ನಾಯಕ ಮಾಸ್ತರರ ಜೊತೆ ಇದ್ದರು. ಸಿದ್ಧಾಪುರ ತಾ॥ ನ ಕರನಿರಾಕರಣ ಚಳವಳಿಯಲ್ಲಿ ಇವರದು ಗಣ್ಯಪಾತ್ರ. ಉತ್ತರ ಕನ್ನಡದ ವಿಧಾಯಕ ಕಾರ್ಯಕರ್ತರಲ್ಲಿ ಪ್ರಮುಖರು.

**ರಮಾನಂದ ರಂಗೈನ :** ನಾಯಕ ಮಾಸ್ತರರ ಕುಟುಂಬೀಯರಾದ ಇವರು ೧೯೩೪ರಲ್ಲಿ ಜನಿಸಿದ್ದು ಬೆಳಗಾವಿಯಲ್ಲಿ ಶಿಕ್ಷಣ ಪಡೆಯುತ್ತಿದ್ದಾಗ ವಿನೋಬಾಜಿಯ ಕರೆಗೆ ಓಗೊಟ್ಟು ಜೀವನದಾನಮಾಡಿ ವಿಧಾಯಕ ಕಾರ್ಯದಲ್ಲಿ ಮಗ್ನರಾದವರು. ಈಗ ಕುಸೂರಿನ ಗೋವಿಂದಧಾಮ ಆಶ್ರಮದಲ್ಲಿ ಇದ್ದು ಆಶ್ರಮದ ಪರಿಸರದಲ್ಲಿ ಸಮೃದ್ಧ ಕೃಷಿಗೈಯ್ಯುತ್ತಿದ್ದಾರೆ.

**ನರಸಿಂಹ ಗೋವಿಂದ ಶಾನುಭಾಗ :** ಕುಮಟೆಯಲ್ಲಿ ನೆಲೆಸಿರುವ ಉತ್ತರ ಕನ್ನಡ ಜಿಲ್ಲೆಯ ಒಬ್ಬ ಗಣ್ಯ ವಕೀಲರು. "ಕಾನಡಾವೃತ್ತ" ಪತ್ರಿಕೆಗೆ ಸ್ವಾತಂತ್ರ್ಯ ಚಳವಳಿಯ ಕಾಲದಲ್ಲಿ ಸಂಪಾದಕರಾಗಿ ಕೆಲಸ ಮಾಡಿದವರು. "ಚುನಾವಣೆ" ಸಾಪ್ತಾಹಿಕ, "ಜೀವೋತ್ತಮ" ತ್ರೈಮಾಸಿಕ ನಡೆಸುತ್ತಿದ್ದಾರೆ. ಕುಮಟಾ ಪುರಸಭಾ ಅಧ್ಯಕ್ಷರಾಗಿದ್ದರು. ಜನಸಂಘದ ಕಾರ್ಯಕರ್ತರು.

**ರಾಮಚಂದ್ರ ವಡವಿ :** ಕರ್ನಾಟಕದ ಒಬ್ಬ ಗಣ್ಯವಿಧಾಯಕ ಕಾರ್ಯಕರ್ತರು ಹಾಗೂ ಸ್ವಾತಂತ್ರ್ಯಯೋಧರು. ಈಗ ಮೊರೆನಾ (ಮ. ಪ್ರದೇಶ)ದಲ್ಲಿ ನೆಲೆಸಿದ್ದಾರೆ. ಗಂಗಾಧರರಾವ್ ದೇಶಪಾಂಡೆಯವರ ನಿಕಟವರ್ತಿಗಳಾಗಿ ಹುದಲಿಯಲ್ಲಿಯೇ ಅನೇಕ ವರ್ಷ ಇದ್ದವರು. "ಕುಂದರನಾಡಿನಲ್ಲಿ ಒಂದು ಅಧ್ಯಾಯ" ಎಂಬ ಇವರ ಚಳವಳಿಯ ಸ್ಮೃತಿಗ್ರಂಥಕ್ಕೆ ನಾಯಕ ಮಾಸ್ತರರ ಮುನ್ನುಡಿ ಇದೆ.

**ರಮಾಕಾಂತ ಮಡಗಾಂವಕರ :** ಬೆಳಗಿಳಿಯ ಗಣ್ಯ ಸ್ವಾತಂತ್ರ್ಯಯೋಧರ ಮನೆತನದಲ್ಲಿ ಹುಟ್ಟಿದ ಇವರು ಕೈಗೂಸಿದ್ದಾಗಲೇ ತಾಯಿ ಶ್ರೀಮತಿ ಸೀತಾಬಾಯಿ ಅವರ ಜೊತೆ ಕರನಿರಾಕರಣ ಪರ್ವದಲ್ಲಿ ಜೈಲುಕಂಡವರು. ಈಗ ಅಂಕೋಲಾ ಗ್ರಾಮ ಸೇವಾಸಮಿತಿಯ ಕಾರ್ಯದರ್ಶಿ ಆಗಿದ್ದು ನಾಯಕ ಮಾಸ್ತರರ ತೀರ ನಿಕಟವರ್ತಿಗಳಾಗಿದ್ದವರು.

**ದಯಾನಂದ (ಉರುಫ್ ರಾಮಚಂದ್ರ) ಪ್ರಭು :** ಶಿರೂರ್‌ಕರ್ ಪ್ರಭು ಮನೆತನದ ಇವರು ವಕೀಲಿ ಶಿಕ್ಷಣ ಪಡೆದವರಿದ್ದು ೧೯೪೨ರ ಚಳವಳಿಯಲ್ಲಿ "ಉತ್ತರ ಕನ್ನಡದವೀರ"ರೆಂದು ಖ್ಯಾತಿ ಪಡೆದರು. ೧೯೪೬ರಲ್ಲಿ ಮುಂಬೈ ವಿಧಾನಸಭೆಗೆ ಅಂಕೋಲೆಯಿಂದ ಆರಿಸಿಬಂದು ಪಾರ್ಲಿಮೆಂಟರಿ ಸೆಕ್ರೆಟರಿ ಆದರು. ಮುಂದೆ ರಾಜಕೀಯ ತ್ಯಜಿಸಿ ಕೃಷಿ, ವಿಧಾಯಕ ಕಾರ್ಯಗಳಲ್ಲಿ ಮಗ್ನರಾಗಿದ್ದಾರೆ.

**ಸುನಂದಾ ದಯಾನಂದ ಪ್ರಭು :** ಖ್ಯಾತ ಸ್ವಾತಂತ್ರ್ಯಯೋಧ ಕೃಷ್ಣಪ್ಪ ಗಾಯ್ತೊಂಡೆ ಅವರ ಮಗಳು ಹಾಗೂ ದಯಾನಂದ ಪ್ರಭು ಅವರ ಪತ್ನಿ. ಸುಶಿಕ್ಷಿತರಾದ ಮಹಿಳೆ.

**ಮೀರಾ ಅನಂತ ಶಾನಭಾಗ :** ಸ್ವಾತಂತ್ರ್ಯಯೋಧ ಅನಂತ ಶಾನಭಾಗ ಅವರ ಪತ್ನಿ. ಕುಮಟೆಯಲ್ಲಿ ನೆಲೆಸಿದ್ದಾರೆ. ಅಲ್ಲಿನ ಮಹಿಳಾ ಮಂಡಳದ ಕಾರ್ಯಕರ್ತೆ.

**ನರಸಿಂಹ ದಾಬಡೆ :** ಈಗ ಧಾರವಾಡದ ಸಾಧನಕೇರಿಯಲ್ಲಿ ನೆಲೆಸಿದ್ದು ಶೈಕ್ಷಣಿಕ ಕ್ಷೇತ್ರದಲ್ಲಿ ಸೇವೆ ಸಲ್ಲಿಸುತ್ತಿರುವ ಇವರು ಸ್ವಾತಂತ್ರ್ಯಪೂರ್ವದಲ್ಲಿ ಕೆ. ಪಿ. ಸಿ. ಸಿ. ಕಾರ್ಯಾಲಯದಲ್ಲಿ ನೌಕರಿ ಮಾಡುತ್ತಿದ್ದರಲ್ಲದೆ ೧೯೪೧ ಮತ್ತು ೧೯೪೨–೪೩ರ ಚಳವಳಿಗಳಲ್ಲಿ ಜೈಲುಕಂಡವರು. ಖಾದಿ ಬೋರ್ಡ್‌ನಲ್ಲಿ ಉನ್ನತ ಹುದ್ದೆಯಲ್ಲಿದ್ದು ನಿವೃತ್ತರಾಗಿದ್ದಾರೆ. ಕನ್ನಡದಲ್ಲಿ ಒಳ್ಳೆಯ ಬರಹಗಾರರು.

**ಬಿ. ಎಂ. ಭೂಮಾ :** ಶಿರಸಿಯ ವ್ಯಾಪಾರಸ್ಥ ಮನೆತನದಲ್ಲಿ ಜನಿಸಿದ ಇವರು ಸ್ವಾತಂತ್ರ್ಯ ಯೋಧರು ಹಾಗೂ ಸರ್ವೋದಯ ಕಾರ್ಯಕರ್ತರು. ತಮ್ಮ ಒಂದು ಮನೆಯನ್ನು ಸರ್ವೋದಯ ಕಾರ್ಯಕ್ಕೆ ದಾನವಿತ್ತಿದ್ದಾರೆ. ಹುಕ್ಕೇರಿ ಬಳಿ ನರಸಿಂಹ ಪುರದಲ್ಲಿ ಸದ್ಯ ಇವರ ವಾಸ.

**ವಿಠ್ಠಲ ಹೊದ್ಕೆ :** ಶಿರಸಿ ಮಾರಿಕಾಂಬಾ ಹೈಸ್ಕೂಲಿನಲ್ಲಿ ಅಧ್ಯಾಪಕರಾಗಿದ್ದು ನಿವೃತ್ತರಾಗಿ ಈಗ ಬೆಂಗಳೂರಲ್ಲಿ ನೆಲೆಸಿದ ಇವರು ಸ್ವಾತಂತ್ರ್ಯ ಚಳವಳಿಯಲ್ಲಿ ಜೈಲು ಕಂಡವರು. ವಾಮನ ಹೊದಿಕೆ ಅವರ ಅಣ್ಣ. ಕನ್ನಡದಲ್ಲಿ ಒಳ್ಳೆಯ ಬರಹಗಾರರು.

**ಬಿ. ಲಕ್ಷ್ಮಿ :** ಸೊರಬ ತಾ॥ ಪಟಗುಪ್ಪೆಯವರಾದ ಇವರು ಈಗ ಮಹಾರಾಷ್ಟ್ರದ ಪವನಾರ ಬ್ರಹ್ಮವಿದ್ಯಾಮಂದಿರದಲ್ಲಿ ವಿನೋಬಾಜಿಯವರ ನಿಕಟ ವರ್ತಿಯಾಗಿ ಇದ್ದಾರೆ. ೧೬ ವರ್ಷಗಳಿಂದ ಖಾದಿ ಗ್ರಾಮೋದ್ಯೋಗ, ಸರ್ವೋದಯ ಕ್ಷೇತ್ರಗಳಲ್ಲಿ ದುಡಿಯುತ್ತಿದ್ದಾರೆ.

**ಆರ್. ಜಿ. ರಾಯಕರ :** ಶಿರಸಿಯ ಮಾರಿಕಾಂಬಾ ಹೈಸ್ಕೂಲಿನ ಕಲಾಶಿಕ್ಷಕ ರಾದ ಇವರು ಮುಂಬೈ ಜೆ. ಜೆ. ಸ್ಕೂಲ್‌ನಲ್ಲಿ ಪದವಿ ಶಿಕ್ಷಣ ಪಡೆದಿರುವರಲ್ಲದೆ ನಾಡಿನ ಗಣ್ಯ ಕಲಾವಿದರಾಗಿದ್ದಾರೆ. ಶಿರಸಿಯಲ್ಲಿ ಪ್ರಮುಖ ಸಾಮಾಜಿಕ ಕಾರ್ಯ ಕರ್ತರು ಮತ್ತು ರೊಟೇರಿಯನ್. ಅನೇಕ ಸೊವೆನೀರ್‌ಗಳನ್ನು ಕನ್ನಡದಲ್ಲಿ ಪ್ರಕಟಿಸಿದ ಕುಶಲ ಸಂಘಟಕ. ಸಾಹಿತ್ಯ, ಪ್ರವಾಸೋದ್ಯಮಗಳಲ್ಲಿ ಅಪಾರ ಆಸ್ಥೆ.

**ಗಣೇಶ ಚಂದ್ರಘಟ್ಟಿ :** ಸಿದ್ಧಾಪುರದ ಖ್ಯಾತ ಸ್ವಾತಂತ್ರ್ಯಹೋರಾಟ

ಗಾರರ ಮನೆತನದಲ್ಲಿ ಜನಿಸಿದ ಇವರು ೧೯೩೦ ಮತ್ತು ೧೯೪೨ರ ಚಳವಳಿಯಲ್ಲಿ ಪಾಲುಗೊಂಡು ಒಂಭತ್ತು ತಿಂಗಳು ಜೈಲಿನಲ್ಲಿ ಇದ್ದರು. ಖಾದಿ ಪ್ರಚಾರಕ್ಕಾಗಿ ದೀರ್ಘಕಾಲ ದುಡಿವವರಿದ್ದು ಈಗ ಶಿವಮೊಗ್ಗದಲ್ಲಿ "ಚಂದ್ರಘಟ್ಗಿ ಬ್ರದರ್ಸ್" ಎಂಬ ಯಂತ್ರಮಾರಾಟದ ಸಂಸ್ಥೆ ನಡೆಸುತ್ತಿರುವರು.

**ಪದ್ಮನಾಭ ಸುಬ್ರಾವ ಕಾಮತ್ :** ಕಾರವಾರದ ಗಣ್ಯ ವಕೀಲರು ಹಾಗೂ ಹಾಗೂ ಸ್ವಾತಂತ್ರ್ಯಯೋಧರು. ೧೯೨೧ರಲ್ಲಿ ಕಾಲೇಜು ತ್ಯಜಿಸಿ ಗುಜರಾಥ ವಿದ್ಯಾಪೀಠ ಸೇರಿದ ಇವರು ಆ ವಿದ್ಯಾಪೀಠದ ಪ್ರಥಮ ಸ್ನಾತಕರ ಗುಂಪಿಗೆ ಸೇರಿದವರು. ೧೯೪೪ರಿಂದ ೧೯೪೭ರ ವರೆಗೆ ಡಿ. ಸಿ. ಸಿ. ಉಪಾಧ್ಯಕ್ಷ ಹಾಗೂ ಟಿ. ಸಿ. ಸಿ. ಅಧ್ಯಕ್ಷ. ೧೯೫೨ರಲ್ಲಿ ಎಂ. ಎಲ್. ಸಿ. ಆಗಿ ಮುಂಬೈ ಹಾಗೂ ಕರ್ನಾಟಕದಲ್ಲಿ ಸೇವೆ ಸಲ್ಲಿಸಿದರು. ಕಾರವಾರವು ಕರ್ನಾಟಕದಲ್ಲಿಯೇ ಉಳಿಯ ಬೇಕೆಂದು ಮಹಾಜನ್ ಆಯೋಗದ ಮುಂದೆ ಸಮರ್ಥವಾಗಿ ವಾದಿಸಿದವರು.

**ಜಿ. ಎನ್. ದೇಸಾಯಿ :** ಶಿರಸಿಯ ಜವಳಿ ವ್ಯಾಪಾರಿಗಳು. ೧೯೪೨ರ ಚಳವಳಿಯಲ್ಲಿ ಜೈಲು ಕಂಡವರು. ಶಿರಸಿ ತಾ॥ ಸ್ವಾತಂತ್ರ್ಯಯೋಧರ ಸಂಘದ ಅಧ್ಯಕ್ಷ.

**ಎಸ್. ಯು. ರಾಮಚಂದ್ರರಾವ್ :** ಎಂ. ಎ. ಪದವೀಧರರಾದ ಇವರು ದಕ್ಷಿಣ ಕನ್ನಡ ಜಿಲ್ಲೆಯ ಗಣ್ಯ ವಿಧಾಯಕ ಕಾರ್ಯಕರ್ತರಾಗಿದ್ದಾರೆ.

**ಪುಟ್ಟೇಗೌಡ :** ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಇತಿಹಾಸ ವಿಭಾಗದಲ್ಲಿ ಸಂಶೋಧನ ಸಹಾಯಕ ಹಾಗೂ ಪಿ. ಎಚ್. ಡಿ. ವಿದ್ಯಾರ್ಥಿ. ಎಂ. ಎ. ಪದವೀಧರ ರಾದ ಇವರು ಸ್ವಾತಂತ್ರ್ಯ ಸಂಗ್ರಾಮದ ಕುರಿತೇ ಸಂಶೋಧನೆ ನಡೆಸುತ್ತಿದ್ದಾರೆ.

**ಕಮಲ ಸದಾನಂದ ನಾಯಕ :** ಕಾರವಾರದಲ್ಲಿ ಜನಿಸಿದ ಇವರು ಬೆಳಗಾವಿ ಜಿಲ್ಲೆಯ ದಡ್ಡಿಯಲ್ಲಿ ನೆಲೆಸಿದ್ದಾರೆ. ನಾಯಕ ಮಾಸ್ತರರ ನಿಕಟವರ್ತಿ ಕಾರ್ಯಕರ್ತೆ. ಇವರ ಪತಿ ಸದಾನಂದ ನಾಯಕ ಗಣ್ಯ ವಿಧಾಯಕ ಕಾರ್ಯಕರ್ತರು.

**ರಾಮಚಂದ್ರ ಪೈ ಮೂಡ್ಲಗಿರಿ :** ಬಿಳಗಿಯಲ್ಲಿ ನೆಲೆಸಿರುವ ಆ ಊರ ಓರ್ವ ಗಣ್ಯ ಸಾಮಾಜಿಕ ಕಾರ್ಯಕರ್ತರು ಮತ್ತು ಸ್ವಾತಂತ್ರ್ಯಯೋಧರು. ಸ್ವಾತಂತ್ರ್ಯ ಹೋರಾಟದಲ್ಲಿ ಅನೇಕ ಬಾರಿ ಜೈಲು ಕಂಡಿದ್ದಾರೆ.

**ಪ್ರೊ॥ ಎಂ. ಎಂ. ರಾಮರಾವ್ :** ಮುಂಬೈಯ ಓರ್ವ ಗಣ್ಯಯಂತ್ರೋ ದ್ಯಮಿ. ವಿಜ್ಞಾನ ಪದವೀಧರರಾಗಿ ಬೆಂಗಳೂರಿನ ಇಂಡಿಯನ್ ಇನ್‌ಸ್ಟಿಟ್ಯೂಟ್

ಆಫ್ ಸಾಯನ್ಸ್‌ನಲ್ಲಿ ಸಂಶೋಧಕ ಹಾಗೂ ಮಂಗಳೂರಿನ ಸೆಂಟ್ ಎಲೋಶಿಯಸ್ ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದರು. ೧೯೩೦ರ ಚಳುವಳಿಯಲ್ಲಿ ಮಂಗಳೂರಲ್ಲಿ ಪೋಲೀಸರ ಅಮಾನುಷ ಲಾಠಿ ಏಟಿಗೆ ಒಳಗಾದವರು. ಸಿದ್ದಾಪುರ ತಾ॥ ಕರನಿರಾಕರಣದ ಸಂಘಟನೆಗೆ ದುಡಿದವರು. ಮುಂಬೈಯಲ್ಲಿ ಶ್ರೀ ಆರ್. ಆರ್. ಪಡುಬಿದ್ರಿಯವರ ಜೊತೆ ಕೆಲಸಮಾಡಿದ ನಿಷ್ಠಾವಂತ ಗಾಂಧೀವಾದಿ.

**ಡಾ॥ ಜಿ. ಪಿ. ನಾಯಕ :** ಕುಮಟಾದ ಹೆರವಟ್ಟಾದಲ್ಲಿ ವೃತ್ತಿನಿರತರಾಗಿರುವ ವೈದ್ಯರು. ಸ್ವಾತಂತ್ರ್ಯಯೋಧರು ಹಾಗೂ ವಿಧಾಯಕ ಕಾರ್ಯಕರ್ತರಾಗಿದ್ದಾರೆ.

**ಆರ್. ಎಸ್. ಕೃಷ್ಣಮೂರ್ತಿ :** ಶಿವಮೊಗ್ಗ ಊರವರಾದ ಇವರು ಈಗ ಅಂಕೋಲಾ ಗ್ರಾಮಸೇವಾ ಸಮಿತಿಯಲ್ಲಿ ನೌಕರಿಗೆ ಇದ್ದಾರೆ. ಸರ್ವೋದಯ ಕಾರ್ಯಕರ್ತರೂ ಆಗಿದ್ದರು.

**ಶಾಂತಾರಾಮ ರಾಮಚಂದ್ರ ಭಟ್ಕಳಕರ :** ಸಿದ್ದಾಪುರದಲ್ಲಿ ನೆಲೆಸಿರುವ ಗಣ್ಯ ಜ್ಞಾನವೃದ್ಧ ಗೃಹಸ್ಥರು

**ಮಹಾದೇವ ಗಣಪತಿ ಶಾಸ್ತ್ರಿ :** ಈಗ ಶಿರಸಿಯಲ್ಲಿ ನೆಲೆಸಿರುವ ಸ್ವಾದಿ ಊರಿನ ಕೃಷಿಕರು. ಸ್ವಾತಂತ್ರ್ಯಯೋಧರೂ ಕೂಡ.

**ಕೆ. ಎಸ್. ನಾರಾಯಣಸ್ವಾಮಿ :** ಮೈಸೂರಿನಲ್ಲಿ ಜನಿಸಿದವರಾದ ಇವರು ಬಿ. ಎ. ಪದವೀಧರರು. ಗಾಂಧಿ ಗ್ರಂಥಮಾಲೆಯ ಸಂಪಾದಕ ಮಂಡಳಿಯ ಸದಸ್ಯರಾಗಿರುವರಲ್ಲದೆ ಬೆಂಗಳೂರಿನಲ್ಲಿ ಗಾಂಧೀ ಶಾಂತಿ ಪ್ರತಿಷ್ಠಾನದ ಆಜೀವ ಸದಸ್ಯರು ಹಾಗೂ ಪ್ರಮುಖ ಕಾರ್ಯಕರ್ತರಾಗಿದ್ದಾರೆ. ಸ್ವಾತಂತ್ರ್ಯ ಚಳವಳಿಯಲ್ಲಿ ಪಾಲುಗೊಂಡವರಿದ್ದು "ಸತ್ಯಾಗ್ರಹಿಯ] ಜೈತ್ರಯಾತ್ರೆ" ಎಂಬ ಇವರ ಪುಸ್ತಕ ಪ್ರಕಟವೂ ಆಗಿತ್ತು.

**ಕೆ. ಎ. ವೆಂಕಟರಾಮಯ್ಯ :** ಸಿದ್ದಾಪುರದಲ್ಲಿ ನಡೆದ ಕರನಿರಾಕರಣ ಚಳವಳಿಯ ಯಶಸ್ವೀ ಸಂಘಟಕರಾಗಿ 'ಸರ್ದಾರ್' ಬಿರುದಾಂಕಿತರಾದ ಇವರು ಈಗ ಬೆಂಗಳೂರಿನಲ್ಲಿ ಗಾಂಧೀ ಸ್ಮಾರಕನಿಧಿಯ ಕರ್ನಾಟಕ ಶಾಖಾ ಕಾರ್ಯದರ್ಶಿ ಆಗಿದ್ದಾರೆ. ಇವರೂ ಇವರ ಪತ್ನಿ ಶ್ರೀಮತಿ ಗೌರಮ್ಮನವರೂ ಸ್ವಾತಂತ್ರ್ಯ ಹೋರಾಟದಲ್ಲಿ ವಹಿಸಿದ ಪಾತ್ರ ಸ್ವರ್ಣಾಂಕಿತವಾಗಬೇಕಾದದ್ದು. ಸೇವಾದಳದ ಗಣ್ಯ ಕಾರ್ಯಕರ್ತರಾಗಿದ್ದು ಅನೇಕ ವಿಧಾಯಕ ಕಾರ್ಯಗಳಲ್ಲಿ ಹಗಲಿರುಳೂ ದುಡಿದ ಕುಶಲ ಸಂಘಟಕರು.

**ದಿನಕರ ದೇಸಾಯಿ :** ಆಧುನಿಕ ಕನ್ನಡಸಾಹಿತ್ಯದಲ್ಲಿ ತಮ್ಮ ಚಟುವಟಿಕೆಗಳಿಂದ "ಸರ್ವಜ್ಞ"ನಂತೆ ಖ್ಯಾತರಾದ ಇವರು ಸರ್ವೆಂಟ್ಸ್ ಆಫ್ ಇಂಡಿಯ ಸೊಸೈಟಿಯ ಅಜೀವ ಸದಸ್ಯರು, ಗಣ್ಯ ಶಿಕ್ಷಣ ಸಂಸ್ಥೆ ಕೆನರಾ ವೆಲ್‌ಫೆರ್ ಟ್ರಸ್ಟ್‌ನ ಪದಾಧಿಕಾರಿಗಳು ಹಾಗೂ ಉ. ಕ. ಜಿಲ್ಲೆಯ ಗಣ್ಯ ಸಾಮಾಜಿಕ ಕಾರ್ಯಕರ್ತರು. ಇತಿಹಾಸ, ಸಾಹಿತ್ಯ, ಶಿಕ್ಷಣಕ್ಷೇತ್ರಗಳ ಗಣ್ಯವ್ಯಕ್ತಿ. ಲೋಕಸಭಾ ಸದಸ್ಯರೂ ಆಗಿದ್ದರು.

**ಸ್ವಾಮಿರಾವ ಕುಲಕರ್ಣಿ :** ಬಿಜಾಪುರ ಜಿಲ್ಲೆಯವರಾದ ಇವರು ವಿದ್ಯಾರ್ಥಿ ಇದ್ದಾಗಲೇ ಶಿರಸಿ ತಾ॥ನಲ್ಲಿ ಸ್ವಾತಂತ್ರ್ಯ ಹೋರಾಟದಲ್ಲಿ ಪಾಲುಗೊಂಡು (೧೯೩೦–೩೨) ಜೈಲುಕಂಡವರು. ಕನ್ನಡದಲ್ಲಿ ಒಳ್ಳೆಯ ಕವಿ ಮತ್ತು ಬರಹಗಾರರು. ಆಕಾಶವಾಣಿಯಲ್ಲಿ ಉನ್ನತ ಹುದ್ದೆಯಲ್ಲಿದ್ದು ಇತ್ತೀಚೆಗೆ ನಿವೃತ್ತರಾಗಿ ಬೆಂಗಳೂರಲ್ಲಿ ನೆಲೆಸಿದ್ದಾರೆ.

**ವರದದೇಶಿಕಾಚಾರ್ಯ ರಂಗಪ್ರಿಯ :** ಬೆಂಗಳೂರಿನ ನ್ಯಾಷನಲ್ ಕಾಲೇಜಿನಲ್ಲಿ ಸಂಸ್ಕೃತ ಪ್ರಾಧ್ಯಾಪಕರಾಗಿರುವ ಇವರು ಗಣ್ಯ ಸಂಸ್ಕೃತ ವಿದ್ವಾಂಸರ ಮನೆತನಕ್ಕೆ ಸೇರಿದವರು. ಕನ್ನಡದಲ್ಲಿ ಒಳ್ಳೆಯ ಬರಹಗಾರರು. ಅನೇಕ ಧಾರ್ಮಿಕ ಚಟುವಟಿಕೆಗಳಲ್ಲಿ ಆಸಕ್ತಿಯುಳ್ಳ ವ್ಯಕ್ತಿ.

**ರಾಘವೇಂದ್ರ ವಾಸುದೇವ ಭಟ್ :** ಶಿರಸಿಯ ಸ್ವಾತಂತ್ರ್ಯಯೋಧರು. ಸೇವಾದಳದ ಕಾರ್ಯಕರ್ತರಾಗಿದ್ದವರು. ಸಾಮಾಜಿಕ ಕಾರ್ಯಕರ್ತರು. ೧೯೪೨ರಲ್ಲಿ ಜೈಲುಕಂಡಿದ್ದಾರೆ.

—ಸಂಪಾದಕ

# STRUGGLES OF A WORKER

By M. K. GANDHI

"I am conducting with the co-operation of some comrades, an ashram; its object is to so train ourselves as to be transformed into ideal peasants, so that we may be able to completely identify ourselves with village people and village society, and thus be able to serve them by being actually of them. With this end in view, agriculture has been taken up as the chief means of support with spinning and weaving as supplementary.

After reaping of our main crop, i.e., paddy, in January last, the ashram has now taken to growing secondary crops such as sugarcane, udad and vegetables. From June last, that is from the date the ashram was started, till today nearly 260,000 yards of yarn of average 10 counts have been spun by the ashram inmates, and from March last, a loom has been set up and weaving begun. Carding is also done in the ashram. Thus the ashram has spun yarn sufficient to supply its modest clothing needs, and it is hoped that all the yarn will now be woven in the ashram itself.

Thus the ashram has been, during its first year, fairly successful in approaching the ideal of a self-supporting peasant family which supplies itself with almost all the necessaries of life by its own labour and does not allow itself to be in the least exploited by the town.

From the beginning the ashram has been used to grinding its own flour. It has never made use of sugar. Now for the last three months or so, it is using exclusively unpolished rice, prepared in the ashram by its inmates out of the ashram paddy.

While starting the ashraw, it had been eonceived that along with the working out of the ideal of ourselves living a self-supporting peasant life we should also serve the villagers by doing Harijan work, by introducing spinning and in other possible ways. But we have been entirely disappointed in this respect, for we have not been as yet able to find a suitable locality for the ashram. In the locality wherein the ashram is at present situated, the hamlets consist of one or two houses; and these hamlets are separated from one another by a distance of from half a mile to one mile.

Another thing that has seriously impeded the progress of the ashram is that I committed grave blunders, as I now find them to be, in the matter of diet. In what now seems to be a mere over-enthusiasm for the ideal of poverty, the standard of diet was kept very low. The ashram, for instance, did not even use vegetables regularly but only occasionally, because it had not yet grown its own vegetables. After two months or so, the mistake was rectified. Milk and milk products were considered a luxury, at least not consistent with a poor man's dietary, and hence not used. But it is only a week now that we have bought a cow and began to to take milk etc ; but up till that time we contented with using cocoanut oil as a substitute for ghee. It should also be noted that the staple food in this district is rice. All this has seriously crippled the health of the inmates. The ashram started with twelve inmates; we are now only five. Moreover malaria has been telling upon the health of the nmates. This being a forest taluka is so to say the home of malaria, at least so far as the greater part of it is concerned.

The ashram has up till now stuck to the ideal of maintaining itself by manual labour. While this ideal, if intelligently worked out, must tend to strengthen our moral fibre and steady us in a life of principles, it has also resulted in keeping a few of our co-workers away from the ashram. The problem is as to how, while keeping the ideal of bread

labour intact, to draw in such workers as mentioned above within the orbit of the ashram

Friends and sympathizers as well as critics set this our insistence on the Tolstoyan idea of bread labour in opposition to the ideal of social service, and argue that the ashram has thus deprived society of the benefits of the many services that the ashram workers would have been otherwise in a position to render to it. How and when, if at all, can one be justified in compromising the principle of bread labour for the sake of rendering 'social service?' Is not, most often, the conflict between 'being' and 'doing' only apparent and superficial, while in truth, 'being' is 'doing' in the real sense? When can this principle of bread labour be said to be carried to the extreme, or be said to have been followed in the letter but broken in the spirit?

Our expenses during eight months for seven inmates on an average have been:

| | | | |
|---|---|---|---|
| Meals | .... .... | Rs. | 171-8-9 |
| Clothing | .... .... | Rs. | 16-9-9 |
| Lamp | .... .... | Rs. | 8-10-0 |
| Post | .... .... | Rs. | 3-6-9 |
| Miscellaneous | .... | Rs. | 6-3-5 |
| Vessels | .... .... | Rs. | 3-8-9 |
| Medicine | .... .... | Rs. | 7-12-3 |
| Papers (Harijan) | .... | Rs. | 3-14-0 |
| Travelling | .... ... | Rs. | 10-2-3 |
| | Total | Rs. | 231-11-11 |

From this it will be found that the board per head per month has been Rs. 3 and other expenses including clothing Rs. 1 per head per month."

This is from a letter addressed to Sri Kishorelal Mashruwala by a highly educated selfless worker. It depicts the struggles of a sincere worker and is likely to help all who are trying to lead a life of service.

The effort is noble. The writer and his co-workers do not hesitate to own and mend mistakes when they discover any.

I do not know how Shri Kishorelal has answered the queries put by his correspondent. must try to answer them in order to help the general reader who is interested in the questions of the type that puzzle the writer of the letter.

There seems to be some confusion about the principle of bread labour. It is never opposed to social service. Intelligent bread labour is any day the highest form of social service. For what can be better than that a man should by his personal labour add to the useful wealth of the country? 'Being' is 'doing'.

The adjuctive 'intelligent' has been prefixed to 'labour' in order to show that labour to be social service must have that definit purpose behind it. Otherwise every labourer can be said to render social service. He does in a way but what is meant here is something much more than that. A person who labours for the general good of all serves society and is worthy of his hire. Therefore, such bread labour is not different from social service. What the vast mass of mankind does for self or at best for family, a social servant does for general good. These seven members today find that they have hardly time left for service other than that of slaving for their daily bread. This need not be so if they were proficient in their work. In fact they are not As field labourers, they are no match for the ordinary labourers As artisans too they are novices. Every worker, thank God, now knows that with intelligent use of his tools a spinner can easily double his output in a given time. That means doubling the income from the wheel. This is true of most things. In agriculture, the field for development with the same tools is so vast that unless nature interferes, a farmer can by the use of his intelligence any day quadruple his income, working the same number of hours per day. This

means that for the same amount of income he need not labour so much as he is now doing These workers can therefore, when they have acquired proficiency, earn their bread in much less time than they need now, and will have energy set free for special Harijan or other service. The problem becomes complicated for householders who have many calls on their purses, but a self-denying worker whose needs amounts to Rs. 4 per month has any day ample time at his disposal for work beyond labour that would bring him Rs. 4 per month.

But will three rupees per month needed out of four for food give a person enough to feed himself? If Dr Tilak's figure for Bombay, i e. Rs. 5 per month, is good, Rs. 3 for village life is certainly good. And when I add my own experience to Dr: Tilak's prescription there is no difficulty. Dr. Tilak erases powdered menu from the village menu. But he says there is no escape from milk. The inmates were wrong in eliminating milk from their dietary. It is true that millions get not a drop of milk. But they do not get many other things without which we dare not do if we are to live to serve. We must therefore take those bare necessaries which we have to strive every villager to produce for himself. Whole cereal, whether wheat, rice, bajri, juwar or the like, green edible leaves uncooked, milk, and any village fruit when in season such as mango, jamroot, jamun, ber etc., are indispensable for healthy life. The prince among edible leaves is perhaps neem leaf, to be had for the picking everywhere in India; and there are many edible grasses of which we have no knowledge. And tamarind fruit which is also obtainable everywhere is not to be despsied. There is, however, a prejudice against tamarind which is difficult to understand. I have been using it liberally in the place of the expensive lemon with the greatest advantage. Diet reform is a limitless field of research, fraught with the greatest consequences for the world and more especially for the famishing millions of India. It means both health and

wealth which according to Ruskin are one and the sa
thing. The members of the little ashram are right in thinki
that they will do the greatest social service by living rig
all along the line. They will infect their surroundings who
limit may in course of time be the whole of India and th
the Universe. In this service the welfare of one is t
welfare of all.

(Harijan, 1-6-19

# ಶ್ರದ್ಧಾಂಜಲಿ

ರಾಘವೇಂದ್ರ ವಾಸುದೇವ ಭಟ್

ಬೆಳಗಿ ಬೆಳಗಿತು ನಮ್ಮ ಅಮರ ಜ್ಯೋತೀ ।
ಭಾರತಾಂಬೆಯ ಸುತನ ಆತ್ಮ ಜ್ಯೋತೀ ॥
ಬಡ ಭಕ್ತರೆನಿಸಿದ ಮನೆತನದಿ ಜನಿಸಿದ ।
ತಿಮ್ಮಪ್ಪ ನಾಯಕರ ಆತ್ಮ ಜ್ಯೋತೀ ॥

ಸಿದ್ದಾಪುರದಿ ಜನ್ಮತಾಳಿದಾ ಕುವರನು ।
ವಿದ್ವಾಂಸನಾಗಿ ಶಿರಸಿಯಲಿ ನಿಂದು ॥
ಭಾರತಾಂಬೆಯ ಕೈಯ್ಯ ಸಂಕೋಲೆಯನು ಮುರಿದು ।
ಅಂಕೋಲೆಯಲಿ ನಿಂದು ಬೆಳಗಿದಾ ಜ್ಯೋತೀ ॥

ಗಾಂಧಿ ಮಹಾತ್ಮರಾ ಆತ್ಮೀಯ ಸುತನಾಗಿ ।
ತಾತ್ತ್ವಿಕಾಚಾರದೊಳು ಚ್ಯುತಿ ಇಲ್ಲದೇ ॥
ಸತ್ಯ ಅಹಿಂಸಾ ಪಥದಲ್ಲಿ ರತನಾಗಿ ।
ಆಧ್ಯಾತ್ಮ ಮಾರ್ಗವನು ಕ್ರಮಿಸಿದಾ ಜ್ಯೋತೀ ॥

ಇಹದಲ್ಲಿ ಯಾರಿಂದ ಏನೊಂದು ಬೇಡದಲೆ ।
ತೆರೆಯ ಮರೆಯಲಿ ನಿಂದು ಸೇವೆಗೈದು ॥
ದೇಶೋದ್ಧಾರಕನಾಗಿ ಸರ್ವೋದಯಕ್ಕಾಗಿ।
ದೇಹ ಸವಿಸುತಲಿಂದು ಅಮರನಾದೇ ॥

ಸ್ವಾತಂತ್ರ್ಯಯೋಧನೇ ರಾಘವನು ವಂದಿಪನು ।
ಅಂಜಲಿಯ ಸ್ವೀಕರಿಸಿ ಹರಸಯ್ಯ ಎಮಗೆ ॥




ದಿ॥ ನಾಯಕ ಮಾಸ್ತರರು ಸ್ಥಾಪಿಸಿದ **ಉತ್ತರ ಕನ್ನಡ ಜಿಲ್ಲಾ ಗ್ರಾಮಸೇವಾ ಸಮಿತಿ** ಈ ಪುಸ್ತಕದ ಪ್ರಕಾಶನಕಾರ್ಯ ಕೈಕೊಂಡಿದೆ. ಜಿಲ್ಲೆಯ ಗ್ರಾಮಾಂತರ ಪ್ರದೇಶಗಳಲ್ಲಿ ಒಟ್ಟು ೧೦೦೦ ಜನಕ್ಕೆ ಪ್ರತ್ಯಕ್ಷ ಹಾಗೂ ಅಪ್ರತ್ಯಕ್ಷವಾಗಿ ಸಮಿತಿ ಉದ್ಯೋಗ ಒದಗಿಸಿದೆ. ಇವರಲ್ಲಿ ಹೆಚ್ಚಿನವರು ಮಹಿಳೆಯರು. ಇದರ ಉತ್ಪಾದನಾ ಕೇಂದ್ರಗಳು ಬಂಕಿಕೊಡ್ಲ, ಗುಡೆಅಂಗಡಿ, ಹೆಗ್ಡೆ, ಬಾಡ, ಕೋಡಕಣಿ, ಮುಂಡಗೋಡದ ಟಿಬೆಟನ್ ಕಾಲನಿ ಮುಂತಾದ ಕಡೆ ಇವೆ.

ಖಾದಿ, ಸಾಬೂನು, ಜೇನುತುಪ್ಪ, ಚರ್ಮದ ಸಾಮಾನು, ಮರದ ಸಾಮಾನುಗಳನ್ನು ಸಮಿತಿ ಉತ್ಪಾದಿಸುತ್ತಿದ್ದು ಇವಕ್ಕೆ ವಿದೇಶಗಳಲ್ಲೂ ಬೇಡಿಕೆ ಇದೆ.

ಸಮಿತಿಯ ಖಾದಿ ಉತ್ಪಾದನೆ ೧೯೭೦-೭೧ರಲ್ಲಿ ೧,೪೪,೩೬೩ ರೂ. ಗಳದಿದ್ದುದು ೧೭೬೪-೭೫ರಲ್ಲಿ ೫,೦೭,೦೧೮ರೂ. ಗಳದಾಗಿದೆ.

ಗ್ರಾಮಾಂತರ ಪ್ರದೇಶಗಳಲ್ಲಿ ದಿನಕ್ಕೆ ಸರಾಸರಿ ರೂ. ೩ರಿಂದ ೭ರ ವರೆಗೆ ಸಮಿತಿಯ ಕೆಲಸಗಾರರು ಕೂಲಿ ಪಡೆಯುತ್ತಾರೆ. ಗ್ರಾಮೀಣ ನಿರುದ್ಯೋಗ ಸಮಸ್ಯೆಗೆ ಇದು ದೊಡ್ಡ ಪರಿಹಾರ. ಬಡಜನರಿಗೆ, ನಿರ್ಗತಿಕರಿಗೆ ಒಂದು ಆಸರೆ.

**ಉತ್ತರ ಕನ್ನಡ ಜಿಲ್ಲಾ ಗ್ರಾಮಸೇವಾ ಸಮಿತಿ**
ಅಂಕೋಲಾ, ಉತ್ತರ ಕನ್ನಡ

---

ಬೆಲೆ : ರೂ. ೬/-